

ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಬಿ. ಬಸವಲಿಂಗಪ್ಪ



ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಬಿ.ಬಸವಲಿಂಗಪ್ಪ


**ಡಾ. ಎಸ್. ನಾಗರಾಜು** ಎಂ.ಎ., ಪಿಎಚ್.ಡಿ
ಸಹಾಯಕ ಪ್ರಾಧ್ಯಾಪಕರು
ಪ್ರಥಮದರ್ಜೆ ಕಾಲೇಜು,
ಶನಿವಾರಸಂತೆ, ಕೊಡಗು.



ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

# ಬಿ. ಬಸವಲಿಂಗಪ್ಪ

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರೆಹ ಮಾಲಿಕೆ

ಲೇಖಕರು: ಡಾ: ಎಸ್. ನಾಗರಾಜು, ಎಂ.ಎ., ಪಿ.ಹೆಚ್.ಡಿ.,
ಸಹಾಯಕರ ಪ್ರಾಧ್ಯಾಪಕರು, ಪ್ರಥಮ ದರ್ಜೆ ಕಾಲೇಜು, ಶನಿವಾರ ಸಂತೆ, ಕೊಡಗು

ಪ್ರಕಾಶನ
ಗ್ರಂಥಾಲಯ ಸಮಿತಿ, ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು – **560 001**
ಪುಟ : x + 263    ಬೆಲೆ: ರೂ. 30/–
ಸಭಾಪತಿಗಳು : ಕರ್ನಾಟಕ ವಿಧಾನ ಪರಿಷತ್ತು
ಸಭಾಧ್ಯಕ್ಷರು : ಕರ್ನಾಟಕ ವಿಧಾನ ಸಭೆ
ಮೊದಲ ಮುದ್ರಣ : 2016 ಪ್ರತಿಗಳು : 700
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# B. BASAVALINGAPPA

**Eminent Parliamentarian Series**

**Written by Dr. S.Nagaraju, M.A., Ph.D**
**Assistant Professor of Political Science,**
First Grade College, Shanivarasanthee, Kodagu

Published by
Karnataka Legislature Library Committee
Vidhana Soudha, Bengaluru - 560 001
Page: x + 263 Price: Rs. 30-00/-
Chairman Karnataka Legislative Council
& Speaker Karnataka Legislative Assembly
First Edition : 2016 Copies : 700
Printed & Designed by
Government Press, Bengaluru.

ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ

**2012–2013**

ಅಧ್ಯಕ್ಷರು

ಶ್ರೀ ಡಿ.ಹೆಚ್. ಶಂಕರಮೂರ್ತಿ

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

ಕೆ.ಜಿ. ಬೋಪಯ್ಯ, ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

ನೆ.ಲ. ನರೇಂದ್ರಬಾಬು, ವಿಧಾನ ಸಭಾ ಸದಸ್ಯರು

ಕಿಮ್ಮನೆ ರತ್ನಾಕರ್, ವಿಧಾನ ಸಭಾ ಸದಸ್ಯರು

ಎನ್.ಎ. ಹ್ಯಾರೀಸ್, ವಿಧಾನ ಸಭಾ ಸದಸ್ಯರು

ಜಮೀರ್ ಅಹ್ಮದ್ ಖಾನ್, ವಿಧಾನ ಸಭಾ ಸದಸ್ಯರು

ಡಾ. ಡಿ. ಹೇಮಚಂದ್ರ ಸಾಗರ್, ವಿಧಾನ ಸಭಾ ಸದಸ್ಯರು

ಡಾ: ಎಸ್.ಆರ್. ಲೀಲಾ, ವಿಧಾನ ಪರಿಷತ್ ಸದಸ್ಯರು

ಪ್ರೊ: ಪಿ.ವಿ. ಕೃಷ್ಣಭಟ್ಟ, ವಿಧಾನ ಪರಿಷತ್ ಸದಸ್ಯರು

ಸಿದ್ದರಾಜು, ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ ವರ್ಗ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಶ್ರೀ ಪಿ. ಓಂಪ್ರಕಾಶ | ಕಾರ್ಯದರ್ಶಿ |
| ಎಂ. ಮಂಜುನಾಥ | ಅಪರ ಕಾರ್ಯದರ್ಶಿ |
| ಎನ್. ಗುಣಶೇಖರನ್ | ನಿರ್ದೇಶಕರು |
| ಶ್ರೀಮತಿ ಅನಸೂಯ ಎನ್. ದೇವಗಿರಿ | ಮುಖ್ಯ ಗ್ರಂಥಪಾಲಕರು |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಶ್ರೀ ವಿ. ಶ್ರೀಶ್ | ಕಾರ್ಯದರ್ಶಿ |
| ಶ್ರೀ ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

# ಲೇಖಕರ ಮಾತು

ಕರ್ನಾಟಕದ ರಾಜಕಾರಣದಲ್ಲಿ ಬಿ. ಬಸವಲಿಂಗಪ್ಪ ಅವರು ವಿಭಿನ್ನ ಹಾಗೂ ವಿಶಿಷ್ಟ ಪ್ರಾಮುಖ್ಯತೆ ಪಡೆದಿರುತ್ತಾರೆ. ಇವರ ಕಾಳಜಿ, ದಿಟ್ಟತನ, ಧೀರ ನಿಲುವು ಇಂದಿಗೂ ಪ್ರಸ್ತುತ, ರಾಜಕೀಯ ಬದುಕಿನ ಸಂದರ್ಭದಲ್ಲಿ ಅವರು ಕಾಂಗ್ರೆಸ್‌ನಲ್ಲಿದ್ದರೂ ಅಂಬೇಡ್ಕರ್ ಅವರ ಚಿಂತನೆಗಳ ದಟ್ಟ ಪ್ರಭಾವ ಅವರು ಸದಾ ಎಚ್ಚರಿಕೆಯಿಂದ ಇರಲು ಕಾರಣವಾಗಿದೆ. ಈ ಕಾರಣದಿಂದಲೇ ದಲಿತ ವಿರೋಧಿ ನೀತಿ ಪರವಾಗಿ ಎಂದಿಗೂ ರಾಜಿಮಾಡಿಕೊಳ್ಳದ ಗುಣವನ್ನು ಬೆಳಸಿಕೊಳ್ಳಲು ಸಾಧ್ಯವಾಗಿಸಿದೆ. ಬಸವಲಿಂಗಪ್ಪ ಅವರ ಸಾಮಾಜಿಕ ಬದ್ಧತೆಗೆ ಅಂಬೇಡ್ಕರ್ ಅವರು ಮಾತ್ರವಲ್ಲದೆ ಬುದ್ಧ ಮತ್ತು ಬಸವಣ್ಣ ಅವರ ಬದುಕು ಹಾಗೂ ಸಮಾಜವಾದಿ ಚಿಂತನೆಗಳೂ ಮುಖ್ಯ ಕಾರಣ.

ಜನಪರವಾದ ಚಳುವಳಿಯನ್ನು ಬಸವಲಿಂಗಪ್ಪ ಅವರು ಮಾಡುವುದರ ಮೂಲಕವೇ ಒಂದು ಹೊಸ ಸಮಾಜವನ್ನು ನಿರ್ಮಾಣ ಮಾಡಲಿಕ್ಕೆ ಪ್ರಯತ್ನಪಟ್ಟರು. ಜಾತಿವಾದಿಗಳ, ಕೋಮುವಾದಿಗಳ ಮತ್ತು ಬಂಡವಾಳಶಾಹಿಗಳ ಹುನ್ನಾರವನ್ನು ಪ್ರಗತಿಪರ ಚಳುವಳಿಗಳು ವಿಫಲಗೊಳಿಸಬೇಕು ಎಂದು ಕರೆಕೊಟ್ಟರು. ಅವರು ರಾಜಕೀಯಕ್ಕೆ ಪ್ರವೇಶಿಸುವುದಕ್ಕಿಂತ ಹಿಂದೆ ಕರ್ನಾಟಕದಲ್ಲಿ ದಲಿತ ಜನಾಂಗದ ನಾಯಕತ್ವ ಪರಿಪೂರ್ಣತೆಯನ್ನು ಕಂಡಿರಲಿಲ್ಲ. ದಲಿತ ಜನಾಂಗದಲ್ಲಿ ಹುಟ್ಟಿ ಅವರು ಈ ರಾಜ್ಯಕ್ಕೆ ಕೊಟ್ಟ ಕೊಡುಗೆ ಅನನ್ಯ. ಮಲಹೊರುವ ಅಮಾನವೀಯ ಪದ್ಧತಿಯ ವಿರುದ್ಧ ಹೋರಾಡಿ ರದ್ದು ಮಾಡಿದ್ದು ಒಂದು ಐತಿಹಾಸಿಕ ಮೈಲುಗಲ್ಲು, ಶೋಷಿತ ಸಮುದಾಯಗಳಿಗೆ ಸೂರೊಂದನ್ನು ಕಲ್ಪಿಸುವಲ್ಲಿ ಮಾಡಿದ ಶ್ರಮ ಮರೆಯಲಾಗದು, ಡಿ.ದೇವರಾಜ ಅರಸು ಅವರ ನಾಯಕತ್ವದಲ್ಲಿ ಉಳುವವನೇ ಭೂಮಿಯ ಒಡೆಯನನ್ನಾಗಿಸಿದ್ದು ಶ್ರಮಿಕರಲ್ಲಿ ನೆಮ್ಮದಿಯನ್ನು ತಂದಿತು. ಇವರು ಅರ್ಥಪೂರ್ಣವಾದ ಹೋರಾಟವನ್ನು ಮಾಡುವುದರ ಮೂಲಕ ದೀನ–ದಲಿತ–ಹಿಂದುಳಿದ ಹಾಗೂ ತುಳಿತಕ್ಕೊಳಗಾದ ಜನಾಂಗಗಳ ಚೈತನ್ಯದ ಚಿಲುಮೆಯಾಗಿ ರಾಜಕೀಯದಲ್ಲಿ ಹೊರಹೊಮ್ಮಿದರು. ತಮ್ಮ ಇಡೀ ರಾಜಕೀಯ ಜೀವನದಲ್ಲಿ ದಲಿತರಿಗೆ ಆತ್ಮವಿಶ್ವಾಸವನ್ನು ಮೂಡಿಸಿದ ಅವರದು ಬಹುಮುಖೀ ವ್ಯಕ್ತಿತ್ವ.

ಇಂತಹ ಮೇರು ವ್ಯಕ್ತಿತ್ವ ಹೊಂದಿರುವ ಬಿ. ಬಸವಲಿಂಗಪ್ಪ ಅವರ ಬಗ್ಗೆ ಈ ಕಿರು ಹೊತ್ತಿಗೆಯನ್ನು ಸಿದ್ದಪಡಿಸುವ ಜವಾಬ್ದಾರಿಯನ್ನು ಗ್ರಂಥಾಲಯ ಸಮಿತಿಯು ನನಗೆ ವಹಿಸಿದ್ದು ಬಹಳ ಹೆಮ್ಮೆಯ ವಿಷಯವಾಗಿದೆ. ಬಿ.ಬಸವಲಿಂಗಪ್ಪ ಅವರ ಬದುಕು, ರಾಜಕೀಯ ಸಂಘಟನೆ ಮತ್ತು ವಿಧಾನ ಸಭೆಯಲ್ಲಿ ವಿವಿಧ ವಿಷಯಗಳ ಬಗ್ಗೆ ಅವರು ಮಾಡಿರುವ ಚರ್ಚೆ ಇಂದಿಗೂ ಮುಖ್ಯವಾದವುಗಳಾಗಿವೆ. ಇದರಿಂದ ಹೊಸ ಪೀಳಿಗೆಯ ಶಾಸಕರುಗಳಿಗೆ ಮತ್ತು ಓದುಗರಿಗೆ ಉಪಯುಕ್ತವಾಗುತ್ತದೆಂದು ಭಾವಿಸಿದ್ದೇನೆ. ಅಲ್ಲದೆ ಬಿ.ಬಸವಲಿಂಗಪ್ಪ ಅವರ ವೈಚಾರಿಕ ವಿಚಾರಗಳನ್ನು ಈ ಮೂಲಕ ತಿಳಿದಿರುವುದರಿಂದ ನನ್ನಲ್ಲೂ ಸಹ ಸಮುದಾಯದ ಬಗ್ಗೆ ಕಳಕಳಿ ಹೆಚ್ಚಿಸಿಕೊಳಲು ಸಾಧ್ಯವಾಗಿಸಿದೆ ಎಂದು ಹೇಳಲು ಆಶಿಸುತ್ತೇನೆ.

ಬಿ.ಬಸವಲಿಂಗಪ್ಪ ಅವರ ಬಗ್ಗೆ ಮಾಹಿತಿ ಸಂಗ್ರಹಿಸಲು ಸಂದರ್ಶನಕ್ಕೆ ಹೋದಾಗ ಮಾಹಿತಿ ನೀಡಿದ ಈ ನಾಡಿನ ಹಿರಿಯ ರಾಜಕೀಯ ಮುತ್ಸದ್ದಿ ಶ್ರೀ.ಕೆ.ಎಚ್.ರಂಗನಾಥ್, ಮಾಜಿ ಕೇಂದ್ರ ಸಚಿವರು ಹಾಗು ಶಾಸಕರಾದ ಶ್ರೀ.ವಿ.ಶ್ರೀನಿವಾಸ್ ಪ್ರಸಾದ್, ಬಿ.ಬಸವಲಿಂಗಪ್ಪ ಅವರ ಸಹೋದರರಾದ ಡಾ|| ಬಿ.ಗುರುಸಿದ್ದಪ್ಪ, ಬಿ.ನಿಂಗಪ್ಪ, ಮಕ್ಕಳಾದ ಬಿ.ಪ್ರಸನ್ನಕುಮಾರ್ ಶಾಸಕರು ಮತ್ತು ಬಿ.ಶೀಲಾರಾಣಿ, ಪ್ರಖ್ಯಾತ ಸಾಹಿತಿಗಳಾದ ಡಾ. ಯು.ಆರ್.ಅನಂತಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಡಾ.ಸಿದ್ದಲಿಂಗಯ್ಯ, ಸಾಹಿತಿ ಪ್ರೊ.ಕಾಳೇಗೌಡ ನಾಗವಾರ, ನನ್ನ ಮಾರ್ಗದರ್ಶಕರಾದ ಡಾ.ಜೆ.ಸೋಮಶೇಖರ್ ಅವರ ಸಲಹೆ ಸೂಚನೆ ಹಾಗೂ ಡಾ. ಎಸ್. ನರೇಂದ್ರಕುಮಾರ್ ಅವರು ಸದಾ ನನಗೆ ಸಾಹಿತ್ಯದ ಅಭಿರುಚಿಯನ್ನು ತಿಳಿಸುವ ಮೂಲಕ ಪ್ರೇರೆಪಿಸುತ್ತಿರುವ ಇವರಿಗೆ, ಬಹಳ ಮುಖ್ಯವಾಗಿ ಶನಿವಾರಸಂತೆಯ ಭಾರತೀ ವಿದ್ಯಾ ಸಂಸ್ಥೆ ಅಧ್ಯಕ್ಷರು ಮತ್ತು ಆಡಳಿತ ಮಂಡಳಿ ಹಾಗೂ ಈ ಪುಸ್ತಕ ರಚಿಸುವ ಕಾರ್ಯಕ್ಕೆ ರಜೆ ಕೊಟ್ಟು ಸಹಕರಿಸಿದ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಎಸ್.ಎಂ.ಉಮಾಶಂಕರ್ ಅವರನ್ನು ಮರೆಯುವ ಹಾಗಿಲ್ಲ. ಸಹೋದ್ಯೋಗಿ ಮಿತ್ರರಿಗೆ, ಪ್ರಿಯ ವಿದ್ಯಾರ್ಥಿಗಳಿಗೆ, ಹಾಗೆಯೇ ಈ ಹೊತ್ತಿಗೆಯನ್ನು ಹೊರತರಲು ಸಲಹೆ, ಸಹಕಾರ ನೀಡಿದ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯದ ಉಪಸಮಿತಿಗೆ, ನಡಾವಳಿಗಳನ್ನು ಒದಗಿಸಿಕೊಟ್ಟ ವಿಧಾನಸೌಧ

ಗ್ರಂಥಾಲಯದ ಅಧಿಕಾರಿ ವರ್ಗ ಮತ್ತು ಸಿಬ್ಬಂದಿಗಳಿಗೆ ನಮನಗಳು. ಇಂಗ್ಲಿಷ್‌ನಲ್ಲಿದ್ದ ನಡಾವಳಿಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಕೊಟ್ಟ ಉಪನ್ಯಾಸಕರಾದ ಶ್ರೀ ಶಿವಶಂಕರ್ ಬಿಚ್ಚುಗತ್ತಿ, ಕರಡುಪ್ರತಿಯನ್ನು ತಿದ್ದಿದ ನನ್ನೆಲ್ಲಾ ಆತ್ಮೀಯ ಸ್ನೇಹಿತರಿಗೂ, ಅಂದವಾಗಿ ಅಕ್ಷರ ಜೋಡಣೆಯನ್ನು ಮಾಡಿಕೊಟ್ಟ ಶ್ರೀಮತಿ ಉಷಾ ಮತ್ತು ಶ್ರೀ ಕೆ.ಸಿ. ಓಂಕಾರಪ್ಪ ಅವರಿಗೆ ಕೃತಜ್ಞತೆಗಳು.

**ಎಸ್. ನಾಗರಾಜು, ಎಂ.ಎ., ಪಿಎಚ್.ಡಿ.**
ಸಹಾಯಕ ಪ್ರಾಧ್ಯಾಪಕರು
ಪ್ರಥಮದರ್ಜೆ ಕಾಲೇಜು,
ಶನಿವಾರಸಂತೆ,ಕೊಡಗು.

ಪರಿವಿಡಿ

## ಭಾಗ – III



## ಭಾಗ – IV

# ಭಾಗ – 1

# ಬಿ.ಬಸವಲಿಂಗಪ್ಪ ಅವರ ಜೀವನದ ಹೆಜ್ಜೆಗಳು

## 1. ಮನೆತನದ ನೋಟ

ಬಿ.ಬಸವಲಿಂಗಪ್ಪ ಅವರ ಪೂರ್ವಜರು ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೋಕಿನ ನಾಗರಬೆಟ್ಟ ಗ್ರಾಮದಿಂದ ಬಳ್ಳಾರಿ ಜಿಲ್ಲೆಯ ಕೊಟ್ಟೂರಿಗೆ ಬಂದು ನೆಲೆಸಿದರು. ತದನಂತರ ಹರಿಹರಕ್ಕೆ ಸ್ಥಳಾಂತರವಾದರು ಹರಿಹರಪ್ಪ, ಸಂಗಪ್ಪ, ಕೊಟ್ರುಬಸಪ್ಪ, ನಾಗಪ್ಪ, ಜವಳಿ ಬಸಪ್ಪ ಈ ಐದು ಜನ ಅಣ್ಣ ತಮ್ಮಂದಿರಲ್ಲಿ ಕೊನೆಯವರಾದ ಜವಳಿ ಬಸಪ್ಪ ಅವರೇ ಬಿ.ಬಸವಲಿಂಗಪ್ಪ ಅವರ ತಂದೆ. ಇವರನ್ನು ಜವಳಿ ಬಸಪ್ಪ ಎಂದು ಕರೆಯಲು ಕಾರಣ ಇವರು ಬಟ್ಟೆ ನೇಯ್ಗೆ ಮಾಡಿ ಊರೂರನ್ನು ಕುದುರೆ ಮೇಲೆ ಸುತ್ತಿ ಬಟ್ಟೆ ಮಾರಾಟ ಮಾಡುತ್ತಿದ್ದರು. ಇವರ ಮನೆಯಲ್ಲಿ ಬಟ್ಟೆ ನೇಯ್ಗೆ ಮಾಡುವ ಕೈ ಮಗ್ಗಗಳಿದ್ದವು. ಈ ವೃತ್ತಿ ಬಿ.ಬಸವಲಿಂಗಪ್ಪ ಅವರ ಅಜ್ಜಂದಿರ ಕಾಲದಿಂದಲೂ ನಡೆಯುತ್ತಿತ್ತು. ಬಸಪ್ಪ ಅವರು ಜೀವನದಲ್ಲಿ ಮುಂದು ಬರಬೇಕೆಂದು ಜಮೀನು ಮಾಡುವುದು, ವ್ಯಾಪಾರ ಮಾಡುವುದು, ಹೀಗೆ ಒಂದಲ್ಲ ಒಂದು ರೀತಿಯ ವೃತ್ತಿ ಮಾಡಿ ಸ್ವಾಭಿಮಾನಿಗಳಾಗಿ ಬದುಕುವುದನ್ನು ರೂಢಿಸಿಕೊಂಡಿದ್ದರು. ಬಿ.ಬಸವಲಿಂಗಪ್ಪ ಅವರ ಅಜ್ಜ ತೀರಿ ಹೋದ ಮೇಲೆ ಇವರ ತಂದೆ ಜವಳಿ ಬಸಪ್ಪ ಅವರು ಈ ಕೆಲಸಗಳನ್ನೆಲ್ಲ ಮುಂದುವರಿಸಿಕೊಂಡು ಬಂದರು "ಬ್ರಿಟೀಷರ ಕಾಲದಲ್ಲಿ ಜನ ಬಟ್ಟೆ ತೆಗೆದುಕೊಳ್ಳಬೇಕೆಂದರೆ ತಹಶೀಲ್ದಾರ್ ಕಡೆಯಿಂದ ಕೂಪನ್ ತಂದರೆ ತಮ್ಮ ಕೈ ಮಗ್ಗದಿಂದ ನೇಯ್ಗೆ ಮಾಡಿದ ಬಟ್ಟೆಯನ್ನು ಕೊಡುತ್ತಿದ್ದರು. ಇದು ಒಂದು ರೀತಿಯಲ್ಲಿ ಅವರು ಬ್ರಿಟೀಷ್ ಸರ್ಕಾರದಿಂದ ಅನುಮತಿ ಪಡೆದು ಕೈ ಮಗ್ಗದ ಸ್ವದೇಶಿ ಬಟ್ಟೆಗಳನ್ನು ವ್ಯಾಪಾರ ಮಾಡುತ್ತಿದ್ದಂತವರಾಗಿದ್ದರು".

ಈ ವ್ಯಾಪಾರದಿಂದ ಬಂದಂತಹ ಲಾಭದ ಹಣವನ್ನೆಲ್ಲಾ ಶೋಷಿತ ಜನ ಸಮುದಾಯದ ಅಭಿವೃದ್ಧಿಗೆ ಬಳಸುತ್ತಿದ್ದರು. ಒಂದು ರೀತಿಯಲ್ಲಿ ಸ್ವಾತಂತ್ರ್ಯ ಹೋರಾಟದ ಸಂಘಟನೆಯಲ್ಲೂ ತೊಡಗಿ ಐಕ್ಯತೆಯ ಮನೋಭಾವವನ್ನು ಹೊಂದಿದ್ದಂತ ಇಂತಹ ಆದರ್ಶನೀಯ ಕುಟುಂಬದಲ್ಲಿ ಹಿರಿಯ ಮಗನಾಗಿ ಜನಸಿದವರೇ ಬಿ.ಬಸವಲಿಂಗಪ್ಪ. ಜವಳಿ ಬಸಪ್ಪ ಅವರ ಮಡದಿ ಸಿದ್ದಲಿಂಗಮ್ಮ ಈ ದಂಪತಿಗಳಿಗೆ 8 ಜನ ಮಕ್ಕಳು. ವಿಶೇಷವೆಂದರೆ ಈ ರಾಜ್ಯದ ಹಿರಿಯ ರಾಜಕೀಯ ಮುತ್ಸದ್ದಿ ಶ್ರೀ ಕೆ.ಹೆಚ್.ರಂಗನಾಥ್ ಅವರ ತಂದೆ ಕೊಟ್ಟೂರು ಹರಿಹರಪ್ಪ ಇವರು ಬಿ.ಬಸವಲಿಂಗಪ್ಪ ಅವರ ಹಿರಿಯ ದೊಡ್ಡಪ್ಪ. ಹರಿಹರಪ್ಪ ಬ್ರಿಟೀಷ್ ಕಾಲದಲ್ಲೇ ವಿದ್ಯಾಭ್ಯಾಸ ಮಾಡಿ ಸರ್ಕಾರಿ ಸೇವೆಯಲ್ಲಿದ್ದವರು. ಹೆಚ್ಚಿನದಾಗಿ ಅಂಬೇಡ್ಕರ್ ಅವರ ಕಟ್ಟಾ ಅನುಯಾಯಿಯಾಗಿದ್ದರು. ಅಂಬೇಡ್ಕರ್ ಅವರ ನೇರ ಪರಿಚಯ ಕೊಟ್ಟೂರು ಹರಿಹರಪ್ಪ ಅವರಿಗಿತ್ತು. ಅಂಬೇಡ್ಕರ್ ಅವರು "ಮೈಸೂರು ಮಹಾರಾಜರಿಗೆ ಕಾನೂನು ಸಲಹೆಗಾರರಾಗಿದ್ದರು. ಕೊಲ್ಲಾಪುರದ ಸಾಹು ಮಹಾರಾಜರು ಅಂಬೇಡ್ಕರ್ ಅವರನ್ನು ನೇಮಿಸಿಕೊಳ್ಳುವಂತೆ ಮೈಸೂರು ಮಹಾರಾಜರಿಗೆ ಶಿಫಾರಸ್ಸು ಮಾಡಿದ್ದರು. ಆ ಸಂದರ್ಭದಲ್ಲಿ ಮೈಸೂರು ಅರಸರ ಸರ್ಕಾರದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಕೊಟ್ಟೂರು ಹರಿಹರಪ್ಪ ಅವರು ಸೇವೆ ಸಲ್ಲಿಸುತ್ತಿದ್ದರು. ಇವರು ಅಂಬೇಡ್ಕರ್ ಅವರ ಸಾರ್ವಜನಿಕ ಸಭೆ, ಸಮಾರಂಭಗಳಲ್ಲಿ, ಅವರ ಚಳುವಳಿಯಲ್ಲಿ, ಹಾಗೂ ನೇರವಾಗಿ ಮುಂಬೈ ನಗರದಲ್ಲಿನ ಕಾರ್ಯ ಕ್ರಮಗಳಲ್ಲಿ ಭಾಗವಹಿಸುತ್ತಿದ್ದರು." ಹೀಗಾಗಿ ಅಂಬೇಡ್ಕರ್ ಅವರ ಸಿದ್ಧಾಂತಗಳು, ಚಿಂತನೆಗಳು, ಜನಾಂಗೀಯ ಸೇವಾ ಮನೋಭಾವನೆ ಇವರ ಮನೆತನದಲ್ಲಿತ್ತು. "ಅಂಬೇಡ್ಕರ್ ಮತ್ತು ಹರಿಹರಪ್ಪ ಅವರ ಬಾಂಧವ್ಯದ ಚಿರ ನೆನಪಿಗಾಗಿ ಹರಿಹರಪ್ಪ ಅವರು ದೂರದ ನಿಪ್ಪಾಣಿಯ ಹನುಮಂತ ವರಾಳೆ ಇವರು ಅಂಬೇಡ್ಕರ್ ಸ್ಥಾಪಿಸಿದ ಪೀಪಲ್ಸ್ ಎಜುಕೇಷನ್ ಸೊಸೈಟಿಯ ಅಧ್ಯಕ್ಷರಾಗಿದ್ದರು. ಇವರ ಮಗ ಬಳವಂತರಾವ್ ವರಾಳೆಯವರಿಗೆ ತಮ್ಮ ಮಗಳನ್ನು ಕೊಟ್ಟು ವಿವಾಹ ಮಾಡಿಸಿದ್ದರು." ಇಂತಹ ಹೆಸರಾಂತ ಕೌಟುಂಬಿಕ ಹಿನ್ನೆಲೆಯುಳ್ಳ ಮನೆತನದಿಂದ ಬಂದವರಾಗಿರುತ್ತಾರೆ.

ವಂಶವೃಕ್ಷ

↓

ಲಿಂಗಪ್ಪ

ಹರಿಹರಪ್ಪ, ಸಂಗಪ್ಪ, ಕೊಟ್ರು ಬಸಪ್ಪ, ನಾಗಪ್ಪ, ಜವಳಿ ಬಸಪ್ಪ

↓ ↓

ಸಿದ್ಧಮ್ಮ ಸಿದ್ಧಲಿಂಗಮ್ಮ

↓

ಕೆ. ಎಚ್. ರಂಗನಾಥ್

↓

ಬಿ.ಬಸವಲಿಂಗಪ್ಪ, ಬಿ.ಗುರುಬಸಪ್ಪ, ಬಿ.ನಿಂಗಮ್ಮ, ಬಿ.ಗುರುಸಿದ್ಧಪ್ಪ, ಬಿ.ನಿಂಗಪ್ಪ, ಬಿ.ನಾಗಮ್ಮ, ಬಿ.ಶಿವಬಸಪ್ಪ, ಬಿ. ಗುರುಲಿಂಗಪ್ಪ

ಸುಮಂಗಳಮ್ಮ

↓

ಬಿ. ಸತ್ಯವತಿ, ಬಿ. ಪ್ರಸನ್ನಕುಮಾರ್, ಬಿ. ಶೀಲಾರಾಣಿ, ಬಿ. ಜಯಪದ್ಮ, ಬಿ. ಶರತ್ ಚಂದ್ರ, ಬಿ. ಚೈತನ್ಯ, ಬಿ. ಚಂದ್ರಿಕ

## 2. ಶೈಕ್ಷಣಿಕ ಜೀವನ

ಜವಳಿ ಬಸಪ್ಪ ಮತ್ತು ಸಿದ್ದಲಿಂಗಮ್ಮ ದಂಪತಿಗಳ ಮೊದಲ ಮಗನಾಗಿ ದಿನಾಂಕ 21.04.1924ರಲ್ಲಿ ಹುಟ್ಟಿದವರೇ ಬಿ.ಬಸವಲಿಂಗಪ್ಪ. ಇವರು ನೋಡಲಿಕ್ಕೆ ಕೆಂಪಾಗಿ ಮತ್ತು ಗುಂಡು ಗುಂಡಾಗಿದ್ದರು. ಮೈಸೂರು ಮಹಾರಾಜರ ಅಸ್ತಿತ್ವದಲ್ಲಿ ಸ್ಥಾಪಿತವಾಗಿದ್ದ ಹರಿಹರದ ಛತ್ರದ ಶಾಲೆಯಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಬಸವಲಿಂಗಪ್ಪ ಅವರು ಪ್ರಾರಂಭಿಸಿದರು. ಬಾಲ್ಯದಲ್ಲಿ "ಈಶ್ವರನ ದೇವಾಲಯಕ್ಕೆ

ಕೈಮುಗಿದು ಪ್ರತಿನಿತ್ಯ ಶಾಲೆಗೆ ಹೋಗುತ್ತಿದ್ದರು. ತಮ್ಮ ಜನಾಂಗದಲ್ಲಿ ಶ್ರೀ ಕೆ.ಹೆಚ್. ರಂಗನಾಥ್ ಅವರ ತಂದೆ ಹರಿಹರಪ್ಪ ಅವರು ಆ ಕಾಲದಲ್ಲೆ ವಿದ್ಯಾವಂತರು ನಂತರದಲ್ಲಿ ವಿದ್ಯಾಭ್ಯಾಸ ಪ್ರಾರಂಭಿಸಿದವರು ಬಿ.ಬಸವಲಿಂಗಪ್ಪ ಅವರು" ಎಂಬ ಮಾಹಿತಿ ಕ್ಷೇತ್ರಕಾರ್ಯದಲ್ಲಿ ದೊರೆತಿದ್ದು 1930-38ರ ಅವಧಿಯಲ್ಲಿ ಒಂದನೇ ತರಗತಿಯಿಂದ ಎಂಟನೇ ತರಗತಿಯವರೆಗೆ ಹರಿಹರದಲ್ಲೆ ವಿದ್ಯಾಭ್ಯಾಸ ಮುಗಿಸಿದರು. ಸಮಾಜದಲ್ಲಿರುವ "ನೀಚ ವೃತ್ತಿ ಹೋಗಬೇಕು, ನಾವು ಕೂಡ ಮಾನವರಾಗಬೇಕು ಅಂತ ಮಾನವ ಕುಲಕ್ಕೆ ವಿದ್ಯಾನೇ ಮುಖ್ಯ ಅಂತ ಓದಿನ ಕಡೆ ಹೆಚ್ಚು ಗಮನ ಹರಿಸಿದರು." ಮುಂದಿನ ಶಿಕ್ಷಣವನ್ನು ಅವರ ದೊಡ್ಡಪ್ಪ ಹರಿಹರಪ್ಪ ಅವರ ಮಾರ್ಗದರ್ಶನದಲ್ಲಿ 1938ರಲ್ಲಿ ಬೆಂಗಳೂರಿನ ಸೆಂಟ್ರಲ್ ಹೈಸ್ಕೂಲ್‌ನಲ್ಲಿ ಪ್ರಾರಂಭಿಸುತ್ತಾರೆ. ಹರಿಹರಪ್ಪ ಅವರು ಆಗ ಚಿತ್ರದುರ್ಗದ ತಹಶೀಲ್ದಾರ್ ಕಛೇರಿಯಲ್ಲಿ ಶಿರಸ್ತೆದಾರರಾಗಿದ್ದರು. ಬಿ.ಬಸವಲಿಂಗಪ್ಪ ಅವರ ಸಹೋದರ ಡಾ|| ಗುರುಸಿದ್ದಪ್ಪ ಅವರು ಹೇಳುವಂತೆ "ನಮ್ಮಣ್ಣ ಬಿ.ಬಸವಲಿಂಗಪ್ಪ ಅವರನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿ ಸ್ಕೂಲಿಗೆ ಸೇರಿಸುತ್ತಾರೆ. ಬೆಂಗಳೂರಿನಲ್ಲಿ ಚೆನ್ನಾಗಿ ಓದಲಿ ಎಂದು ಅಲ್ಲಿನ ಸೆಂಟ್ರಲ್ ಸ್ಕೂಲ್‌ಗೆ ಸೇರಿಸಿ ಪ್ರಖ್ಯಾತ ವಿದ್ಯಾರ್ಥಿನಿಲಯವಾದ ನರಸಿಂಹರಾಜ ಹಾಸ್ಟೆಲ್‌ಗೆ ಸೇರಿಸುತ್ತಾರೆ. ಬಿ. ಬಸವಲಿಂಗಪ್ಪ ಅವರ ಸಹೋದರಿ ನಿಂಗಮ್ಮನ ಗಂಡ ಎಸ್.ಕರಿಯಪ್ಪ ಪೋಲಿಸ್ ಇನ್ಸ್‌ಪೆಕ್ಟರ್ ಆಗಿದ್ದರು. ಬೆಂಗಳೂರಿನ ಇವರ ಮನೆಯಲ್ಲಿ ಹಾಸ್ಟೆಲ್ ಸಿಗುವವರೆಗೂ ಸ್ವಲ್ಪ ದಿವಸ ಇಲ್ಲಿಂದಲೆ ಸ್ಕೂಲಿಗೆ ಹೋಗುತ್ತಿದ್ದರು. ದುರ್ಗಪ್ಪ ಇವರು ಬಿ.ಬಸವಲಿಂಗಪ್ಪ ಅವರ ಮಾವನವರು. ಇವರು ಸಹ ತಮ್ಮ ಸಮಾಜಕ್ಕೆ ಮಾರ್ಗದರ್ಶನ ನೀಡುತ್ತಿದ್ದರು. ಹಾಗಾಗಿ ಇವರು ಸಹ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಿಸಿದರು, ಮುಕ್ಕಾಲು ಭಾಗ ಬಸವಲಿಂಗಪ್ಪ ಅವರನ್ನು ಉನ್ನತಿಗೆ ತರಬೇಕು ಅಂತ ಬೆಂಬಲಿಸಿ ನಿಂತವರು ಹರಿಹರಪ್ಪ".

ಹೈಸ್ಕೂಲ್ ವಿದ್ಯಾಭ್ಯಾಸವನ್ನು 1940ರವರೆಗೆ ಮುಗಿಸಿ ಅದೇ "ಅವೆನ್ಯೂ ರೋಡ್‌ನಲ್ಲಿರುವ ಸೆಂಟ್ರಲ್ ಸ್ಕೂಲ್‌ನಲ್ಲಿ Intermediate ಅನ್ನು 1942ರಲ್ಲಿ ಮುಗಿಸಿ ಪದವಿ ಶಿಕ್ಷಣಕ್ಕಾಗಿ ವಿಶ್ವವಿಖ್ಯಾತ ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿಗೆ ಬಿ.ಎ. ಪದವಿಗೆ ಸೇರುತ್ತಾರೆ. ವಯಸ್ಸು ಹೆಚ್ಚಾಗತೊಡಗಿದಂತೆ, ಶಿಕ್ಷಣ ತನ್ನೊಳಗೆ ನೂರಾರು ಕಣ್ಣುಗಳಾಗಿ ಅರಳ ತೊಡಗಿದಂತೆ, ಈ ಸಮಾಜದ ಸಂಕೀರ್ಣತೆಗಳು ಕಾಣತೊಡಗಿದವು, ಅಂಬೇಡ್ಕರ್ ಶೋಷಿತರ ಸಂಕಟದ ಕಿಡಿಯಾಗಿ ದೇಶದೆಲ್ಲೆಡೆ ಹರಡತೊಡಗಿಂತೆ ಬಸವಲಿಂಗಪ್ಪ ಅವರಿಗೆ ಮತ್ತಷ್ಟು

ಸಮಾಜಮುಖಿ ಆಲೋಚನೆಗಳು ಬೆಳೆಯಲಾರಂಭಿಸಿದವು. ಇಲ್ಲಿ ಹೆಸರಾಂತ ಕವಿಗಳ, ದಾರ್ಶನಿಕರ, ಚಳುವಳಿಗಾರರ ಬಗ್ಗೆ ಹಾಗೂ ದಲಿತರ ಸಮಸ್ಯೆಗಳನ್ನು ಕಣ್ಣಾರೆ ಕಾಣುವ ಅವಕಾಶ ಮೈಸೂರಿನಲ್ಲಿ ಅವರಿಗೆ ಸಿಕ್ಕಿತು. ಮಹಾರಾಜ ಕಾಲೇಜಿನಲ್ಲಿ ಬಿ.ಎ. ಪದವಿಯನ್ನು 1945ರಲ್ಲಿ ಮುಗಿಸಿದ ನಂತರ ಅವರಿಗೆ ಮುಂದೆ ಏನು ಮಾಡಬೇಕೆಂಬ ಆಲೋಚನೆಯಾಯಿತು. ಆಗ ಅವರನ್ನು ಕಾಡಿದ್ದು ಈ ದೇಶದ ಜನ ಕಾನೂನು ತಿಳಿಯದೆ ಹೇಗೆ ಗುಲಾಮಗಿರಿಗೆ ಬೀಳುತ್ತಿದ್ದಾರೆ, ಧೈರ್ಯ ನೀಗಿಕೊಂಡು ಹೇಗೆ ಅಸಹಾಯಕರಾಗುತ್ತಿದ್ದಾರೆ. ಶೋಷಣೆಗೆ ಒಳಗಾಗುತ್ತಿದ್ದಾರೆ ಎಂಬುದು, ಈ ಕಾರಣದಿಂದ ಅವರಿಗೆ ಕಾನೂನು ಕಲಿಯಬೇಕೆಂಬ ಮಹತ್ವಾಕಾಂಕ್ಷೆ ಚಿಮ್ಮಿತು. ಆಗ ಅವರು ಕಾನೂನು ವಿದ್ಯಾಭ್ಯಾಸದ ಕಡೆಗೆ ಗಮನಹರಿಸಿ ಬೆಳಗಾಂನ ಹೆಸರಾಂತ ರಾಜಾ ಲಕ್ಷ್ಮಣರಾವ್ ಕಾನೂನು ಮಹಾವಿದ್ಯಾಲಯಕ್ಕೆ ಸೇರುತ್ತಾರೆ." ಬಹಳ ಕಷ್ಟ ಪಟ್ಟು ಬಾಡಿಗೆ ಕೊಠಡಿಯೊಂದನ್ನು ಬೆಳಗಾಂನಲ್ಲಿ ಪಡೆದು ಕಾನೂನು ಪದವಿಯನ್ನು 1948ರಲ್ಲಿ ಪಡೆಯುತ್ತಾರೆ.

ವಿಶೇಷವೇನೆಂದರೆ "ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳಲ್ಲೊಬ್ಬರಾದ ಶ್ರೀ.ವೀರೇಂದ್ರ ಪಾಟೀಲ್ ಅವರು ಬಿ.ಬಸವಲಿಂಗಪ್ಪ ಅವರ ಕಾನೂನು ವಿದ್ಯಾಭ್ಯಾಸದ ಅವಧಿಯಲ್ಲಿ ಸಹಪಾಠಿಗಳಾಗಿದ್ದರು." ಕಾನೂನು ವಿದ್ಯಾಭ್ಯಾಸದ ಸಂದರ್ಭದಲ್ಲೂ ಸಂಸ್ಕೃತವನ್ನು ಅಭ್ಯಾಸಿಸುತ್ತಿದ್ದರು. ಇದರ ಪರಿಣಾಮವಾಗಿ "ಹರಿಹರದಲ್ಲೇ ಬೀಡು ಬಿಟ್ಟಿದ್ದ ಮಿಲಿಟರಿ ಪಡೆಯ ಶಾಲೆಯಲ್ಲಿ ಸ್ವಲ್ಪ ದಿನ ಸಂಸ್ಕೃತ ಮತ್ತು ಆಂಗ್ಲ ಭಾಷೆಯ ಶಿಕ್ಷಕರಾಗಿ ಸೇವೆ ಸಲ್ಲಿಸಿದರು." ಬೆಳಗಾಂನಿಂದ ಕಾನೂನು ಪದವಿ ಪರೀಕ್ಷೆ ಮುಗಿಸಿ ಹರಿಹರಕ್ಕೆ ಮರಳುತ್ತಾರೆ. ವಕೀಲ ವೃತ್ತಿ ಎಲ್ಲಿ ಪ್ರಾರಂಭಿಸಬೇಕೆಂದು ಯೋಚಿಸ ತೊಡಗುತ್ತಾರೆ. ಆ ಸಂದರ್ಭದಲ್ಲಿ ವಿದ್ಯಾಭ್ಯಾಸದಿಂದ ಮಾತ್ರ ದಲಿತರು ಪ್ರಜ್ಞಾವಂತರಾಗಲು ಸಾಧ್ಯ ಎನ್ನುವ ಅಂಬೇಡ್ಕರ್ ಅವರ ಯುಕ್ತಿಯೊಡನೆ ರಜಾ ದಿನಗಳಲ್ಲಿ ಬಸವಲಿಂಗಪ್ಪ ಅವರು ಸೈಕಲ್ ಏರಿ ಹರಿಹರದ ನಗರದ ಅಕ್ಕ ಪಕ್ಕದ ಹಳ್ಳಿಗಳಿಗೆ ಹೋಗಿ ದಲಿತ ಮಕ್ಕಳನ್ನು ಶಾಲೆಗೆ ಸೇರಿಸುವ ಮನವೊಲಿಸುವ ಕೆಲಸ ಮಾಡುತ್ತಿದ್ದರು." ಇಂತಹ ಸಂದರ್ಭದಲ್ಲಿ ನಡೆದ ರಾಜನ ಹಳ್ಳಿಯ ಘಟನೆ ಜೀವನದುದ್ದಕ್ಕೂ ನೀತಿ ಪಾಠ ಕಲಿಸಿತು. ಅದೇನೆಂದರೆ ಬಸವಲಿಂಗಪ್ಪ ಅವರು ಸೈಕಲ್ ಏರಿ ರಾಜನಹಳ್ಳಿ ದಲಿತ ಕೇರಿಗೆ ಹೋಗಿ ದಲಿತ ಮಕ್ಕಳನ್ನು ಶಾಲೆಗೆ ಸೇರಿಸಲು ಮನವೊಲಿಸುತ್ತಿದ್ದರು. ಯಾವ ದಲಿತನೂ ಬಸವಲಿಂಗಪ್ಪ

ಅವರ ಮಾತು ಕೇಳುತ್ತಿರಲಿಲ್ಲ. ಛಲ ಬಿಡದೆ ಬಸವಲಿಂಗಪ್ಪ ಅವರು ರಾಜನ ಹಳ್ಳಿಗೆ ದಿನವೂ ಸೈಕಲ್ ಏರಿ ಹೋಗಿ ತಿರುಗುತ್ತಿದ್ದರು. ದಲಿತರಾರೂ ಇವರ ಮಾತನ್ನು ಕೇಳುತ್ತಿರಲಿಲ್ಲ. ಹೀಗೆ ಹಳ್ಳಿಗೆ ಹೋಗಿ ಬರುವ ಸುಂದರಾಂಗ ಯುವಕನನ್ನು ಒಂದು ದಿನ ಆ ಹಳ್ಳಿಯ ಮರದಡಿ ಕಟ್ಟೆಯ ಮೇಲೆ ಕುಳಿತ ಆ ಹಳ್ಳಿಯ ಯಜಮಾನ ಸಂಶಯ ದೃಷ್ಟಿಯಿಂದಲೇ ಬಿ.ಬಸವಲಿಂಗಪ್ಪ ಅವರನ್ನು ಕರೆದು ಪ್ರಶ್ನಿಸಿದರು. ಈ ಸುಂದರ ಯುವಕನು ರಾಜನ ಹಳ್ಳಿಯ ದಲಿತ ಕೇರಿಗೆ ಮೇಲಿಂದ ಮೇಲೆ ಭೇಟಿ ಕೊಡುವುದು ಸ್ತ್ರೀ ಸಂಗಕ್ಕಾಗಿ ಎಂಬ ಬಲವಾದ ಸಂಶಯ ಆ ಯಜಮಾನನಲ್ಲಿತ್ತು. ಯಜಮಾನರು ಕೂಗಿದ ತಕ್ಷಣ ಬಸವಲಿಂಗಪ್ಪ ಅವರ ಬಳಿ ತೆರಳಿ ತಾವು ಮಾಡುತ್ತಿರುವ ಕೆಲಸವನ್ನು ವಿವರಿಸಿದರು. ಆ ಯಜಮಾನರಿಗೆ ಬಸವಲಿಂಗಪ್ಪ ಅವರ ಮೇಲೆ ಇದ್ದ ಸಂಶಯ ದೂರವಾಗಿ ಅಭಿಮಾನ ಮೂಡಿತು. ನೋಡು ಹೀಗೆ ತಿರುಗಾಡಿದರೆ ಪ್ರಯೋಜನವಿಲ್ಲ. ನಾಳೆ ಬೇಗನೇ ಬಾ, ನೇರವಾಗಿ ದಲಿತ ಕೇರಿಗೆ ಹೋಗಬೇಡ. ಸೀದಾ ನನ್ನಲ್ಲಿಗೆ ಬಾ ಎಂದು ಹೇಳಿದರು.

ಬಸವಲಿಂಗಪ್ಪ ಹರಿಹರಕ್ಕೆ ಮರಳಿ ಮರುದಿನ ಬೇಗನೇ ಎದ್ದು ರಾಜನ ಹಳ್ಳಿಗೆ ತೆರಳಿ ಯಜಮಾನರು ಕುಳಿತ ಕಟ್ಟೆಗೆ ತಲುಪಿದರು. ಆ ಮರದ ಕಟ್ಟೆ ಹೇಗೆತ್ತೆಂದರೆ ದಲಿತರು ತಮ್ಮ ಕೇರಿಯಿಂದ ಹೊಲ ಗದ್ದೆಗೆ ಹೋಗಬೇಕಾದರೆ, ಆ ಕಟ್ಟೆಯ ಪಕ್ಕದಲ್ಲಿಯೇ ಸಾಗಿ ಹೋಗಬೇಕು. ಸಮಯ ಸರಿಯಿತು ದಲಿತರು ಒಬ್ಬೊಬ್ಬರಾಗಿ ಕೈಯಲ್ಲಿ ಮೇಕೆಗೆ ಕಟ್ಟಿದ ಹಗ್ಗ ಹಿಡಿದು, ಬಗಲಲ್ಲಿ ಕುರುಪಿ ಹಿಡಿದು, ಹೊಲಗದ್ದೆಗಳಿಗೆ ಕೂಲಿನಾಲಿ ಮಾಡಲು ಸಾಗುತ್ತಿದ್ದರು. ಆ ಯಜಮಾನ ಏರಿದ ದನಿಯಲ್ಲಿ ಆ ದಲಿತರ ಹೆಸರನ್ನು ಹೇಳಿ 'ಲೋ ಸೂಳೆ ಮಗನೇ ಬಾ ಇಲ್ಲಿ, ಕಟ್ಟು ಆ ಮೇಕೆ ಅಲ್ಲಿ ಒದ್ದಾಕಿ ಬಿಡ್ತೇನೆ, ಸೂಳೆ ಮಕ್ಕಳಾ' ಎಂದು ತನ್ನ ಪಾಳೇಗಾರಿಕೆಯ ಭಾಷೆಯಲ್ಲಿ ಪ್ರತಿಯೊಬ್ಬ ದಲಿತರನ್ನು ಕರೆದನು. ಅವರು ಸ್ವಾಮಿ ನಾವೇನು ತಪ್ಪು ಮಾಡಿಲ್ಲ ನಮ್ಮನ್ಯಾಕೆ ಬಯ್ತೀರಿ ಸ್ವಾಮೇರಾ? 'ಎಂದ ದಲಿತನೊಬ್ಬನಿಗೆ ಆ ಯಜಮಾನ ಬೋಳಿ ಮಗನೇ ತಿಕದ ಮ್ಯಾಲೆ ಒದೀತೀನಿ ನೋಡು. ಬಾಯಿ ಬಿಟ್ರೆ' ಎಂದು ಗದರಿಸಿದ, ದಲಿತರು ತೆಪ್ಪಗಾದರು, ಬಸವಲಿಂಗಪ್ಪ ಅವರತ್ತ ಬೆರಳು ತೋರಿಸಿದ ಯಜಮಾನ ಯಾರಿವ, ನಿಮ್ಮ ಕೇರಿಗೆ ಯಾಕೆ ಬರ್ತಾ ಇದ್ದಾನೆ, ಎಂದು ದಲಿತರಿಗೆ ಪ್ರಶ್ನಿಸಿದನು. ಈತನ ಹೆಸರು 'ಬಸವಲಿಂಗಪ್ಪ ಅಂತ ಹೇಳಿ. ಈತ ಹರಿಹರದವ, ನಮ್ಮತ್ರಕ್ಕೆ ಬಂದು ನಮ್ಮ ಮಕ್ಕಳನ್ನು ಸ್ಕೂಲಿಗೆ ಕಳುಹಿಸಿ ಕೊಡಿ ಅಂತ ಗಂಟು ಬಿದ್ದಾನೆ'. "ಸ್ವಾಮೇರ ಸ್ಕೂಲು ಪಾಲು ನಮಗ್ಯಾಕೆ ನೀವೇ ಹೇಳಿ" ಎಂದರು ದಲಿತರು.

ಯಜಮಾನ ಮತ್ತೆ ಗುಡುಗಿದ, ಸೂಳೆಮಕ್ಕಳಾ ತಿಕ ಮುಚ್ಚಿಕೊಂಡು ಈ ಯಪ್ಪನನ್ನ ನಿಮ್ಮ ಓಣಿಗೆ ಕರೆದುಕೊಂಡು ಹೋಗಿ ಅವನು ಹೇಳಿದಾಂಗೆ ಕೇಳ್ರೀ ಇಲ್ಲಾ ಅಂದ್ರ ಒಬ್ಬೊಬ್ಬನ ಚರ್ಮ ಸಿಗಿದು ಹಾಕಿ ಬಿಡ್ತೇನೆ ಎಂದರು. ಯಜಮಾನರ ಬೆಂಕಿಯಂತ ಬೆದರಿಕೆಯನ್ನು ಕೇಳಿ ದಲಿತರು ಬಸಲಿಂಗಪ್ಪ ಅವರನ್ನು ಕೇರಿಗೆ ಕರೆದು ಕೊಂಡು ಬಂದರು. ಬಸವಲಿಂಗಪ್ಪ ಅವರ ಮನಸ್ಸಿನಲ್ಲಿ ಅಂದು ಒಂದು ಸಿದ್ಧಾಂತ ಮೊಳಕೆ ಒಡೆಯಿತು. ಅದೇನೆಂದರೆ ಬದಲಾವಣೆ ತಿಳುವಳಿಕೆ ಅಥವ ನಮ್ರತೆಯಿಂದ ತರುವಂತಹದಲ್ಲ. ಒತ್ತಾಯದಿಂದಲೇ ತರುವಂತಹುದು" ಎಂದು ನಿರ್ಧರಿಸಿದರು. ಹೀಗೆ ಬಸವಲಿಂಗಪ್ಪ ಅವರು ವಿದ್ಯಾಭ್ಯಾಸ ಪೂರೈಸಿ ದಲಿತರ ಶಿಕ್ಷಣದತ್ತ ಗಮನ ಹರಿಸಿದರು.

ಬಿ.ಬಸವಲಿಂಗಪ್ಪ ಅವರು ಸಚಿವರಾಗಿದ್ದಾಗ ಹುಬ್ಬಳ್ಳಿಯ ಕಾಡ ಸಿದ್ದೇಶ್ವರ ಕಲಾ ಮಹಾ ವಿದ್ಯಾಲಯದ ಸಾಂಸ್ಕೃತಿಕ ಚಟುವಟಿಕೆಗಳನ್ನು ಉದ್ಘಾಟಿಸಿ ವಿದ್ಯಾರ್ಥಿಗಳನ್ನು ಕುರಿತು ಮಾತನಾಡಿದ್ದು, "ತಮ್ಮ ಕಾನೂನು ಪದವಿಯ ವಿದ್ಯಾಭ್ಯಾಸದ ಅವಧಿಯಲ್ಲಿ ತಳೆದ ನಿಲುವು ನಿಜಕ್ಕೂ ಪ್ರಶಂಸನೀಯವಾದದ್ದು" ಎಂದು ಹೇಳಿದರು. ಬೆಳಗಾಂನಲ್ಲಿ ಒಂದುಬಾಡಿಗೆ ಕೊಠಡಿ ಪಡೆದು ಇಲ್ಲಿಂದ ಪ್ರತಿದಿನ ಕಾಲೇಜಿಗೆ ಹೋಗುತ್ತಿದ್ದರು. ಕಾಲೇಜು ಬೆಳಿಗ್ಗೆ 7 ಗಂಟೆಗೆ ಪ್ರಾರಂಭವಾಗುತ್ತಿತ್ತು. ಬಸವಲಿಂಗಪ್ಪ ಅವರು ಬೆಳಿಗ್ಗೆ 6 ಗಂಟೆಗೆ ತಮ್ಮ ಕೊಠಡಿಯಿಂದ ಹೊರಡುತ್ತಿದ್ದರು. ಇಡೀ ರೋಡ್ ಬೆಳಿಗ್ಗೆ ವಾಕ್ ಮಾಡುವ ಮತ್ತು ಜಾಗಿಂಗ್ ಮಾಡುವ ಜನರಿಂದ ತುಂಬಿರುತಿತ್ತು. ಅದೇ ವೇಳೆಗೆ ಅಲ್ಲಿ ಭಂಗಿಗಳು, ಓಣಿ ಓಣಿಗಳಲ್ಲಿ ನುಗ್ಗಿ ಮಲ ಹೊತ್ತು ಗಾಡಿಗಳಿಗೆ ತುಂಬುತ್ತಿದ್ದರು. ಮಲಹೊತ್ತು ತರುತ್ತಿರುವವರ ಮೈಕೈಗೆ ಅದು ಸಿಡಿದಿರುತಿತ್ತು. ಒಮ್ಮೊಮ್ಮೆ ಅದರ ವಾಸನೆ ರೋಡ್ ತುಂಬ ಹರಡುತಿತ್ತು. ವಾಕ್ ಮಾಡುವವರು 'ಛೀ ಇವರೌವ್ನ ಇಂಥ ಮುಂಜಾನಿ ವ್ಯಾಳೆದಾಗ ಬರಬೇಕಾ ಇವರು' ಎಂದು ಭಂಗಿಗಳಿಗೆ ಶಪಿಸಿತ್ತಾ ಮೂಗು ಮುಚ್ಚಿಕೊಂಡು ಬರ ಬರನೇ ಸಾಗಿ ಹೋಗುತ್ತಿದ್ದರು. ನಾನು ಒಮ್ಮೊಮ್ಮೆ ಮೂಗು ಮುಚ್ಚು ಕೊಂಡು ಹೋಗುತ್ತಿದ್ದೆ. ಇದನ್ನು ನಾನು ದಿನಂಪ್ರತಿ ನೋಡುವ ದೃಶ್ಯವಾಗಿತ್ತು. ಯಾರೋ ಮಾಡಿದ ಮಲಮೂತ್ರಗಳನ್ನು ಯಾರೋ ಹೊರಬೇಕು. ಇದೆಂಥ ನ್ಯಾಯ, ಜನರಾದರೂ ಮಲಮೂತ್ರದ ವಾಸನೆ ಬಂದರೆ ಮಾಡಿದವರನ್ನು ಬಿಟ್ಟು ಮಲಹೊರುವವರನ್ನು ಥೂ ಹೊಲಸು ಸೂಳೆ ಮಕ್ಕಳು ಎಂದು ಬೈಯುತ್ತಿದ್ದರು. ಇದಕ್ಕೆ ಮುಕ್ತಿ ಎಂಬುದು ಇದೆಯೇ? ಮೇಲ್ಜಾತಿ ಜನಗಳಿಗೆ

ಆತ್ಮಸಾಕ್ಷಿ ಮತ್ತು ಪ್ರಜ್ಞೆ ಇಲ್ಲವೇ ಎಂದು ಯೋಚಿಸುತ್ತಿದ್ದೆ. ಆಗ ನನಗೆ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಮಾತುಗಳು ನೆನಪಾಗುತ್ತಿದ್ದವು. ನಿಮ್ಮ ಉದ್ಧಾರ ನಿಮ್ಮ ಕೈಯಲ್ಲೇ ಇದೆ. ಯಾವ ಮಹಾತ್ಮರು, ದೇವರುಗಳು ನಿಮ್ಮನ್ನು ಉದ್ಧರಿಸುವುದಿಲ್ಲ". ಎಂದು ಸ್ಪಷ್ಟಪಡಿಸಿದರು. ಇದರಿಂದ ತಿಳಿವಂತಹದೆಂದರೆ ಬಿ.ಬಸವಲಿಂಗಪ್ಪ ಅವರ ಜೀವನ ಮತ್ತು ಶಿಕ್ಷಣದ ಸಂದರ್ಭದಲ್ಲೆ ಪ್ರಗತಿಪರವಾದ ವಿಚಾರಗಳನ್ನು, ಆರೋಗ್ಯದಾಯಕವಾದ ಸಮಾಜವನ್ನು ಕಟ್ಟುವ ಯೋಚನೆಗಳನ್ನು ಮಾಡಿದವರಾಗಿದ್ದಾರೆ.

ಬಸವಲಿಂಗಪ್ಪ ಅವರ ಪುತ್ರ ಬಿ.ಪ್ರಸನ್ನಕುಮಾರ್ ಹೇಳುವಂತೆ "ಹರಿಹರಪ್ಪ ಅವರು ನಮ್ಮ ತಂದೆಗೆ ಓದಿಸುವುದರಿಂದ ಹಿಡಿದು ಎಲ್ಲಾ ರೀತಿಯಲ್ಲೂ ಸಹಾಯ ಮಾಡಿದರು ಹಾಗೂ ಬೆಂಬಲಿಸಿದರು. ಹಾಗೆಯೇ ಶೈಕ್ಷಣಿಕ ಸಂಪತ್ತನ್ನು ಗಳಿಸುವುದರೊಂದಿಗೆ ಮುಂದೆ ತಾನು ತನ್ನ ಶೋಷಿತ ಜನರಿಗೆ ಏನು ಮಾಡಬೇಕು ಎಂದು ನಿರ್ಧರಿಸಿ ಅವುಗಳನ್ನು ಮಾಡಿ ತೋರಿಸಿ ಕೊಟ್ಟಿದ್ದಾರೆ" ದಲಿತ ವರ್ಗದವರು ಆ ಕಾಲದಲ್ಲೆ ಶ್ರೇಣೀಕೃತ ಸಮಾಜದಲ್ಲಿ ಶೈಕ್ಷಣಿಕವಾಗಿ ಪ್ರಗತಿಯನ್ನು ಹೊಂದುವುದು ಬಲು ಕಷ್ಟದ ಮಾತಾಗಿತ್ತು ಎನ್ನುತ್ತಾರೆ.

ಅವರ ಪುತ್ರಿ ಬಿ. ಶೀಲಾರಾಣಿ ಹೇಳುವಂತೆ "ಇಳಿ ವಯಸ್ಸಿನಲ್ಲೂ ಎಷ್ಟು ಓದುತ್ತಿದ್ದರು ಎಂದರೆ ಪ್ರತಿ ದಿನ 6 ರಿಂದ 8 ಗಂಟೆ ಕಾಲ ಓದುತ್ತಿದ್ದರು. ಓದಿನಿಂದ ತನ್ನ ಜನಕ್ಕೇನಾದರೂ ಮಾಡಲು ಸಾಧ್ಯವೇ ಎನ್ನುವುದು, ಸದಾ ಹುಡುಕಾಟ, ಸಾಮಾಜಿಕ ಬದಲಾವಣೆಯ ಅನ್ವೇಷಣೆ, ಅವರಲ್ಲಿ ಮನೆ ಮಾಡಿತ್ತು." ಇಂತಹ ಆದರ್ಶನೀಯ ವಿದ್ಯಾರ್ಥಿ ಜೀವನ ಮತ್ತು ಶಿಕ್ಷಣ ನಮಗೆ ಇಂದಿಗೂ ಮಾದರಿಯಾಗಿದೆ. ಹಾಗೆಯೇ ಪ್ರಸ್ತುತ ಸಂದರ್ಭದಲ್ಲಿ ಶೋಷಿತ ಸಮುದಾಯ ಬಿ.ಬಸವಲಿಂಗಪ್ಪ ಅವರಂತೆ ಶಿಕ್ಷಣಪಡೆದು ಸಮುದಾಯ ಕಟ್ಟುವ ಕಾಯಕದಲ್ಲಿ ತೊಡಗುವ ಅಗತ್ಯವಿದೆ. "ಓದುವ ಹವ್ಯಾಸವೆಂಬುದು ಅವರಿಗೆ ಚಿಕ್ಕಂದಿನಿಂದ ಬಂದದ್ದು ಎಂಬುದನ್ನು ಅವರೇ ಎಷ್ಟೋ ಸಲ ನೆನಪಿಸಿಕೊಳ್ಳುತ್ತಿದ್ದರಂತೆ. ಅವರು ಸಣ್ಣವರಿದ್ದಾಗ ಮನೆಯಲ್ಲಿಯೇ ಆಗಾಗ ಹಿರಿಯರು ಕೊಡುತ್ತಿದ್ದ ದುಡ್ಡನ್ನು ಕೂಡಿ ಹಾಕಿ, ಪುಸ್ತಕ ಕೊಳ್ಳುವಷ್ಟು ದುಡ್ಡು ಸಂಗ್ರಹವಾಗಿದೆ ಎನಿಸಿದಾಗ ಪುಸ್ತಕ ಕೊಳ್ಳುತ್ತಿದ್ದರಂತೆ ಈ ಪರಿಪಾಠವನ್ನು ಅವರು ದೊಡ್ಡವರಾದ ಮೇಲೂ ಬಿಟ್ಟಿರಲಿಲ್ಲ ತಾವು ಓದಿದ್ದರ ಬಗ್ಗೆ ಆಗಾಗ

ಮಕ್ಕಳೊಟ್ಟಿಗೆ ಚರ್ಚಿಸುತ್ತಿದ್ದರಂತೆ." ಇದು ಬಸವಲಿಂಗಪ್ಪ ಅಧ್ಯಯನ ಶೀಲವನ್ನು ತಿಳಿಸುತ್ತದೆ.

## 3. ಪ್ರಭಾವಿತರು

ಹರಿಹರದಲ್ಲಿ ಜವಳಿ ಬಸಪ್ಪ ಅವರ ಮಕ್ಕಳೆಂದರೆ ಶಿಸ್ತು, ಸಮಯ ಪಾಲನೆ, ಮಾನವೀಯತೆಗೆ ಹೆಸರಾದವರು. ಆ ಕಾಲದಿಂದಲೂ "ಅಂಬೇಡ್ಕರ್ ಅವರ ಚಿಂತನೆ ಬಿ. ಬಸವಲಿಂಗಪ್ಪ ಅವರ ಮನೆಯಲ್ಲಿತ್ತು". ಈ ರಾಜ್ಯದ ಹಿರಿಯ ರಾಜಕೀಯ ಮುತ್ಸದ್ದಿ ಕೆ.ಎಚ್.ರಂಗನಾಥ್ ಅವರ ತಂದೆ ಹರಿಹರಪ್ಪ ಅವರೇ ಬಿ.ಬಸವಲಿಂಗಪ್ಪ ಅವರ ಮೇಲೆ ಪ್ರಭಾವ ಬೀರಿದ ವ್ಯಕ್ತಿಯಾಗಿದ್ದಾರೆ. ಕಾರಣ ಬ್ರಿಟಿಷ್ ಕಾಲದಲ್ಲೆ ವಿದ್ಯಾಭ್ಯಾಸ ಮಾಡಿ ಗೌರವಾನ್ವಿತ ಸರ್ಕಾರಿ ನೌಕರಿಯನ್ನು ಪಡೆದು ಹರಿಹರದ ಸುತ್ತಮುತ್ತಲಿನ ದಲಿತ ಜನಾಂಗಕ್ಕೆ ಮಾರ್ಗದರ್ಶಕರಾಗಿದ್ದರು. ಅಂಬೇಡ್ಕರ್ ಅವರ ಚಿಂತನೆಗಳು ಆ ಕಾಲದಲ್ಲಿ ಇವರ ಮನೆಯಲ್ಲಿದ್ದರಿಂದ ಅವರ ಹೋರಾಟದ ಬದುಕು ಜೀವಂತವಾಗಿತ್ತು. ಶಿಕ್ಷಣದಿಂದಲೇ ಹೋರಾಟವನ್ನು ಪ್ರಾರಂಭಿಸಿ ಅದನ್ನೆ ಒಂದು ಅಸ್ತ್ರವನ್ನಾಗಿ ಬಳಸಿ ಸಂವಿಧಾನದ ಮುಖಾಂತರ ತಮ್ಮ ಜನತೆಗೆ ಅಂಬೇಡ್ಕರ್ ರಕ್ಷಣೆಯನ್ನು ಒದಗಿಸಿದ ಪರಿ ಬಸವಲಿಂಗಪ್ಪ ಅವರನ್ನು ಪ್ರಭಾವಿಸಿದೆ. ಬುದ್ಧ ಗುರುವಿನ ತ್ರಿರತ್ನಗಳಾದ ಪ್ರಜ್ಞಾ, ಸಮತಾ, ಕರುಣಾ ಇವುಗಳು ಬಿ.ಬಸವಲಿಂಗಪ್ಪ ಅವರನ್ನು ಆಕರ್ಷಿಸಿದೆ. ಬುದ್ದರು ಕಂಡುಕೊಂಡ ಸತ್ಯದ ಮಾರ್ಗವನ್ನು ಅವರು ಅನುಸರಿಸಿದ ಸಮಾನತೆಯ ತತ್ವವನ್ನು, ಪ್ರಬುದ್ಧ ಭಾರತದ ನಿರ್ಮಾಣದ ಪ್ರಯತ್ನ ಇವರನ್ನು ಸೆಳೆದಿದೆ. ಹಾಗೆಯೇ 12ನೇ ಶತಮಾನದಲ್ಲಿ ಜಾತಿ ವಿನಾಶದ ಕಡೆಗೆ ಬೆಳಕು ಚೆಲ್ಲಿ ತನ್ನನ್ನೇ ಅರ್ಪಿಸಿಕೊಂಡ ಶ್ರೀ ಬಸವೇಶ್ವರರ ಪ್ರಭಾವ ಇವರನ್ನು ಹೆಚ್ಚಾಗಿ ಕಾಡಿದೆ. ಅಲ್ಲದೆ ಇವರು ಅನುಸರಿಸಿದ ಸಮಾನತೆ ತತ್ವ, ಸ್ತ್ರೀ-ಪುರುಷ ಎಂದು ವರ್ಗೀಕರಿಸದೆ, ಲಿಂಗತಾರತಮ್ಯ ಮಾಡದೆ, ತಮ್ಮ ಅನುಭವ ಮಂಟಪದಲ್ಲಿ ಮಹಿಳೆಯರಿಗೆ ಸಮಾನ ಅವಕಾಶಗಳನ್ನು ಕಲ್ಪಿಸಿ, ಸಹೋದರತ್ವದಿಂದ ಈ ಜಾತಿ ರಹಿತ ಸಮಾಜವನ್ನು ಕಟ್ಟುವ, ಹಾಗೆಯೇ ಹಿಂದೂ ಸಮಾಜದಲ್ಲಿ ತುಂಬಿದ್ದ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ತೆಗೆದುಕೊಂಡ ಕ್ರಮ ಅವಿಸ್ಮರಣೀಯ ಈ ಸಂದರ್ಭದಲ್ಲಿ ತಮ್ಮ ಪ್ರಾಣಕ್ಕೆ ತೊಂದರೆ ಬಂದರು ಸಹ ಅದನ್ನು ಸರಿಪಡಿಸುವಲ್ಲಿ ಶ್ರಮಿಸಿದ್ದು ಹಾಗೂ ಅವರ ತ್ಯಾಗಮಯ ಬದುಕು ಬಸವಲಿಂಗಪ್ಪ ಅವರನ್ನು ಸಮಾಜ ಸೇವೆಗೆ, ದಲಿತರ ಅಭಿವೃದ್ದಿಗೆ ತಮ್ಮನ್ನು ಅರ್ಪಿಸಿಕೊಳ್ಳಲು ಅನುವು ಮಾಡಿ ಕೊಟ್ಟಿದೆ.

ಬಸವಲಿಂಗಪ್ಪ ಅವರು ಸೋಮಶೇಖರ ಇಮ್ರಾಪುರ ಅವರಿಗೆ ನೀಡಿದ ಸಂದರ್ಶನದಲ್ಲಿ "ಬುದ್ಧ, ಬಸವೇಶ್ವರ, ಅಂಬೇಡ್ಕರ್ ಇವರು ನನ್ನ ಮೇಲೆ ಪ್ರಭಾವ ಬೀರಿದ್ದಾರೆ" ಎಂದು ಪ್ರತಿಜ್ಞಾಪೂರ್ವಕವಾಗಿ ಹೇಳಿದ್ದಾರೆ. ಈ ಮಹಾಮಾನವತಾವಾದಿಗಳ ಬದುಕು ಮತ್ತು ಹೋರಾಟದ ಕ್ರಮ ಇವರನ್ನು ಆಕರ್ಷಿಸಿದೆ. ಬಿ. ಬಸವಲಿಂಗಪ್ಪ ಅವರು "ಕಪ್ಪು ಸಾಹಿತ್ಯವನ್ನು, ಮಾರ್ಟಿನ್ ಲೂಥರ್ ಕಿಂಗ್, ನೆಲ್ಸನ್ ಮಂಡೇಲಾ ಅವರ ಹೋರಾಟದ ಹೆಜ್ಜೆಗಳನ್ನು, ಅವರ ತ್ಯಾಗಮಯ ಬದುಕನ್ನ ಚೆನ್ನಾಗಿ ಅರ್ಥೈಸಿಕೊಂಡು ಪ್ರಭಾವಿತರಾಗಿದ್ದರು. ಹಾಗೆಯೇ ಇವೆಲ್ಲವೂ ಅವರ ಹೃದಯಕ್ಕೆ ತುಂಬಾ ಹತ್ತಿರವಾದ ವಿಷಯವಾಗಿತ್ತು" ಅಲ್ಲದೆ ಲೋಹಿಯ ಅವರ ಪ್ರಭಾವದಿಂದ 'ಉಳುವವನೇ ಭೂಮಿಯ ಒಡೆಯ', ಜಮೀನ್ದಾರಿ ಪದ್ಧತಿಯ ರದ್ದತಿ ನಿಯಮ ರೂಪಿಸುವಲ್ಲಿ ಶ್ರಮಿಸಿದವರಾಗಿದ್ದಾರೆ. ಬಸವಲಿಂಗಪ್ಪ ಅವರು ಬುದ್ದನನ್ನು ಚೆನ್ನಾಗಿ ಓದಿಕೊಂಡಿದ್ದರು ಮತ್ತು ಅಂಬೇಡ್ಕರ್ ಮುಖಾಂತರ ಬೌದ್ದ ಧರ್ಮವನ್ನು ಅರಿತುಕೊಂಡಿದ್ದರು. ಅಂಬೇಡ್ಕರ್ ಅವರು ನಾಗಪುರದಲ್ಲಿ 1956ರಲ್ಲಿ ಬೌದ್ಧ ಧರ್ಮಕ್ಕೆ ಸೇರಿದ್ದನ್ನು "ಬಹಳ ಅಭಿಮಾನ ಪಟ್ಟುಕೊಂಡು ಪ್ರಭಾವಿತರಾಗಿದ್ದರು." ಅವರು ಬದುಕಿನ ಕಾಲದಲ್ಲಿ ಯಾವ ಮಠ ಮಾನ್ಯಗಳಿಗೂ ಭೇಟಿ ಕೊಡದೆ, ಪುರಸ್ಕರಿಸದೆ ದೂರ ಉಳಿದಿದ್ದರು. ಗೊಡ್ಡು ಸಂಪ್ರದಾಯ, ಕಂದಾಚಾರ, ಮೂಢನಂಬಿಕೆಗಳಿಂದ ದೂರ ಉಳಿದಿದ್ದರು. ತಂದೆ ಪೆರಿಯಾರರ ಸ್ವಾಭಿಮಾನಿ ಚಳುವಳಿಗೆ ಹೆಜ್ಜೆ ಹಾಕಿದರು. "ದೇವರ ಪಟಗಳನ್ನು ಚರಂಡಿಗೆ ಎಸೆಯಿರಿ" ಎಂದು ದಲಿತರಿಗೆ ಕರೆ ಕೊಟ್ಟರು ಬದುಕಿದಷ್ಟು ಕಾಲ ಅದೇ ರೀತಿ ನಡೆದರು.

ಕೆ.ವಿ.ಪುಟ್ಟಪ್ಪನವರ ಸಾಹಿತ್ಯವನ್ನು ಅಪಾರವಾಗಿ ಇಷ್ಟ ಪಡುತ್ತಿದ್ದರು. ಅವರ ನಿರೂಪಣಾ ತಂತ್ರವನ್ನು ಬಿ. ಬಸವಲಿಂಗಪ್ಪ ಅವರು ತುಂಬಾ ಮೆಚ್ಚಿ ಕೊಂಡಿದ್ದರು. ಜೊತೆಗೆ ಬೇಂದ್ರೆಯವರ ಸಾಹಿತ್ಯ, ಡಿ.ವಿ.ಜಿ ಅವರ ಮಂಕು ತಿಮ್ಮನ ಕಗ್ಗ ಮೊದಲಾದವನ್ನು ಸಹಾ ಓದುತ್ತಿದ್ದರು. ಬಸವಣ್ಣ ಅವರ ವಚನಗಳನ್ನು ತುಂಬಾ ಇಷ್ಟ ಪಡುತ್ತಿದ್ದರು. ಸಂವಿಧಾನದ ಪ್ರತಿಯೊಂದು ಆಕ್ಟ್ ಹಾಗೂ ಪುಟವನ್ನು ಕರಗತ ಮಾಡಿಕೊಂಡಿದ್ದರು. ಅಂಬೇಡ್ಕರ್ ಸಾಹಿತ್ಯದ ಮೇಲೆ ಪ್ರಭುತ್ವವನ್ನು ಪಡೆದಿದ್ದರು. ಓದುವ ಸಾಹಿತ್ಯಕ್ಕೆ ಸಂಬಂಧ ಪಟ್ಟಂತೆ ಅವರು ಕೆಲವೊಂದು ಲೇಖನದ ಸಾಹಿತ್ಯವನ್ನು ಹೆಚ್ಚು ಇಷ್ಟ ಪಟ್ಟರೂ, ಇಂಥ ಸಾಹಿತ್ಯವನ್ನು, ಇಂಥ ಲೇಖಕರ ಸಾಹಿತ್ಯವನ್ನು ಓದಬಾರದೆಂಬ ಯಾವ ಪೂರ್ವಾಗ್ರಹಗಳನ್ನು ಇಟ್ಟುಕೊಂಡಿರಲಿಲ್ಲ. ಒಳ್ಳೆಯ ಸಾಹಿತ್ಯವೆಲ್ಲವನ್ನೂ

ಓದುತ್ತಿದ್ದರು. ತಮ್ಮನ್ನು ಕಾಣಲುಬರುವ ಜನರಿಗೆ ಪುಸ್ತಕಗಳನ್ನು ಓದಲು ಉತ್ತೇಜಿಸುತ್ತಿದ್ದರು." ಇಂತಹ ಕ್ರಮಬದ್ಧನಾದ ವ್ಯಕ್ತಿ ದಲಿತರಲ್ಲಿ ಸಿಗುವುದು ಅಪರೂಪ. "ಅವರು ಜೀವನದುದ್ದಕ್ಕೂ ಕೆಲವು ವಿಚಾರಗಳನ್ನು ನಂಬಿಕೊಂಡು, ಆ ವಿಚಾರಗಳನ್ನು ಹೇಳುತ್ತಾ, ಅದರಿಂದ ಉಂಟಾದ ವಿವಾದಗಳನ್ನು ಕಂಡು ಸಂತೋಷ ಪಡುತ್ತಾ ಮತ್ತು ವರ್ಣರಂಜಿತವಾದ ಘಟನೆಗಳನ್ನು ಸೃಷ್ಟಿಮಾಡುತ್ತಾ ಇದ್ದರು. ವಿವಾದ ಅನ್ನುವುದು ಅವರಿಗೆ ಸಂತಸದ ವಿಷಯವಾಗಿತ್ತು. ಏಕೆಂದರೆ ಜನ ಮಂಕಾಗಿದ್ದಾರೆ, ಜನ ಯಾವುದೇ ಉತ್ಸಾಹ ಇಲ್ಲದೆ ಇದ್ದಾರೆ. ಇಂಥ ಜನರಿಗೆ ಲವಲವಿಕೆ ಬರಬೇಕಾದರೆ ಏನಾದರೂ ಆಘಾತವನ್ನೇ ಕೊಡಬೇಕು ಎನ್ನುವುದರಲ್ಲಿ ಅವರಿಗೆ ನಂಬಿಕೆ ಇತ್ತು. ಒಂದು ಹೇಳಿಕೆಯನ್ನು ಕೊಟ್ಟು ಅದರಿಂದ ಗೊಂದಲ ಉಂಟಾದರೆ ಉಳಿದ ರಾಜಕಾರಣಿಗಳು ಮಾಡುವ ಹಾಗೆ ಕೂಡಲೆ ಅದನ್ನು ನಿರಾಕರಿಸುತ್ತಿರಲಿಲ್ಲ. ಅದರಿಂದ ಉಂಟಾದ ಘರ್ಷಣೆ, ಚರ್ಚೆ, ಚಳುವಳಿಯನ್ನು ನೋಡಿ ಅವರಿಗೆ ಒಂದು ರೀತಿಯ ಸಂತೋಷವೇ ಆಗುತ್ತಿತ್ತು." ಈ ರೀತಿಯ ವಿಶಿಷ್ಟವಾದ ವಿಷಯಗಳಿಂದ ಪ್ರಭಾವಿತರಾಗಿದ್ದರು. ಹಾಗೆಯೇ ಪಾಶ್ಚಾತ್ಯ ರಾಜ್ಯದ ಚಿಂತಕರಾದ ಎಚ್.ಜೆ.ಲಾಸ್ಕಿ ಅವರ ರಾಜಕೀಯ ಚಿಂತನೆಗಳಿಂದ ಪ್ರಭಾವಿತರಾಗಿದ್ದರು. ಸದನದಲ್ಲಿ ಮಾತನಾಡುವ ಸಂದರ್ಭದಲ್ಲಿ ಇವರ ಹೇಳಿಕೆಗಳನ್ನು ಉಲ್ಲೇಖಿಸಿರುವುದನ್ನು ಕಾಣಬಹುದು.

## 4. ನ್ಯಾಯವಾದಿ

ಬಸವಲಿಂಗಪ್ಪ ಅವರ ತಂಗಿ ನಿಂಗಮ್ಮನ ಗಂಡ ಶ್ಯಾಗಲಿ ಕರಿಯಪ್ಪ ಅವರು ಪೋಲೀಸ್ ಇಲಾಖೆಯಲ್ಲಿ ಬೆಂಗಳೂರಿನಲ್ಲಿ ಸೇವೆ ಸಲ್ಲಿಸುತ್ತಿದ್ದರು. ಇವರ ಒತ್ತಾಯದ ಮೇರೆಗೆ ಬಸವಲಿಂಗಪ್ಪ ವಕೀಲ ವೃತ್ತಿ ಪ್ರಾರಂಭಿಸಲು ಬೆಂಗಳೂರಿಗೆ ತೆರಳಿದರು. ಬೆಂಗಳೂರಿನಲ್ಲಿ ಹೆಸರಾಂತ ವಕೀಲರಾದ "ನಿಟ್ಟೂರು ಶ್ರೀನಿವಾಸ್ ರಾವ್ ಅವರ ಬಳಿ ಸಹಾಯಕ ವಕೀಲರಾಗಿ ಕೆಲಸ ಪ್ರಾರಂಭಿಸುತ್ತಾರೆ. ಆನಂತರದ ದಿನದಲ್ಲಿ ಸ್ವಂತ ವಕೀಲ ಕಛೇರಿಯನ್ನು ತೆರೆಯುತ್ತಾರೆ." ಎಂದು ಅವರ ಸಹೋದರ ಡಾ|| ಗುರುಸಿದ್ದಪ್ಪ ತಿಳಿಸುತ್ತಾರೆ.

ಉಚ್ಚ ನ್ಯಾಯಾಲಯದಲ್ಲಿ ವಕೀಲ ವೃತ್ತಿ ಆರಂಭಿಸಿದ ಇವರ ವಾಕ್ಚಾತುರ್ಯ, ಸತ್ಯದ ಶೋಧನೆ, ನಿಷ್ಠುರತೆ ಎಲ್ಲವೂ ಇತರರನ್ನು ನಾಚಿಸುಂತಿದ್ದವು. ವಕೀಲರಾಗಿ ಬಸವಲಿಂಗಪ್ಪ ಹೆಸರುವಾಸಿಯಾದರು.

ಅವರಿಗಿದ್ದ ಸಾಮಾಜಿಕ ಕಾಳಜಿ, ಅಸಹಾಯಕರ ಮೇಲಿನ ಅದಮ್ಯ ಪ್ರೀತಿ ಇವು ಮನೆಮಾತಾಗಿ ಬೆಳೆಯಲಾರಂಭಿಸಿದವು. ವೃತ್ತಿಯಲ್ಲಿ ಹೆಸರುಗಳಿಸಿ ಇದರಿಂದ ಬಂದಂತಹ ಸ್ವಲ್ಪ ಹಣವನ್ನು ತಮ್ಮ ಜನಾಂಗದ ಏಳಿಗೆಗಾಗಿ ಬಳಸುತ್ತಾರೆ. 1949 ರಿಂದ 1962ರವರೆಗೆ ರಾಜಕಾರಣದಲ್ಲಿ ಸಕ್ರಿಯವಾಗಿದ್ದ ಬಸವಲಿಂಗಪ್ಪ ಅವರು ಪರಾಭವಗೊಂಡು ನಂತರ ವಕೀಲ ವೃತ್ತಿಗೆ ಮತ್ತೆ ಜೀವ ತುಂಬಿ ಉಷಾ ಬಿಲ್ಡಿಂಗ್ ಬಳೇಪೇಟೆ, ಬೆಂಗಳೂರು. ಇಲ್ಲಿ ವಕೀಲ ಕಛೇರಿಯನ್ನು ತೆರೆದು ದಲಿತ ಪರ ಮೊಕದ್ದಮೆಯನ್ನು ದಾಖಲಿಸಿಕೊಂಡು ನ್ಯಾಯಾಲಯಗಳಲ್ಲಿ ವಾದಿಸತೊಡಗಿದರು. ಇದರೊಟ್ಟಿಗೆ ಪ್ರಗತಿಪರ ವಿಚಾರಗಳು ಮತ್ತು ಭಾಷೆಯಂತಹ ವಿಚಾರಣೆಗಳಿಂದ ಕೂಡಿದ್ದ ಮೊಕದ್ದಮೆಗಳನ್ನು ನಡೆಸುತ್ತಿರುತ್ತಾರೆ". ಬಿ.ಬಸವಲಿಂಗಪ್ಪ ಅವರೇ ತುಂಬಿದ ವಿಧಾನ ಸಭಾ ಅಧಿವೇಶನದಲ್ಲಿ "ಶ್ರೀ ವಾಟಾಳ್ ನಾಗರಾಜ್‌ರವರು ಕನ್ನಡ ಚಳುವಳಿಗಾರರು, ಬಹಳ ಹಿಂದಿನಿಂದಲೂ ಬೆಂಗಳೂರಿನಲ್ಲಿ ಕನ್ನಡಕ್ಕಾಗಿ ಏನೇನು ಚಳುವಳಿ ಮಾಡಿದ್ದಾರೆ ಅವರ ಕೇಸುಗಳನ್ನು ನಡೆಸಿದ್ದೇನೆ. ಅವರು ನನಗೆ ಕಕ್ಷಿದಾರರು. ಆದರೆ ಫೀಸ್ ಕೊಟ್ಟಿಲ್ಲ" ಎನ್ನುತ್ತಾರೆ. ಇದು ಕನ್ನಡಕ್ಕಾಗಿ ತಮ್ಮ ವಕೀಲ ವೃತ್ತಿಯಲ್ಲಿ ಹೋರಾಡಿದ್ದನ್ನು ವ್ಯಕ್ತಪಡಿಸುತ್ತಾರೆ. ಹಾಗೆಯೇ ಸಮಾಜದಲ್ಲಿ ತುಂಬಿದ ಅಸ್ಪೃಶ್ಯತೆ, ಮೂಢನಂಬಿಕೆ, ಕಂದಾಚಾರ ಇವುಗಳನ್ನು ವಿರೋಧಿಸುವ ಕಾರ್ಯದಲ್ಲಿ ತೊಡಗಿರುತ್ತಾರೆ.

ಇದೇ ಸಂದರ್ಭದಲ್ಲಿ ಬೆಂಗಳೂರು ಗ್ರಾಮೀಣ ಸರ್ಕಾರಿ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದ ಕಾಳೇಗೌಡ ನಾಗವಾರ ಅವರು ಬಸವಣ್ಣ, ಕುವೆಂಪು, ಲೋಹಿಯ, ಅಂಬೇಡ್ಕರ್ ಅವರ ವಿಚಾರ ಧಾರೆಗಳಿಂದ ಪ್ರಭಾವಿತರಾಗಿ ಅಸ್ಪೃಶ್ಯತೆ, ಜಾತಿಭೇದ ಇದೆಲ್ಲ ತಪ್ಪು ಎಂದು ಪ್ರತಿಭಟಿಸುತ್ತಿದ್ದರು. ದಲಿತರ ಕೇರಿಗಳಲ್ಲಿ ತಂಗಿದ್ದು, ಅವರಲ್ಲಿ ಕೀಳರಿಮೆ ಹೋಗಲಿ ಅನ್ನುವುದಕ್ಕಾಗಿ ಸಹ ಭೋಜನ ಮಾಡುವುದು, ಹಾಗೆಯೇ ನಾವೆಲ್ಲಾ ಸಹೋದರರ ರೀತಿಯಲ್ಲಿ ಬದುಕಬೇಕು ಅನ್ನುವ ಚಳುವಳಿಯನ್ನು ಮಾಡುತ್ತಾ ಇದ್ದರು. ಇವೆಲ್ಲವೂ ಬಸವಲಿಂಗಪ್ಪ ಅವರಿಗೆ ಪತ್ರಕರ್ತರಾದ ಕಲ್ಲೇಶಿವೋತ್ತಮರಾವ್ ಇವರ ಮೂಲಕ ತಿಳಿದಿದ್ದವು. ಮಾಜಿ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯ ಅವರು ಚನ್ನಪಟ್ಟಣದ ಬಳಿ ಇರುವ ಕೆಂಗಲ್ ಹನುಮಂತರಾಯಸ್ವಾಮಿ ದೇವಸ್ಥಾನವನ್ನು ಪುನರುಜ್ಜೀವನ ಗೊಳಿಸಲು ಸಾರ್ವಜನಿಕರಿಂದ, ಬಡ ಜನರಿಂದ ಚಂದಾ ವಸೂಲಿ ಮಾಡಿ ಲಕ್ಷಾಂತರ ರೂಪಾಯಿಯನ್ನು ಇದಕ್ಕಾಗಿ

ಖರ್ಚು ಮಾಡುವುದು ಸರಿಯಲ್ಲ, ಇದು ತಪ್ಪು ಎಂದು ಕಾಳೇಗೌಡ ನಾಗವಾರ ಅವರು ಪ್ರತಿಭಟಿಸಿ, ಅದರ ಬದಲು ಶಾಲೆ ಕಟ್ಟಿಸಿ, ಕಾಲೇಜು, ವಿದ್ಯಾರ್ಥಿನಿಲಯ, ಆಸ್ಪತ್ರೆ, ಕೆರೆಕಟ್ಟೆ ಆಗಬೇಕು, ಇವುಗಳ ನಿರ್ಮಾಣವಾಗಬೇಕು. ದೇವಸ್ಥಾನಕ್ಕೆ ಹಣ ವಿನಿಯೋಗಿಸಬಾರದು ಎಂದು ಪತ್ರಿಕೆಗಳಿಗೆ ಬರೆದಿದ್ದರು." ಇದನ್ನು ವಕೀಲರಾಗಿ ಸೇವೆ ಸಲ್ಲಿಸುತ್ತಿದ್ದ ಬಸವಲಿಂಗಪ್ಪ ಅವರು ಪತ್ರಿಕೆಯಲ್ಲಿ ಬಂದಿದ್ದನ್ನು ಗಮನಿಸಿ ಸಂತೋಷಪಟ್ಟು ಕಾಳೇಗೌಡ ನಾಗವಾರ ಅವರಿಗೆ ಒಂದು ಪತ್ರವನ್ನು ದಿನಾಂಕ 16-06-1970ರಂದು ಬರೆಯುತ್ತಾರೆ. ಶ್ರೀ. ಕಾಳೇಗೌಡರಿಗೆ "ಸಪ್ರೇಮ ವಂದನೆಗಳು. 'ಪ್ರಜಾವಾಣಿ' ದಿನಪತ್ರಿಕೆಯಲ್ಲಿ ಪ್ರಕಟವಾಗಿರುವ ನಿಮ್ಮ ಲೇಖನವನ್ನು ನೋಡಿ, ನನಗೆ ಹಿಡಿಸಲಾರದ ಆನಂದವಾಯಿತು. ಶ್ರೀ ಕೆಂಗಲ್ ಹನುಮಂತಯ್ಯನವರಿಗೆ, ನಿಮ್ಮ ಲೇಖನದಲ್ಲಿ ಬರೆದಿರುವ ವಿಷಯಗಳನ್ನು ಹೀಗೆ ಎರಡು ವರ್ಷದ ಹಿಂದೆಯೇ ತಿಳಿಸಿದ್ದೆ. ಅದು ಅವರಿಗೆ ರುಚಿಸದಾಯಿತು. ಕಂದಾಚಾರದ ಜ್ಞಾನ ವಿರೋಧಿ ಆಚರಣೆಗಳು ಕೆಲವು ಜನರ ಹೊಟ್ಟೆ ಹೊರೆಯುವ ಸಾಧನಗಳಾಗಿವೆ. ಅದೇ ಹಣದಿಂದ ಜ್ಞಾನ ಮಂದಿರಗಳನ್ನು ತೆರೆಯಿರಿ ಎಂದು ಅವರಿಗೆ ಹೇಳಿದ ಬುದ್ಧಿ ಮಾತುಗಳು ಹಿಡಿಸಲಿಲ್ಲ. ಇವರದೊಬ್ಬರದೇ ಅಲ್ಲ, ಇನ್ನೂ ಹಲವಾರು ಜನ ರಾಜಕೀಯ ಜೀವನದಲ್ಲಿ ಉನ್ನತ ಸ್ಥಾನವನ್ನು ಅಲಂಕರಿಸಿದವರೂ ಕೂಡ, ಇಂಥಾ ಮೂಢ ಕಂದಾಚಾರ ವಿಚಾರಗಳಿಗೆ ಒಳಗಾಗಿದ್ದಾರೆ. ಎಲ್ಲಿಯವರೆವಿಗೆ ಇಂಥಾ ಜನಗಳು ರಾಜಕೀಯ ಜೀವನದಲ್ಲಿ ಇರುವರೋ ಅವರ ಪ್ರಭಾವದಿಂದ ಇಡೀ ಸಮಾಜವೇ ದುಸ್ಥಿತಿಗೆ ಈಡಾಗುತ್ತದೆ. ಭಕ್ತಿಯಿಂದ ದೇವರನ್ನು ಆರಾಧಿಸುವ ಮಾರ್ಗವು ನಮ್ಮ ಜನರನ್ನು ಮೂಕರನ್ನಾಗಿ ಮಾಡಿದೆ. ಜ್ಞಾನದಿಂದ, ಕೆಲಸದಿಂದ, ದೇವರ ಆರಾಧನೆಗೆ ಚಳುವಳಿ ಹೂಡುವುದು ಅವಶ್ಯವಾಗಿದೆ; ಸಕಾಲವೂ ಆಗಿದೆ. ನಿಮ್ಮಂಥ ಧೈರ್ಯವಂತ ವಿಚಾರಶಕ್ತಿ ಇರುವ ಯುವಕರು ಮುಂದಿನ ಭವಿಷ್ಯವನ್ನು ತಮ್ಮ ಕೈಯಲ್ಲಿಯೇ ಹಿಡಿದುಕೊಂಡು ಜನತೆಗೆ ಮಾರ್ಗದರ್ಶನ ಮಾಡಬೇಕಿದೆ. ನಿಮಗೆ ಯಶಸ್ಸನ್ನು ಕೋರುವೆ. ಬೆಂಗಳೂರಿಗೆ ಬಂದಾಗ ನನ್ನನ್ನು ಕಾಣಿರಿ. ಶ್ರೀ ಕಲ್ಲೇಶಿವೋತ್ತಮರಾವ್ ಅವರು ನಿಮ್ಮ ಬಗ್ಗೆ ಬಹುವಾಗಿ ಹೇಳಿದ್ದಾರೆ ಎಂದು ಪತ್ರದಲ್ಲಿ ತಿಳಿಸಿದ್ದಾರೆ. ಇದು ಕಾಳೇಗೌಡ ನಾಗವಾರ ಅವರಂತಹ ಪ್ರಗತಿಪರ ಲೇಖಕರನ್ನು, ಮಾನವ ಪರ ಹೋರಾಟಗಾರರನ್ನು ಬೆಂಬಲಿಸುತ್ತಿದ್ದರು ಎಂಬುದಕ್ಕೆ ನಿದರ್ಶನವಾಗಿದೆ. ಇಂತವರನ್ನು ದಲಿತ ಸಮುದಾಯವನ್ನು ಒಗ್ಗೂಡಿಸುವ, ಜಾಗೃತಿಗೊಳಿಸುವ

ಕಾರ್ಯಕ್ಕೆ ಬಳಸಿಕೊಳ್ಳುತ್ತಿದ್ದರು. ವಕೀಲ ವೃತ್ತಿಯಲ್ಲಿದ್ದಾಗ ಎಷ್ಟೋ ದಲಿತ ಬಂಧುಗಳು ಭೂಮಿಗಾಗಿ ಹೋರಾಡುತಿದ್ದುದನ್ನು ಕಂಡು ಮರುಗಿದ್ದಾರೆ. ಮುಂದೆ ಅವರು ಕಂದಾಯ ಸಚಿವರಾಗಿ ಉಳುವವನೇ ಭೂಮಿಯ ಒಡೆಯನನ್ನಾಗಿಸಲು ಈ ವಕೀಲ ವೃತ್ತಿಯಲ್ಲಿ ಕಂಡುಂಡ ದಲಿತರ ಭೂಮಿಯ ಪ್ರಶ್ನೆಗೆ ಶಾಶ್ವತವಾಗಿ ಪರಿಹಾರವನ್ನು ದೊರಕಿಸಿಕೊಡುವಲ್ಲಿ ದುಡಿದರು. ಅಸ್ಪೃಶ್ಯತಾ ಆಚರಣೆ ವಿರುದ್ಧ ದಲಿತರ ಮೇಲಿನ ದೌರ್ಜನ್ಯ, ದಬ್ಬಾಳಿಕೆ ವಿರುದ್ಧ ಹಾಗೂ ಭೂ ಹೋರಾಟಕ್ಕೆ ಸಂಬಂಧಿಸಿದಂತೆ ಮೊಕದ್ದಮೆಗಳನ್ನು ಸ್ವೀಕರಿಸಿಕೊಂಡು ಜಯಗಳಿಸಿ, ಹೆಸರಾಂತ ವಕೀಲರಾಗಿದ್ದರು. ಬಸವಲಿಂಗಪ್ಪ ಅವರು ಶಾಂತವೇರಿ ಗೋಪಾಲಗೌಡ ಅವರ ಅಭಿಮಾನಿಯಾಗಿದ್ದರು. ಅವರು ಬರಿಗೈ ಫಕೀರ, ಆದರೆ ಬಹಳ ಮೇಧಾವಿ ಅವರು, ಸಂಜೆಯಾದ ಮೇಲೆ ಅವರ ಆಫೀಸಿಗೆ ಹೋಗಿ ದುಡ್ಡೆಲ್ಲ ಕೊಡುತ್ತಿದ್ದರು. ಅವರು ಸ್ವಾಭಿಮಾನಿ ತೆಗೆದುಕೊಳ್ಳುತ್ತಿರಲಿಲ್ಲ. ಆಗ ಜೇಬಿಗೆ ಇಟ್ಟು ಇದು ನನ್ನದಲ್ಲ ನಿಮ್ಮದು ಅಂತ ಇದ್ದರು. ಅವರು 49ನೇ ವಯಸ್ಸಿನಲ್ಲಿ ತೀರಿಕೊಂಡಾಗ ಅವರ ತಾಯಿ ಒಂದು ಗುಡಿಸಿಲಿನಲ್ಲಿ ಇದ್ದರು. ಶಿವಮೊಗ್ಗಕ್ಕೆಲ್ಲಾ ಹೋದಾಗ ಹೋಗಿ ದುಡ್ಡು ಕೊಟ್ಟು ಮಾತನಾಡಿಸಿ ಕೊಂಡು ಬರುತ್ತಿದ್ದರು. ಕಾಗೋಡು ತಿಮ್ಮಪ್ಪರವರ ಮನೆಗೂ ಕೂಡ ಹೋಗಿ ಮಾತನಾಡಿಸಿಕೊಂಡು ಬರುತ್ತಿದ್ದರು. ಹೀಗೆ ಎಲ್ಲಾ ಪ್ರಗತಿಪರರನ್ನು ಬೆಂಬಲಿಸುತ್ತಿದ್ದರು. ನ್ಯಾಯವಾದಿಯಾಗಿದ್ದಾಗ ರಾಜ್ಯದಾದ್ಯಂತ ಸಂಚರಿಸಿ ಜನರ ಕಷ್ಟ ಸುಖಗಳಿಗೆ ಆತ್ಮೀಯವಾಗಿ ಸ್ಪಂದಿಸುತ್ತಿದ್ದರು. ಇದು ಅವರ ಮಾನವ ಪ್ರೇಮದ ಸ್ವಭಾವವನ್ನು ತಿಳಿಸುತ್ತದೆ.

## 5. ರಾಜಕೀಯದೆಡೆಗೆ

ಬಿ.ಬಸವಲಿಂಗಪ್ಪ ಅವರ ರಾಜಕೀಯ ಪ್ರವೇಶ ಆಕಸ್ಮಿಕವಾದುದೇನಲ್ಲ. ಅದೊಂದು ಪೂರ್ವ ನಿರ್ಧಾರಿತವಾದದ್ದು ಎಂಬುದು ಅವರ ಕುಟುಂಬದ ಹಿನ್ನೆಲೆಯಿಂದ ತಿಳಿದುಬರುತ್ತದೆ. ಅವರ ಸಹೋದರ ಬಿ. ನಿಂಗಪ್ಪ ತಿಳಿಸಿರುವಂತೆ ಶ್ರೀ ಹರಿಹರಪ್ಪ ಅವರೇ ಬಸವಲಿಂಗಪ್ಪ ಅವರ ರಾಜಕೀಯ ಪ್ರವೇಶಕ್ಕೆ ಕಾರಣ ದಲಿತ ಜನಾಂಗದಲ್ಲಿದ್ದ ರಾಜಕೀಯ ಅಜ್ಞಾನ ಇವರನ್ನು ಕಾಡುತಿತ್ತು. ರಾಜಕೀಯ ಪ್ರವೇಶಿಸಿ ತಮ್ಮ ಜನಾಂಗಕ್ಕೆ ಏನಾದರೂ ಸೌಲಭ್ಯ ಸೌಕರ್ಯ ಕಲ್ಪಿಸಬಹುದಲ್ಲ ಎನ್ನುವ ಕಾತುರದ ದೃಢನಿಲುವು ಇವರಲ್ಲಿತ್ತು. ಬಸವಲಿಂಗಪ್ಪ ಅವರ ಮಹಾ ಕನಸಾಗಿದ್ದ ರಾಜಕೀಯ ಕ್ಷೇತ್ರ ಇವರ ವ್ಯಕ್ತಿತ್ವಕ್ಕೆ ಸೋತು ಕದ

ತೆರೆಯಿತು. ದಲಿತರ ಕನಸಾಗಿ ರಾಜಕೀಯಕ್ಕಿಳಿದರು. ಕಾಂಗ್ರೆಸ್ ಪಕ್ಷ ಇವರ ಪ್ರಪ್ರಥಮ ರಾಜಕೀಯದ ತವರಾಯಿತು. ಬಸವಲಿಂಗಪ್ಪ ಅವರೇ ಹೇಳುವಂತೆ "ನಾನು ಓದಿ ಒಳ್ಳೆಯ ಲಾಯರ್ ಆಗಿ ದುಡ್ಡು ಸಂಪಾದಿಸಬಹುದು. ಇಲ್ಲವೆ I.A.S ಅಥವಾ I.P.S ಅಧಿಕಾರಿಯಾದರೆ ಈ ಜನರ ಬವಣೆ ನೀಗಿಸಬಹುದೆ? ಎಂದು ಕೊನೆಯದಾಗಿ ನನ್ನ ಕಣ್ಣು ಮುಂದೆ ನಿಂತದ್ದು ಡಾ.ಬಾಬಾಸಾಹೇಬ್ ಅಂಬೇಡ್ಕರ್‌ರ ವ್ಯಕ್ತಿತ್ವ. ಆ ದಾರಿಯನ್ನೆ ತುಳಿಯಲು ನಾನು ನಿರ್ಧರಿಸಿದ್ದೆ. ಒಬ್ಬ ಅತ್ಯುತ್ತಮ ರಾಜಕಾರಣಿಯಾಗಿ ಅಧಿಕಾರ ಪಡೆದು, ಆ ಅಧಿಕಾರದಿಂದ ಈ ಜನರನ್ನು ಈ ವ್ಯವಸ್ಥೆ ನಿರ್ಮಿಸಿದ ನರಕದಿಂದ ಪಾರು ಮಾಡಬೇಕೆಂದು ನಿರ್ಧರಿಸಿದೆ. ನಾನು ಕಂಡ ಕನಸು ನನ್ನ ಕೈಯಿಂದಲೇ ಸಾಕಾರಗೊಳ್ಳುವ ಭಾಗ್ಯ ಒದಗಿ ಬಂತು ವಿದ್ಯಾರ್ಥಿ ದೆಸೆಯಲ್ಲಿ ನಾನು ನಿರ್ಧರಿಸಿದಂತೆ ನಾನು ರಾಜಕಾರಣಿಯಾದೆ ಅದು ಆಕಸ್ಮಿಕವಾದುದಲ್ಲ. ಪೂರ್ವ ನಿರ್ಧಾರಿತವಾದುದು." ಎಂದು ಹುಬ್ಬಳ್ಳಿಯ ಕಾಡ ಸಿದ್ದೇಶ್ವರ ಕಲಾಮಹಾ ವಿದ್ಯಾಲಯದ ಸಾಂಸ್ಕೃತಿಕ ಕಾರ್ಯಕ್ರಮವನ್ನು ಉದ್ಘಾಟಿಸಿ ವಿದ್ಯಾರ್ಥಿಗಳನ್ನು ಕುರಿತು ರಾಜಕೀಯನಾಯಕತ್ವ ಬೆಳೆಸಿಕೊಳ್ಳುವಂತೆ ತಿಳಿ ಹೇಳಿರುತ್ತಾರೆ.

ಇವರಲ್ಲಿದ್ದ ಆಕರ್ಷಣೀಯ ವ್ಯಕ್ತಿತ್ವದಿಂದ, ಜನರ ಸೇವಾ ಮನೋಭಾವ, ನಿಷ್ಠತೆ, ಕಾನೂನಿನ ಪಾಂಡಿತ್ಯದ ಸಾಮರ್ಥ್ಯದಿಂದ "1949ರಲ್ಲಿ ಕಾಂಗ್ರೆಸ್ ಪಕ್ಷವನ್ನು ಸೇರಿ ಒಬ್ಬ ಪ್ರಾಮಾಣಿಕ ದಲಿತ ರಾಜಕಾರಣಿಯಾಗಿ ಹೊರಹೊಮ್ಮಿದರು. ರಾಜಕೀಯ ಪ್ರವೇಶಿಸಿ 1950ರಲ್ಲಿ ಬೆಂಗಳೂರು ನಗರ ಸಭೆಗೆ ಅವಿರೋಧವಾಗಿ ಟೌನ್‌ಹಾಲ್ ವಿಭಾಗದಿಂದ ಸದಸ್ಯರಾಗಿ ಆಯ್ಕೆಯಾದರು. ಇವರ ಕ್ರಿಯಾಶೀಲತೆಯಿಂದ ಕಾಂಗ್ರೆಸ್ ಪಕ್ಷದಲ್ಲಿ ಇವರ ಬಗ್ಗೆ ಅಪಾರವಾದ ಭರವಸೆಯುಂಟಾಯಿತು. ಈ ಕಾರಣದಿಂದ ಅವರು ನಗರ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ನೇಮಕಗೊಳ್ಳುತ್ತಾರೆ. ಅಧಿಕಾರವೆನ್ನುವುದು ಮೊದಲು ಶೋಷಣೆ ಅನುಭವಿಸುತ್ತಿರುವವರ ಕಣ್ಣಿನ ಯಾತನೆಯನ್ನು ಗಮನಿಸಬೇಕು ಎಂಬುದು ಬಸವಲಿಂಗಪ್ಪ ಅವರ ಖಚಿತ ನಿಲುವಾಗಿತ್ತು. ಆದ್ದರಿಂದ ನಗರಸಭೆಯಲ್ಲಿನ ಪೌರಕಾರ್ಮಿಕರ ಸಮಸ್ಯೆಗಳತ್ತ ಅವರ ಕರುಳನೋಟ ಹರಿಯಿತು. ಅವರ ಸಮಸ್ಸೆಗಳನ್ನು ಗಂಭೀರವಾಗಿ ಅಧ್ಯಯನ ಮಾಡಿದರು. ಆ ಸಮಸ್ಸೆಗಳಿಗೆ ಸೂಕ್ತ ಪರಿಹಾರವನ್ನು ರೂಪಿಸುವುದರ ಮೂಲಕ ಪೌರಕಾರ್ಮಿಕರ ಕಣ್ಣಲ್ಲಿ ಸ್ವಾತಂತ್ರ್ಯದ ಮಿಂಚನ್ನು ಹೊಳೆಸಿದರು.

ಅಲ್ಲದೆ ಮುಂದೆ ಪೌರಾಡಳಿತ ಸಚಿವರಾಗಿ ಇವರ ಬಗ್ಗೆ ಬಹಳಷ್ಟು ಸುಧಾರಣಾ ಕಾನೂನುಗಳನ್ನು ಜಾರಿಗೆ ತಂದು ಅವರ ಮನದಲ್ಲಿ ಅಳಿಸಲಾಗದ ವ್ಯಕ್ತಿಯಾಗಿ ಬಸವಲಿಂಗಪ್ಪ ಅವರು ಉಳಿದಿದ್ದಾರೆ.

ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ್ದರೂ ಇಡೀ ರಾಷ್ಟ್ರ ಒಂದು ಪರಕೀಯತೆಯ ನೋವಿನಿಂದ ನರಳುತ್ತಿತ್ತು. ಎಲ್ಲೆಡೆ ಭಾಷೆಯ, ಪ್ರಾಂತ್ಯದ ಏಕೀಕರಣ ಕುರಿತ ಮಾತುಗಳು ಕೇಳಿಬರುತ್ತಿದ್ದವು ಅದರಲ್ಲೂ ಅಸ್ಪೃಶ್ಯರಲ್ಲಿ ಅಗಾಧವಾದ ಅನಾಥ ಪ್ರಜ್ಞೆ ನಿರ್ಮಾಣವಾಗಿತ್ತು. ಇಂಥ ಸಂದರ್ಭದಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ಸಾಹಿತ್ಯಕ, ಸಾಂಸ್ಕೃತಿಕ ಹಾಗೂ ರಾಜಕೀಯ ಶಕ್ತಿಗಳು ವಿಲೀನಗೊಳ್ಳತೊಡಗಿದ್ದವು. 1950ರಲ್ಲಿ ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ಒಂದು ಸಮಿತಿ ರಚನೆಯಾಯಿತು. ಕರ್ನಾಟಕ ಏಕೀಕರಣ ಚಳುವಳಿಯ ಪ್ರಧಾನ ಕಾರ್ಯದರ್ಶಿಯಾಗಿ ನೇಮಕಗೊಂಡು ಹಾಗೂ 1956ರಲ್ಲಿ ಕರ್ನಾಟಕ ರಾಜ್ಯ ರಚನೆಯಾಗುವ ತನಕ ಈ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಚೆಲುವ ಕನ್ನಡ ನಾಡಿನ ಉದಯಕ್ಕಾಗಿ ದುಡಿದಿದ್ದಾರೆ."

1957ರಲ್ಲಿ ಜರುಗಿದ 2ನೇ ವಿಧಾನಸಭಾ ಚುನಾವಣೆಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೋಕು ಉತ್ತರಹಳ್ಳಿ ಕ್ಷೇತ್ರದಿಂದ ವಿಧಾನಸಭೆಗೆ ಪ್ರವೇಶಿಸುತ್ತಾರೆ. 1958ರಲ್ಲಿ ಬಿ.ಡಿ.ಜತ್ತಿ ಅವರ ಮಂತ್ರಿಮಂಡಲದಲ್ಲಿ ಉಪಗೃಹಮಂತ್ರಿಯಾಗಿ ನೇಮಕಗೊಂಡಾಗ ರಾಜ್ಯದಾದ್ಯಂತ ಸಂಚರಿಸಿ ದಲಿತರ, ಮಹಿಳೆಯರ ಮೇಲಾಗುವ ದೌರ್ಜನ್ಯವನ್ನು ಮನಗಂಡು ಸುಧಾರಿಸುತ್ತಾರೆ. ಎನ್.ರಾಚಯ್ಯ ಅವರ ಜೊತೆ ಬಸವಲಿಂಗಪ್ಪ ಅವರ ಜೊತೆ ಸ್ನೇಹ ಬೆಳೆಯಿತು. ಇವರಿಬ್ಬರ ಮಧ್ಯೆ ಅನೇಕ ಸಾಮಾಜಿಕ ಕಾಳಜಿಯ ಸಂವಾದಗಳು ನಡೆದವು. ವಿಚಾರದ ವೃದ್ಧಿಯಾಯಿತು. ಇವರಿಬ್ಬರೂ ಕ್ರಮೇಣ ದಲಿತ ಶಕ್ತಿಯ ಎರಡು ಕಣ್ಣುಗಳೆಂಬಂತೆ ಕ್ರಿಯಾಶೀಲರಾದರು. ನಾಡಿನಾದ್ಯಂತ ತಿರುಗಿ ದಲಿತರನ್ನು ಸಂಘಟಿಸುವ, ವೈಚಾರಿಕ ಕ್ರಾಂತಿ ಹಬ್ಬಿಸುವ ಕಾರ್ಯ ಮಾಡಿದರು. ದೀನ-ದಲಿತ ಜನಾಂಗ ಮೇಲ್ಜಾತಿಯ ದಬ್ಬಾಳಿಯ ವಿರುದ್ದ ದೂರು ಕೊಡಲು ಸಹ ಪೋಲೀಸ್ ಠಾಣೆಗಳಿಗೆ ಹೋಗುತ್ತಿರಲಿಲ್ಲ. ಇದನ್ನರಿತ ಬಸವಲಿಂಗಪ್ಪ ಅವರು ಸಮಾಜದ ಶೋಷಿತ ಜನಾಂಗಗಳಿಗೆ ನ್ಯಾಯ ಸಿಗುವಂತಾಗಬೇಕು.

ಪೋಲೀಸ್ ಇಲಾಖೆಯಲ್ಲಿ ನಂಬಿಕೆಯಿಡುವಂತಾಗಬೇಕು ಎಂದು ಶೋಷಿತ ವರ್ಗದ ವಿದ್ಯಾವಂತರನ್ನು ಪೋಲೀಸ್ ಇಲಾಖೆಯಲ್ಲಿ ನೇಮಕ ಮಾಡಿಕೊಂಡು ನ್ಯಾಯದ ಭರವಸೆಯನ್ನು ಮೂಡಿಸಿದವರು. ಹೀಗೆ, ಒಬ್ಬ ಸ್ವಾಭಿಮಾನ ರಾಜಕಾರಣಿಯಾಗಿ ಹೊರಹೊಮ್ಮಿದರು.

"ಕಾಂಗ್ರೆಸ್ ಸಿದ್ಧಾಂತದೊಡನೆ ಬಸವಲಿಂಗಪ್ಪ ತಮ್ಮನ್ನು ಗುರುತಿಸಿಕೊಂಡು ರಾಜಕೀಯ ಅಧಿಕಾರವನ್ನು ಒಂದು ಪ್ರಮುಖ ಅಸ್ತ್ರವೆಂದು ಪರಿಗಣಿಸಿದವರು. ಸಾಮಾಜಿಕ ನ್ಯಾಯ ಆರ್ಥಿಕ ಸಮಾನತೆ ಹಾಗೂ ಸಮಾಜದ ವೈವಿಧ್ಯತೆಗಳ ಸಮಾಗಮಗಳು ಪ್ರಜಾಪ್ರಭುತ್ವದ ನೆಲೆಯಲ್ಲಿ ನಡೆಸುವಂತಾಗಬೇಕಾದರೆ ರಾಜಕೀಯ ಅಧಿಕಾರವೇ ಪ್ರಾಮುಖ್ಯವಾದುದೆಂದು ಪರಿಗಣಿಸಿದವರು" ಅಂಬೇಡ್ಕರ್ ವಾದಿಗಳು, ದಲಿತ ನಾಯಕರು, ಪ್ರಗತಿಪರ ಧೋರಣೆಗಳನ್ನು ಹೊಂದಿದ್ದವರು. ಉತ್ತಮ ಆಡಳಿತಗಾರ ಹಾಗೂ ಮಾನವೀಯ ಮೌಲ್ಯಗಳನ್ನು ಗೌರವಿಸುವವರು ಎಂದೆಲ್ಲ ಹೊಗಳಿಕೆಗೆ ಪಾತ್ರರಾಗಿದ್ದವರು. ನಾವು "ಕಾಂಗ್ರೆಸ್ ಪಕ್ಷವನ್ನು ವಿರೋಧಿಸುತ್ತಾ ಇದ್ದೆವು. ಬಸವಲಿಂಗಪ್ಪ ಅವರನ್ನು ನೀವು ಕಾಂಗ್ರೆಸ್‌ನ್ನು ಬಿಟ್ಟು ಬಿಡಿ ಅಂತ ಹೇಳಿದ್ದೆವು. ಆದರೆ ಅವರಿಗೆ ಕಾಂಗ್ರೆಸ್ ಪಕ್ಷದ ಬಗ್ಗೆ ಅಭಿಮಾನ ಇತ್ತು. ಇಲ್ಲ ಕಾಂಗ್ರೆಸ್‌ನಲ್ಲಿ ಅಧಿಕಾರವಿದೆ. ಹೊಸ ವಿಚಾರಧಾರೆಯನ್ನು ಜಾರಿಗೆ ತರಲಿಕ್ಕೆ ಸಾಧ್ಯವಾಗುತ್ತದೆ. ಅಸಮಾನತೆಯನ್ನು ತಗ್ಗಿಸುವುದಕ್ಕೆ ಸಾಧ್ಯವಾಗುತ್ತದೆ, ಅಧಿಕಾರ ಬಂದರೆ, ನಾವು ನಂಬಿದಂತಹ ತತ್ವವನ್ನು ಜಾರಿಗೊಳಿಸುವಂತಹ ಕಾರಣಕ್ಕಾಗಿ ಕಾಂಗ್ರೇಸ್ ಅಂತಹ ಪಾರ್ಟಿಯಲ್ಲಿ ಇರಬೇಕು ಅಂತ ಅವರು ಹೇಳುತ್ತಾ ಇದ್ದರು. ನೀವು ಸಾಂಸ್ಕೃತಿಕವಾಗಿ ಹೋರಾಟ ಮಾಡಿ ಚರಿತ್ರೆಯಲ್ಲಿ ಉಳಿಯುತ್ತೀರಿ ಅಂತ ನಾವು ಹೇಳುತ್ತ ಇದ್ದೆವು. ಅದಕ್ಕವರು ಇಲ್ಲಾ ಇಲ್ಲಾ ನಿಮಗೆ ಗೊತ್ತಾಗುವುದಿಲ್ಲ ಅಧಿಕಾರ ಕೈಗೆ ಬಂದರೇನೇ ಏನಾದರೂ ಸಾಧಿಸಲಿಕ್ಕಾಗುವುದು ಅಂತ ಹೇಳುತ್ತಾ ಇದ್ದರು. ಎಂದು ಪ್ರೊ.ಕಾಳೇಗೌಡ ನಾಗವಾರ ಅವರು ತಿಳಿಸುತ್ತಾರೆ. ಆಗ ಕಾಂಗ್ರೆಸೇ ಗೆಲ್ಲುತ್ತಾ ಇದ್ದ ಪಕ್ಷವಾಗಿತ್ತು. ಮುಂದೆ ಏನಾದರೂ ಮುಖ್ಯಮಂತ್ರಿಯಾದರೆ ಬಹಳ ದೊಡ್ಡ ಪ್ರಮಾಣದ ಬದಲಾವಣೆಯನ್ನು ಮಾಡಬಹುದು ಅಂತ ಅವರಿಗೆ ಆಸೆಯಿತ್ತು." ಹೀಗೆ, ಕಾಂಗ್ರೆಸ್ ಪಕ್ಷದಲ್ಲಿದ್ದರೂ ಜನಾಂಗದ ಹಿತ ದೃಷ್ಟಿಯಿಂದ ಬದ್ಧತೆಯ ನಾಯಕರಾಗಿದ್ದರು. ಎಲ್ಲಾ ಕಡೆ "ಮಾನವೀಯತೆಯನ್ನ ಕೊಲ್ಲುತ್ತಿರುವ ಸಂಸ್ಕೃತಿಯನ್ನು ಒಪ್ಪಿಕೊಂಡಿರುವವರೇ ರಾಜಕೀಯ ಪಕ್ಷಗಳಲ್ಲಿದ್ದು ಜನರಿಗೆ ಏನೂ ಮಾಡಲು ಆಗುವುದಿಲ್ಲ.

ಕಾಂಗ್ರೆಸ್ ಎಂಬುದು ಒಂದು ಉರಿಯುವ ಮನೆ, ಅದರಲ್ಲಿ ಪ್ರವೇಶ ಪಡೆದಿರಿ ಎಂದರೆ ನೀವು ಸುಟ್ಟು ಹೋಗುವುದು ಖಂಡಿತ ಎಂದು ಅಂಬೇಡ್ಕರ್ ಹೇಳುತ್ತಾರೆ."ಇದು ಅಂಬೇಡ್ಕರ್ ಅಭಿಮಾನಿಯಾದ ಬಸವಲಿಂಗಪ್ಪ ಅವರಿಗೆ ಗೊತ್ತಿದ್ದರು, ತಮ್ಮ ಸ್ವಾರ್ಥಕ್ಕಾಗಿ, ಕಾಂಗ್ರೆಸ್ ಪಕ್ಷಕ್ಕಾಗಿ ದಲಿತ ಜನತೆಯನ್ನು ಎಂದೂ ಬಲಿ ಕೊಡಲಿಲ್ಲ. ರಾಜಕೀಯ ಬದುಕಿನ ಸಂದರ್ಭದಲ್ಲಿ ಇವರು ಕಾಂಗ್ರೆಸ್‌ನಲ್ಲಿದ್ದರು. ಅಂಬೇಡ್ಕರ್ ಅವರ ಚಿಂತನೆಗಳ ದಟ್ಟ ಪ್ರಭಾವ ಅವರು ಸದಾ ಎಚ್ಚರಿಕೆಯಿಂದ ಇರಲು ಕಾರಣವಾಗಿದೆ. ಈ ಕಾರಣದಿಂದಲೇ ದಲಿತ ವಿರೋಧಿ ನೀತಿ ಪರವಾಗಿ ಎಂದಿಗೂ ರಾಜಿಮಾಡಿಕೊಳ್ಳದ ಗುಣವನ್ನು ಬೆಳೆಸಿಕೊಳ್ಳಲು ಸಾಧ್ಯವಾಗಿಸಿದೆ. ಬಿ. ಪ್ರಸನ್ನಕುಮಾರ್ ಅವರು ಹೇಳುವಂತೆ "ನಮಗೂ ರಾಜಕೀಯಕ್ಕೂ ಯಾವುದೇ ಸಂಬಂಧ ಇರಲಿಲ್ಲ. ಅವರು ಏನು ಮಾಡುತ್ತಾರೆ ಅಂತ ನಮಗೆ ಗೊತ್ತಾಗುತ್ತಿರಲಿಲ್ಲ. ನಮ್ಮದಾಯ್ತು, ನಮ್ಮ ತಾಯಿ, ನಮ್ಮ ಶಾಲೆ ದಿನಗಳು ಆಯ್ತು ಅಷ್ಟೆ. ನಮ್ಮಿಂದ ಯಾವುದೇ ರಾಜಕೀಯ ಒತ್ತಡ ಇರಲಿಲ್ಲ. ರಾಜಕೀಯವನ್ನು ಅವರು ಸ್ವಯಂ ಆಗಿ ನಿರ್ಧರಿಸಿ ಹೋದರು. ಕಾರಣ ಅವರು ಸಹ ಕಷ್ಟಗಳನ್ನು ಅನುಭವಿಸಿದ್ದರು. ಸವರ್ಣೀಯರ ವಿರುದ್ಧ ಬಹಳಷ್ಟು ಹೋರಾಟ ಮಾಡಿದ್ದಾರೆ. ಸವರ್ಣೀಯರಿಂದ ನಮ್ಮ ಜನಗಳಿಗಾಗುತ್ತಿದ್ದ ಅನ್ಯಾಯವನ್ನು, ತೊಂದರೆಗಳನ್ನು ನೋಡಿದ್ದರು. ಆದ್ದರಿಂದ ಆ ಕಾರಣಗಳಿಗೆ ಪರಿಶಿಷ್ಟ ಜನಾಂಗದ ಸಮಸ್ಯೆಯನ್ನರಿತು ನಮ್ಮ ತಂದೆ ರಾಜಕೀಯಕ್ಕೆ ಪ್ರವೇಶಿಸಿದರು." ಬಸವಲಿಂಗಪ್ಪ ಅವರ ರಾಜಕೀಯ ಪ್ರವೇಶ ಶೋಷಿತ ಜನಾಂಗಕ್ಕೆ ಅನಿವಾರ್ಯವಾಗಿತ್ತು.

## 6. ದಲಿತ ನಾಯಕತ್ವದ ಬೆಳವಣಿಗೆ

ಭಾರತದ ರಾಜಕಾರಣದಲ್ಲಿ ಬೇರೆ ಎಲ್ಲಾ ವರ್ಗದ ನಾಯಕರ ಇತಿಹಾಸವನ್ನು ಇತಿಹಾಸಕಾರರು ದಾಖಲಿಸುತ್ತಾರೆ. ಆದರೆ ದಲಿತ ನಾಯಕತ್ವದ ಚಳುವಳಿಗಾರರ ಉಲ್ಲೇಖವನ್ನು ಅಷ್ಟಾಗಿ ದಾಖಲಿಸದಿರುವುದು ವಿಷಾದನೀಯ ಆದರೂ ಬುದ್ಧಗುರು, ಬಸವೇಶ್ವರ, ಮಹಾತ್ಮ ಜ್ಯೋತಿ ಬಾಫುಲೆ, ಪೆರಿಯಾರ್, ನಾರಾಯಣ ಗುರು ಇವರು ದಲಿತ ಪರ ಕಾಳಜಿ ಹೊಂದಿದ್ದು, ದಲಿತ ನಾಯಕತ್ವದ ಬೆಳವಣಿಗೆಯಲ್ಲಿ ಈ ಮಹನೀಯರು ವಹಿಸಿದ ಪಾತ್ರ ಅಪಾರವಾದದ್ದು. ಭಾರತೀಯ ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ದಲಿತ ವರ್ಗವನ್ನು

ಅಸ್ಪೃಶ್ಯರೆಂದು, ಅಪವಿತ್ರರೆಂದು ಮತ್ತು ಮುಟ್ಟಿಸಿಕೊಳ್ಳಬಾರದವರೆಂದು, ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಎಲ್ಲಾ ಹಕ್ಕುಗಳಿಂದ ವಂಚಿತವಾದವರೆಂದು ತಿಳಿಯಲ್ಪಡುತ್ತದೆ. ಅಂಬೇಡ್ಕರ್ ಅವರ ಹೋರಾಟದ ಹಿನ್ನೆಲೆಯಲ್ಲಿ ದಲಿತ ನಾಯಕತ್ವದ ಬೆಳವಣಿಗೆಯನ್ನು ಗ್ರಹಿಸಿದ ಬಸವಲಿಂಗಪ್ಪ ಅವರು ಆಳವಾಗಿ ಅಧ್ಯಯನ ಮಾಡುವುದರ ಮೂಲಕ ವಿದ್ಯಾರ್ಥಿ ದಿಸೆಯಲ್ಲಿಯೇ ದಲಿತ ನಾಯಕತ್ವವನ್ನು ವಹಿಸಿದಂತವರಾಗಿದ್ದಾರೆ.

"ಬಿ. ನಿಂಗಪ್ಪ ಅವರು ಹೇಳುವಂತೆ ನಮ್ಮ ತಂದೆ 'ನಮ್ಮನ್ನು ಬಹಳ ಶಿಸ್ತಿನಿಂದ ಬೆಳೆಸಿದರು. ಸರಿಯಾದ ಸಮಯಕ್ಕೆ ಬರಬೇಕು, ನಮ್ಮಲ್ಲಿ ಸಮಸ್ಯೆಗಳಿದ್ದರೆ ಮೊದಲು ನಮ್ಮಣ್ಣನವರೊಟ್ಟಿಗೆ ಚರ್ಚಿಸಿ ತೀರ್ಮಾನಿಸುತ್ತಿದ್ದೆವು. ಹಾಗಾಗಿ ನಮ್ಮ ಮನೆಯ ನಾಯಕತ್ವವನ್ನು ವಹಿಸುತ್ತಿದ್ದರು. ನಮ್ಮ ಅಣ್ಣ ರಾಜಕೀಯಕ್ಕೆ ಬರುವುದಕ್ಕೆ ಮೊದಲು ಈ ಭಾಗದಲ್ಲಿ ಹರಿಹರಪ್ಪ ಅವರು ನಮ್ಮ ಜನಗಳನ್ನೆಲ್ಲಾ ಸೇರಿಸಿ ಕಷ್ಟ ಸುಖಗಳನ್ನು ಪರಿಹರಿಸುತ್ತಿದ್ದರು. ಹರಿಹರಪ್ಪ ಅವರು ತೀರಿ ಹೋದ ಮೇಲೆ ಬಸವಲಿಂಗಪ್ಪ ಅವರು ದಲಿತ ನಾಯಕತ್ವವನ್ನು ಮುಂದುವರೆಸಿದರು." ಹೀಗೆ ಬಸವಲಿಂಗಪ್ಪ ಅವರು ತಮ್ಮ ಪರಿಸರದೊಳಗೆ ನಾಯಕತ್ವವನ್ನು ಬೆಳೆಸಿ ಕೊಂಡವರಾಗಿದ್ದಾರೆ. ಇದೇ ಸಂದರ್ಭದಲ್ಲಿ ಹರಿಹರದಲ್ಲಿ ನಡೆದ ಒಂದು ಘಟನೆಯನ್ನು ನೆನೆಪಿಸಿಕೊಳ್ಳುತ್ತಾ ಬಸವಲಿಂಗಪ್ಪ ಅವರ ದಲಿತ ನಾಯಕತ್ವದ ಬೆಳವಣಿಗೆಯನ್ನು ಗಮನಿಸಬಹುದಾಗಿದೆ. "ಹರಿಹರದ ದಲಿತ ಜನ ವಾಸವಿದ್ದದು ಒಂದು ತಗ್ಗಾದ ಪ್ರದೇಶವಾದ ಹಳ್ಳದ ಕೇರಿಯಲ್ಲಿ, ಇಲ್ಲಿಗೆ ಮಳೆ ಬಂತೆಂದರೆ ಈ ಜಾಗದಲ್ಲಿ ನೀರು ತುಂಬಿಕೊಂಡು ವಾಸಮಾಡಲಾಗದ ಪರಿಸ್ಥಿತಿ ಇತ್ತು. ಮಳೆ ನೀರಿನಿಂದ ಮನೆಗಳೆಲ್ಲ ಜಲಾವೃತಗೊಂಡು, ಮನೆಯ ಒಳಗೆ ಕ್ರಿಮಿ, ಕೀಟಗಳು, ಹಾವುಗಳು ಸೇರಿಕೊಂಡು ಕಲುಷಿತ ವಾತಾವರಣ ನಿರ್ಮಾಣದಿಂದ ಪ್ಲೇಗ್ ನಂತಹ ಮಾರಕ ರೋಗಗಳಿಂದ ದಲಿತ ಜನತೆ ಸಾಯುತ್ತಿದ್ದರು. ಇದರಿಂದ ಮುಕ್ತಿ ಪಡೆಯುವುದು ಹೇಗೆ ಎಂದು ಆಲೋಚಿಸಿ ಕಾನೂನು ಪದವಿ ಪಡೆದು ಬಸವಲಿಂಗಪ್ಪ ಅವರು ಅಂಬೇಡ್ಕರ್ ಅವರ ಹೋರಾಟದ ಮಾರ್ಗದಲ್ಲಿ ನಡೆದು ನಮ್ಮ ದಲಿತ ಬಂಧುಗಳನ್ನು ಸಂಘಟಿಸಿ ಮೈಸೂರು ಮಹಾರಾಜರು ಮತ್ತು ಅವರ ಆಡಳಿತ ವರ್ಗಕ್ಕೆ ಮನವಿ ಸಲ್ಲಿಸಿದ್ದರು. ಇದೇ ಸಂದರ್ಭದಲ್ಲಿ ಆರ್ಕಾಟ್ ರಾಮಸ್ವಾಮಿಯವರು ಹರಿಹರಕ್ಕೆ ಬಂದಿದ್ದ ಮಾಹಿತಿ ಪಡೆದು ಅವರೊಡನೆ ನ್ಯಾಯಬದ್ಧವಾಗಿ ಸಮಸ್ಯೆಯನ್ನು ವಿವರಿಸಿ ನಮ್ಮ ಜನಾಂಗಕ್ಕೆ ಆಗುತ್ತಿರುವ ತೊಂದರೆಯನ್ನು ಸರಿಪಡಿಸಿಕೊಡಿ ಎಂದು ವಿನಂತಿಸಿ,

ಎತ್ತರವಾದ ಪ್ರದೇಶಕ್ಕೆ ಬಂದು ಗುಡಿಸಲುಗಳನ್ನು ಹಾಕಿಸಿ, ಸರ್ಕಾರಿ ಭೂಮಿ 6 ಎಕರೆ 20 ಗುಂಟೆ ಜಾಗ ಪಡೆದು ತಮ್ಮ ಜನಾಂಗಕ್ಕೆ ನ್ಯಾಯ ಸಮ್ಮತವಾಗಿ ಎಲ್ಲರಿಗೂ ಉಚಿತವಾಗಿ ನಿವೇಶನಗಳನ್ನು ಕೊಡಿಸಿದರು. ಈ ಸಂಧರ್ಭದಲ್ಲಿ ಸವರ್ಣೀಯರು ತೊಂದರೆ ಕೊಟ್ಟರೂ ಧೃತಿಗೆಡದೆ ಹೋರಾಡಿದರು.

ಹರಿಹರದಲ್ಲೆ ಕೆಲವು ವರ್ಷ ಬ್ರಿಟೀಷರ ಸೈನ್ಯ ಪಡೆ ಇತ್ತು ಸ್ವಾತಂತ್ರ್ಯ ಲಭಿಸಿದ ಕಾರಣ ಬ್ರಿಟೀಷರ ಸೈನ್ಯ ಇಲ್ಲಿಂದ ಜಾಗ ಖಾಲಿ ಮಾಡಿತು. ಇದನ್ನ ಗಮನಿಸಿದ ಬಸವಲಿಂಗಪ್ಪ ಅವರು ಸೈನ್ಯವಿದ್ದ ಮನೆಗಳಲ್ಲಿ ದೊರೆತ ಮನೆಯ ಸಾಮಗ್ರಿಗಳನ್ನು, ಮರದ ಉಪಯುಕ್ತ ವಸ್ತುಗಳನ್ನು ತಮ್ಮ ಜನಾಂಗಕ್ಕೆ ಅಲ್ಪ ಪ್ರಮಾಣದಲ್ಲಿ ಎಲ್ಲರಿಗೂ ಕೊಡಿಸಿದರು." ಇದು ಬಸವಲಿಂಗಪ್ಪ ಅವರಿಗೆ ದಲಿತ ನಾಯಕತ್ವದ ಬೆಳವಣಿಗೆಯ ಅಸ್ಥಿಭಾರವಾದಂತಾಯಿತು. ನಂತರದ ರಾಜಕಾರಣದ ದಿನಗಳಲ್ಲಿ ಇಡೀ ರಾಜ್ಯದ ದಲಿತರ ಸಮಸ್ಯೆಗಳಿಗೆ ಸ್ಪಂದಿಸಿ ತಮ್ಮ ಜೀವನವನ್ನೇ ತ್ಯಾಗಮಾಡಿದ್ದಾರೆ. ಬದುಕಿನುದ್ದಕ್ಕೂ ದಲಿತರ ನಾಯಕತ್ವ ವಹಿಸಿದವರಾಗಿದ್ದಾರೆ. ಯು.ಆರ್.ಅನಂತಮೂರ್ತಿ ಅವರು ಹೇಳುವ ಹಾಗೆ "ಅವರಿದ್ದ ಕಾಲದಲ್ಲಿ ಇಡೀ ರಾಷ್ಟ್ರದಲ್ಲೇ ಬಹಳ ದೊಡ್ಡ ದಲಿತ ನಾಯಕ ಅಂತ ಇದ್ದಿದ್ದು ನಮ್ಮ ಕರ್ನಾಟಕದಲ್ಲಿ ಅದು ಬಸವಲಿಂಗಪ್ಪನವರೇ." ಇಂತಹ ಮಹಾನ್ ದಲಿತ ನಾಯಕರು ಸಲ್ಲಿಸಿದ ಸೇವೆ ಇಂದಿನ ರಾಜಕಾರಣಿಗಳಿಗೆ ಅನುಕರಣೀಯ ಹಾಗೂ ಆದರ್ಶಮಯವಾಗಿದೆ.

## 7. ಚಳುವಳಿಗಳ ತಳಹದಿ: ಬೂಸಾ ಚಳುವಳಿ

ಕನ್ನಡ ನಾಡಿನಲ್ಲಿ ನಡೆದಿರುವ ಪ್ರಗತಿಪರ ಚಳುವಳಿಗಳಲ್ಲಿ ಬೂಸಾ ಚಳುವಳಿ ಪ್ರಮುಖವಾದದ್ದಾಗಿದ್ದು 1970ರ ದಶಕದಲ್ಲಿ ಇಡೀ ರಾಜ್ಯದಾದ್ಯಂತ ಒಂದು ಸಂಚಲನವನ್ನು ಉಂಟು ಮಾಡಿದ ಚಳುವಳಿಯಾಗಿದೆ. ಈ ಚಳುವಳಿಯ ಕೇಂದ್ರ ವ್ಯಕ್ತಿಯೆಂದರೆ ಬಿ. ಬಸವಲಿಂಗಪ್ಪ. ಇವರು ದಲಿತ ಸಮುದಾಯದಲ್ಲಿ ಹುಟ್ಟಿ ರಾಜಕೀಯ ಕ್ಷೇತ್ರದಲ್ಲಿ ತಮ್ಮ ಛಾಪನ್ನ ಮೂಡಿಸಿರುವವರಾಗಿದ್ದಾರೆ. ಈ ರಾಜ್ಯದ ಸಚಿವರಾಗಿ ಅನೇಕ ಖಾತೆಗಳ ಜವಾಬ್ದಾರಿಯನ್ನು ವಹಿಸಿಕೊಂಡು ಜನಪರವಾದ ಸೇವೆ ಸಲ್ಲಿಸಿ ರಾಜ್ಯದ ಅಭಿವೃದ್ಧಿಗೆ ದುಡಿದವರಾಗಿದ್ದಾರೆ. 1957ರಲ್ಲಿ ರಾಜ್ಯದ ಶಾಸನ ಸಭೆಯನ್ನು ಪ್ರವೇಶಿಸಿ 1958ರಲ್ಲಿ ಉಪಗೃಹಮಂತ್ರಿಯಾಗಿ ದಕ್ಷತೆಯಿಂದ ದಲಿತ ನಾಯಕತ್ವಕ್ಕೆ ಅಸ್ತಿಭಾರ ಹಾಕಿದವರು.

1972ರಲ್ಲಿ ಶ್ರೀ ಡಿ. ದೇವರಾಜ ಅರಸು ಅವರ ಸಚಿವ ಸಂಪುಟದಲ್ಲಿ ಪೌರಾಡಳಿತ ಮತ್ತು ವಸತಿ ಸಚಿವರಾಗಿ ಬಿ. ಬಸವಲಿಂಗಪ್ಪ ಅವರು ನೇಮಕಗೊಂಡು ದೇಶದಲ್ಲೆ ಪ್ರಪ್ರಥಮ ಬಾರಿಗೆ ದಲಿತರು ತಲೆ-ತಲಾಂತರಗಳಿಂದ ಊರವರು ಮಾಡಿದ ಮಲ-ಮೂತ್ರಗಳನ್ನು ತಲೆಯ ಮೇಲೆ ಹೊತ್ತು ಸಾಗಿಸುವ ಅಮಾನವೀಯ ಪದ್ಧತಿಯನ್ನು ರದ್ದು ಮಾಡಿ ಇಡೀ ದೇಶದ ಗಮನವನ್ನು ಸೆಳೆದ ವ್ಯಕ್ತಿಯಾಗಿದ್ದಾರೆ.

ಇಂತಹ ಶ್ರೇಷ್ಠ ವ್ಯಕ್ತಿ ದಿನಾಂಕ 19-11-1973ರಂದು ಮೈಸೂರು ವಿಶ್ವವಿದ್ಯಾನಿಲಯದ ಶತಮಾನೋತ್ಸವ ಭವನದಲ್ಲಿ ಡಾ. ಬಿ. ಆರ್. ಅಂಬೇಡ್ಕರ್ ಸ್ಕೂಲ್ ಆಫ್ ಥಾಟ್ಸ್ ಸಂಸ್ಥೆಯು ಏರ್ಪಡಿಸಿದ್ದ ಹೊಸ ಅಲೆಗಳು ವಿಚಾರ ಸಂಕಿರಣದಲ್ಲಿ ಪಾಲ್ಗೊಂಡಿದ್ದಾಗ ಮೊದಲಿಗೆ "ಇಂದಿಗೂ ಅದೇ ಲವಲವಿಕೆಯಲ್ಲಿರುವ ಲಾಯರ್ ಸಂಜೀವಯ್ಯ ಅವರು ಇಂಗ್ಲೀಷ್‌ನಲ್ಲಿ ಭಾಷಣ ಮಾಡಲು ತೊಡಗಿದರಂತೆ, ಸಭಿಕರಲ್ಲಿ ಯಾರೊ ಕೆಲವರು ಕನ್ನಡ... ಕನ್ನಡ... ಎಂದು ಕೂಗಿದರಂತೆ, ಅದಕ್ಕೆ ಸಂಜೀವಯ್ಯ 'ಇಲ್ಲಾ ನಾನು ಇಂಗ್ಲೀಷ್‌ನಲ್ಲೇ ಮಾತಾಡುವುದು' ಎಂದು ಸಿಡುಕುತ್ತ ಇಂಗ್ಲೀಷ್‌ನಲ್ಲೆ ತಮ್ಮ ಭಾಷಣ ಮುಂದುವರಿಸಿದರಂತೆ. ಅವರ ಮನಸ್ಸಲ್ಲಿ ಏನಿತ್ತೋ? ಎಸ್ಸಿ/ಎಸ್.ಟಿ ಗಳೂ ಕೂಡ ಇಂಗ್ಲೀಷ್‌ನಲ್ಲಿ ವಿದ್ವತ್‌ಪೂರ್ಣವಾಗಿ ಮಾತನಾಡಬಲ್ಲರೆಂಬ ಮಾದರಿಗೆ ಸಂಕೇತವೆಂಬಂತೆ ಮಾತಾಡಿದರೋ? ಯಾರಿಗೂ ಅಂದಾಜಿಲ್ಲ. ನಂತರದ ಭಾಷಣವನ್ನು ಬಿ. ಬಸವಲಿಂಗಪ್ಪ ಅವರು ಮಾತಿಗೆ ತೊಡಗಿದ ಕೊಂಚ ಸಮಯದಲ್ಲಿ ಸಂಜೀವಯ್ಯನವರು ಮಾಡಿದ ಇಂಗ್ಲೀಷ್ ಭಾಷಣ ಹಾಗೂ ಅದಕ್ಕೆ ಅಡ್ಡಿಪಡಿಸಿದ ಕನ್ನಡಾಭಿಮಾನಿಗಳ ವರಸೆ ಎಲ್ಲವನ್ನು ಗ್ರಹಿಕೆಗೆ ತಂದು ಕೊಂಡವರಂತೆ ಏರಿದ ದನಿಯಲ್ಲಿ 'ಕನ್ನಡದಲ್ಲೇನಿದೆ.. ಅದರಲ್ಲಿ ಬಹುಪಾಲು ಬರೀ ಬೂಸಾ...' ಎಂದು ಮಾತನಾಡಿದರಂತೆ" ಇದು ಬಸವಲಿಂಗಪ್ಪ ಅವರ ವೈಯಕ್ತಿಕ ಅಭಿಪ್ರಾಯವಾಗಿತ್ತು. ನಂತರದಲ್ಲಿ ನಡೆದದ್ದು ಈಗ ಇತಿಹಾಸವಾಗಿದೆ. ರಾಜಕೀಯ ಕುತಂತ್ರ ಹಾಗೂ ಸಂಪ್ರದಾಯವಾದಿಗಳ ದಲಿತ ವಿರೋಧಿ ಧೋರಣೆಯಿಂದಾಗಿ ಆ ಮಾತಿನ ಅರ್ಥ ಬೇರೆ ಸ್ವರೂಪ ಪಡೆದುಕೊಂಡಿತು. ರಾಜ್ಯದಾದ್ಯಂತ ಈ ಕುರಿತು ಪರ-ವಿರೋಧದ ಚಳುವಳಿಗಳು ಹುಟ್ಟುಕೊಂಡವು. ದಿನಾಂಕ 20-11-1973ರ ಬೆಳಗಾಗುವುದರೊಳಗೆ ಈ ವಿಷಯ ಪತ್ರಿಕೆಗಳಲ್ಲಿ ವಿಭಿನ್ನವಾದ, ಜನರನ್ನು ರೊಚ್ಚಿಗೆಬ್ಬಿಸುವ ಶೈಲಿಯಲ್ಲಿ **ಕನ್ನಡ ಪುಸ್ತಕ ಓದುವುದರಿಂದ ವಿಚಾರಶಕ್ತಿ ದೇಶ ಪ್ರೇಮ ಬರದು** ಎಂಬ ಶೀರ್ಷಿಕೆಯಲ್ಲಿ "ಕನ್ನಡ ಪುಸ್ತಕವನ್ನು ಓದುವುದರಿಂದ ದೇಶಪ್ರೇಮ, ಸ್ವಾತಂತ್ರ್ಯ,

ವಿಚಾರಶಕ್ತಿ, ಧೈರ್ಯ, ಸೇವಾ ಭಾವನೆಗುಣಗಳು ಬರುವುದಿಲ್ಲ ಎಂಬುದು ಶ್ರೀ ಬಿ. ಬಸವಲಿಂಗಪ್ಪ ಅವರ ಖಚಿತ ಅಭಿಪ್ರಾಯ" ಎಂದು ಸಂಪ್ರದಾಯವಾದಿಗಳ ಪತ್ರಿಕೆ ಬರೆಯಿತು ಈ ಮೂಲಕ ಕೆಲವು ಮುಲಭೂತವಾದಿಗಳು ಅವರ ವಿರುದ್ಧವಾಗಿಯೇ ಕೆಲಸ ಶುರುಮಾಡಿಬಿಟ್ಟರು.

ಇಡೀ ರಾಜ್ಯದ ಜನತೆ ಎರಡು ಗುಂಪುಗಳಾದವು ಬಸವಲಿಂಗಪ್ಪ ಅವರನ್ನು ಬೆಂಬಲಿಸುವ ಒಂದು ಗುಂಪು, ಅವರನ್ನು ವಿರೋಧಿಸುವ ಇನ್ನೊಂದು ಗುಂಪು. ಪಾರಂಪರಿಕ ಸಾಂಸ್ಕೃತಿಕ ನಗರ ಮೈಸೂರಿನಲ್ಲಿ ದಿನಾಂಕ 27–11–1973 ರಂದು ನಡೆದ ಘಟನೆಯ ಬಗ್ಗೆ ಪತ್ರಿಕೆಯ ಶೀರ್ಷಿಕೆ **"ಬಸವಲಿಂಗಪ್ಪ ಪರ–ವಿರೋಧಿ ಮೆರವಣಿಗೆ ಮೈಸೂರಿನಲ್ಲಿ ಲಾಠಿ ಏಟು 6 ವಿದ್ಯಾರ್ಥಿಗಳ ಬಂಧನ** – ಪೌರಾಡಳಿತ ಸಚಿವ ಶ್ರೀ ಬಿ. ಬಸವಲಿಂಗಪ್ಪ ಅವರ ಪರ ಮತ್ತು ವಿರೋಧಿ ಗುಂಪುಗಳು ಇಂದು ನಗರದಲ್ಲಿ ಮೆರವಣಿಗೆ ನಡೆಸಿದಾಗ ಸಂಭವಿಸಬಹುದಾಗಿದ್ದ ಭಾರಿ ಘರ್ಷಣೆಯನ್ನು ತಪ್ಪಿಸಲು ಪೊಲೀಸರು ಇಲ್ಲಿನ ಕೆ. ಆರ್. ಸರ್ಕಲ್ ಬಳಿ ಲಾಠಿ ಪ್ರಹಾರ ಮಾಡಿ ಆರು ಮಂದಿ ವಿದ್ಯಾರ್ಥಿಗಳನ್ನು ಬಂಧಿಸಿದರು. ರಂಗಚಾರಲು ಪುರಭವನ ಬಳಿ ಒಂದು ಗುಂಪಿನ ಮೆರವಣಿಗೆ ಬಂದಾಗ ಪ್ರತಿ ಗುಂಪಿನ ಮೆರವಣಿಗೆ ಸಮೀಪಿಸುತ್ತಿರುವುದನ್ನು ಕಂಡ ವಿದ್ಯಾರ್ಥಿಗಳು ಕಲ್ಲು ತೂರಿದರಲ್ಲದೆ ಕೈ ಮಾಡುವ ದೃಷ್ಟಿಯಿಂದ ಮುನ್ನುಗ್ಗಿದಾಗ ಜೊತೆಯಲ್ಲೇ ಇದ್ದ ಪೊಲೀಸರು ಲಾಠಿ ಪ್ರಹಾರ ಮಾಡಿ ಒಂದು ಗುಂಪನ್ನು ಚದುರಿಸಿದರು" ಹೀಗೆ ದಲಿತರ ನಾಯಕರಾದ ಬಿ. ಬಸವಲಿಂಗಪ್ಪ ಅವರನ್ನು ಬೆಂಬಲಿಸಿ ಎಷ್ಟೋ ಜನ ದೌರ್ಜನ್ಯಕ್ಕೆ ಒಳಗಾದರು. ದೈಹಿಕವಾಗಿ ಹಲ್ಲೆಗೊಳಗಾದ ಜನ ಒಳಗೊಳಗೆ ಮರುಕಪಟ್ಟರು. "ಕನ್ನಡದ ಸಿರಿಭರಿತ ಪರಂಪರೆ ಮತ್ತು ಮೌಲ್ಯ ಸಾಹಿತ್ಯಗಳ ಪರಿಚಯವೂ ಇಲ್ಲದೆ ಪೌರಾಡಳಿತ ಸಚಿವ ಶ್ರೀ ಬಿ. ಬಸವಲಿಂಗಪ್ಪನವರು ಕನ್ನಡವನ್ನು ಅವಹೇಳನ ಮಾಡಿದ್ದಾರೆಂದು ಅವರನ್ನು ಮಂತ್ರಿ ಪದವಿಯಿಂದ ತೆಗೆಯುವವರೆಗೆ ಹೋರಾಟ ನಡೆಸಲು ಕ್ರಿಯಾ ಸಮಿತಿಯೊಂದನ್ನು ರಚಿಸಬೇಕೆಂದು ಕನ್ನಡ ಚಳುವಳಿಗಾರರ ಕೇಂದ್ರ ಕಾರ್ಯ ಸಮಿತಿಯು ನಿರ್ಧರಿಸಿತು". ಬಿ. ಬಸವಲಿಂಗಪ್ಪ ವಿರೋಧಿಗಳು ತಮ್ಮ ಊರ ಒಳಗಡೆ ಪ್ರವೇಶಿಸದಂತೆ ನಿರ್ಬಂಧಿಸಿ, ಅವಕಾಶ ಕೊಡಕೊಡದೆಂದು ಕೋಮುವಾದಿಗಳು, ವಿದ್ಯಾರ್ಥಿಗಳಾದಿಯಾಗಿ ಪ್ರತಿಜ್ಞೆ ಸ್ವೀಕರಿಸಿದ್ದರು.

ವಿದ್ಯಾರ್ಥಿಗಳು ಬಸವಲಿಂಗಪ್ಪ ಅವರ ವಿರುದ್ಧ ನಡೆಸಿದ ಪ್ರದರ್ಶನದ ಬಗ್ಗೆ ಆಗ ಸೋಷಿಯಲಿಸ್ಟ್ ಪಾರ್ಟಿಯ ಅಧ್ಯಕ್ಷರಾಗಿದ್ದ ಜೆ.ಎಚ್.ಪಟೇಲ್ ಅವರು ಪತ್ರಿಕಾ ಹೇಳಿಕೆ ನೀಡಿದರು. ಅದರಲ್ಲಿ ಈ ಪ್ರತಿಭಟನೆ ಕೇವಲ ಕನ್ನಡಾಭಿಮಾನಿಗಳ ಪ್ರತಿಭಟನೆಯಾಗಿ ಕಾಣುವುದಿಲ್ಲ. ಇದರಲ್ಲಿ ಭಾಷೆಗೆ ಮೀರಿದ ಅಂಶಗಳೂ ಇವೆ ಎಂದು ಶಂಕಿಸಿದರು. ಶ್ರೀ ಬಸವಲಿಂಗಪ್ಪ ಅವರು ಕ್ರಿಯಾತ್ಮಕ ವ್ಯಕ್ತಿ. ಸಾಂಪ್ರದಾಯಿಕ ನಂಬಿಕೆಗಳ ವಿರುದ್ಧ ಆಗಾಗ ಕತ್ತಿ ಝಳಪಿಸುವ ಹವ್ಯಾಸ ಇವರಿಗಿದೆ. ಆದ್ದರಿಂದ ವಿದ್ಯಾರ್ಥಿ ವರ್ಗದ ಒಂದು ಭಾಗ ಇಷ್ಟೊಂದು ಕೆರಳಿರುವುದು ಸರಿಯಲ್ಲ ಎಂದು ಅಭಿಪ್ರಾಯಪಟ್ಟಿದ್ದರು. "ಬಸವಲಿಂಗಪ್ಪ ಅವರು ಕರ್ನಾಟಕ ಏಕೀಕರಣ ಚಳುವಳಿಯ ಪ್ರಧಾನ ಕಾರ್ಯದರ್ಶಿಯಾಗಿ ಹಾಗೂ 1956ರಲ್ಲಿ ಕರ್ನಾಟಕ ರಾಜ್ಯ ರಚನೆಯಾಗುವ ತನಕ ಈ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಚೆಲುವ ಕನ್ನಡ ನಾಡಿನ ಉದಯಕ್ಕಾಗಿ ದುಡಿದಿದ್ದಾರೆ". ಹೀಗೆ ಕನ್ನಡ ಅಭಿವೃದ್ಧಿಗಾಗಿ ದುಡಿದ ಬಿ. ಬಸವಲಿಂಗಪ್ಪ ಅವರಿಗೆ ಕನ್ನಡ ಚಳುವಳಿಗಾರರು ಪ್ರತಿಭಟಿಸುವ ಮೂಲಕ ಹಾಗೆಯೇ ಬೆಂಗಳೂರು ಬಂದ್ ಮಾಡುವುದಾಗಿ ಬೆದರಿಸಿದರು. ಇಂತಹ ಮಹಾನ್ ಕನ್ನಡ ಅಭಿಮಾನಿ ಹೋರಾಟಗಾರ ಬಿ. ಬಸವಲಿಂಗಪ್ಪ ಅವರು ದಿನಾಂಕ 03–12–1973 ರಂದು ಈ ವಿಷಯಕ್ಕೆ ಸಂಬಂಧಿಸಿದಂತೆ ಸ್ವತಃ ಪತ್ರಿಕಾ ಹೇಳಿಕೆಗಳನ್ನು ಕೊಡುತ್ತಾರೆ.

"**ಬಸವಲಿಂಗಪ್ಪ ಅವರ ಸ್ಪಷ್ಟನೆ** – ಕನ್ನಡ ಭಾಷೆ ವಿರುದ್ಧ ನಾನು ಎಂದೂ ಮಾತಾಡಿಲ್ಲ. ಆದರೆ ಕನ್ನಡದಲ್ಲಿ ಬರೆದ ಕೆಲವು ಕನ್ನಡ ಪುಸ್ತಕಗಳ ಬಗ್ಗೆ ಮಾತ್ರವೆಂಬುದನ್ನು ನಾನು ಸ್ಪಷ್ಟಪಡಿಸಿದ್ದೇನೆ. ನಾನು ಕನ್ನಡ ಸಾಹಿತ್ಯದ ಬಲವಾದ ಬೆಂಬಲಿಗನಾಗಿದ್ದೇನೆ. ಮತ್ತು ಆ ಬಗ್ಗೆ ತುಂಬಾ ಗೌರವ ಹೊಂದಿರುವವನಾಗಿದ್ದೇನೆ. ನನ್ನ ಭಾಷೆ ಈ ವಿಚಾರವನ್ನು ತಿಳಿಯದಿದ್ದಲ್ಲಿ ಆ ರೀತಿಯಲ್ಲಿ ತಿಳಿದುಕೊಳ್ಳುವಂತೆ ವಿದ್ಯಾರ್ಥಿಗಳು ಎಲ್ಲಾ ವರ್ಗಗಳನ್ನು ಕೋರಿಕೊಳ್ಳುತ್ತೇನೆ". ಎಂದು ಮನಪೂರ್ವಕವಾಗಿ ಬಸವಲಿಂಗಪ್ಪ ಅವರು ರಾಜ್ಯದ ಜನತೆಯನ್ನು ವಿನಂತಿಸಿದರು. ಅಲ್ಲದೆ ಮಲ ಹೊರುವ ಪದ್ಧತಿ ರದ್ದು ಮುಂತಾದ ಕಾರ್ಯಕ್ರಮಗಳಿಂದ ಕಸಿವಿಸಿಕೊಂಡ ಹಲವರು ಅಪಪ್ರಚಾರ ಮಾಡುತ್ತಿದ್ದಾರೆ. ಇಂಥ ಜನ ಕಾಂಗ್ರೆಸ್‌ನಲ್ಲೇ ಜಾಸ್ತಿ ಇದ್ದಾರೆ. ನನಗೆ ಮಂತ್ರಿ ಕೆಲಸ ಹೋಗಬಹುದು, ಬಿಡಬಹುದು, ನಾನಂತೂ ಅಂಬೇಡ್ಕರ್ ಅವರ ವಿವೇಚನಾಯುಕ್ತ ನೀತಿ–ನಿಲುವುಗಳ ಪ್ರತಿಪಾದನೆಯನ್ನು ಮುಂದುವರಿಸುತ್ತೇನೆ.

"ನಾನು ಸಮಾಜವಾದವನ್ನೇ ಹೇಳಿ ಅದನ್ನೇ ಅನುಸರಿಸುತ್ತಿದ್ದೇನೆ" ಎಂದು ಹೇಳಿದರು ಈ ವೇಳೆಗಾಗಲೇ ಬಸವಲಿಂಗಪ್ಪ ಅವರಿಗೆ ಅವಕಾಶವಾದಿ ರಾಜಕಾರಣಿಗಳು, ಇಬ್ಬಂದಿ ಮಾಧ್ಯಮಗಳು, ಬೂಟಾಟಿಕೆಯ ಸಾಹಿತಿ ಸಮಾಜ ಸೇವಕರು ಅರಿವಿಗೆ ಬಂದಿದ್ದರು. ಇಂಥವರ ವಿರುದ್ಧ ತಮ್ಮ ವಾಗ್ದಾಳಿಯನ್ನು ಮುಂದುವರಿಸುತ್ತಾ ನಡೆದರು. ಮನುಷ್ಯರನ್ನು ವಂಚಿಸುವ ಯಾವುದೇ ವಿಚಾರ ಅವರಿಗೆ ಆಗುತ್ತಿರಲಿಲ್ಲ. ಪ್ರಗತಿಪರ ಸಮಾಜದ ಚಲನೆಗೆ ಚಕ್ರಗಳಾಗುವ ಜನ ಹುಟ್ಟಬೇಕೆಂಬುದು ಅವರ ಮಹಾತ್ವಾಕಾಂಕ್ಷೆಯಾಗಿತ್ತು.

ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ದೇ.ಜವರೇಗೌಡ ಅವರು ಕನ್ನಡ ಗ್ರಂಥಗಳನ್ನು ಓದುವುದರಿಂದ ವಿಚಾರ ಪರತೆ ಬರುವುದಿಲ್ಲ ಎಂಬ ಬಸವಲಿಂಗಪ್ಪ ಅವರ ಮಾತನ್ನು ಬಲವಾಗಿ ಅಲ್ಲಗಳೆದರು. ಯಾವುದೇ ಭಾಷೆಗೂ ವಿಚಾರ ಶೀಲತೆಗೂ ಸಂಬಂಧವಿಲ್ಲ ಎಂದು ಉದಾಹರಣೆ ಸಹಿತ ಪುಷ್ಟೀಕರಿಸಿದರು. ತಾವೇ ಆಗಲಿ ಯಾರೇ ಆಗಲಿ ಅಧಿಕಾರಕ್ಕೆ ಬಂದ ತಕ್ಷಣ ಸರ್ವಜ್ಞ ಆಗುವುದಿಲ್ಲ ಎಂದು ಹೇಳುತ್ತಾ ಬಸವಲಿಂಗಪ್ಪ ಅವರ ಹೇಳಿಕೆಯನ್ನು ಖಂಡಿಸಿದ್ದರು. ಬಹಳ ಮುಖ್ಯವಾಗಿ ವಿರೋಧ ಪಕ್ಷದ ನಾಯಕರಾಗಿದ್ದ ಎಚ್.ಡಿ.ದೇವೇಗೌಡರು ಬಸವಲಿಂಗಪ್ಪ ಅವರನ್ನು ಹತೋಟಿಯಲ್ಲಿಟ್ಟುಕೊಳ್ಳಲು ಆಗದಿದ್ದರೆ ಮುಖ್ಯಮಂತ್ರಿ ದೇವರಾಜ ಅರಸು ಅವರು ರಾಜೀನಾಮೆ ನೀಡಬೇಕೆಂದು ಒತ್ತಾಯಿಸತೊಡಗಿದರು. ಆಗ ಮುಖ್ಯಮಂತ್ರಿಯಾಗಿದ್ದ ಶ್ರೀ ಡಿ. ದೇವರಾಜ ಅರಸು ಅವರು ಪತ್ರಿಕಾ ಹೇಳಿಕೆಯನ್ನು ಕೊಡುತ್ತಾರೆ. "ಅರಸು ಮನವಿ – ಬಿ. ಬಸವಲಿಂಗಪ್ಪ ಅವರು ಮಾಡಿದರೆನ್ನಲಾದ ಟೀಕೆಗೆ ಸಂಬಂಧಿಸಿದಂತೆ ಪ್ರಸ್ತುತ ನಡೆಯುತ್ತಿರುವ ಪರ ಹಾಗೂ ವಿರೋಧಿ ಚಳುವಳಿಯಿಂದ ನಾನು ತೀವ್ರ ಮನನೊಂದಿದ್ದೇನೆ ಎಂದು ಹೇಳಿದರು. ಸಮಗ್ರ ಕನ್ನಡ ಸಾಹಿತ್ಯವನ್ನು ತಾವು ಖಂಡಿಸಿರುವುದಾಗಿ ವರದಿಯಾಗಿರುವುದನ್ನು ಶ್ರೀ ಬಸವಲಿಂಗಪ್ಪ ಅವರು ಅಲ್ಲಗಳೆದು, ಕನ್ನಡದ ಕೆಲವು ಸಾಹಿತ್ಯವನ್ನು ಮಾತ್ರ ನಾವು ಟೀಕಿಸಿರುವುದಾಗಿ ಸ್ಪಷ್ಟೀಕರಣ ನೀಡಿದ್ದಾರೆ. ಈ ಸ್ಪಷ್ಟೀಕರಣ ವಿವಾದವನ್ನು ಕೊನೆಗೊಳಿಸುವುದೆಂದು ನಾನು ನಿರೀಕ್ಷಿಸಿದೆ. ದುರದೃಷ್ಟವಶಾತ್ ಚಳುವಳಿ ಹಾಗೂ ಪ್ರತಿ ಚಳುವಳಿ ಮುಂದುವರಿಯುತ್ತಿವೆ ಎಂದು ಅರಸು ತಿಳಿಸಿದರು". ಅಲ್ಲದೆ ಪುರಾತನ ಕಾಲದಿಂದಲೂ ಕನ್ನಡ ಸಾಹಿತ್ಯ ತನ್ನ ಉನ್ನತ ಮಟ್ಟದ ದಾರ್ಶನಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ತಿರುಳಿನಿಂದ ವೈಶಿಷ್ಟ್ಯಪೂರ್ಣವಾಗಿದೆ. ಅದರಲ್ಲಿ ಸಂಶಯವಿಲ್ಲ. ನಮ್ಮ

ಕವಿಗಳು ಹಾಗೂ ಲೇಖಕರು ಯಾರಿಗೂ ಕಮ್ಮಿ ಇಲ್ಲ. ಶತಶತಮಾನಗಳ ಕಾಲದ ದೀರ್ಘ ಪರಂಪರೆಗೆ ಅನುಗುಣವಾಗಿ ಇತ್ತೀಚೆಗೆ ತಾನೇ ನಾವು ನಮ್ಮ ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣ ಮಾಡಿದ್ದೇವೆ. ಈಗ ನಾವು ಕಾಣುತ್ತಿರುವ ಚಳುವಳಿಗಳು ಕರ್ನಾಟಕದ ಹೆಸರಿಗೆ ಕಳಂಕವನ್ನುಂಟು ಮಾಡುತ್ತವೆ. ಆದುದರಿಂದ ಈ ಸಲ್ಲದ ವಿವಾದವನ್ನು ನಿಲ್ಲಿಸಬೇಕೆಂದು ನಾನು ಸಮಾಜದ ಎಲ್ಲ ವರ್ಗಗಳವರನ್ನು ಅದರಲ್ಲು ಮುಖ್ಯವಾಗಿ ವಿದ್ಯಾರ್ಥಿಗಳನ್ನು ಪ್ರಾರ್ಥಿಸುತ್ತೇನೆ ಎಂದು ಅರಸು ಅವರು ಹೇಳಿದರು. ವಿದ್ಯಾರ್ಥಿ ಚಳುವಳಿಗೆ ಸಂಬಂಧಿಸಿದಂತೆ ಕೆಲವು ಗುತ್ತಿಗೆದಾರರು ಬೆಂಗಳೂರಿನಲ್ಲಿ ವಿದ್ಯಾರ್ಥಿಗಳಿಗೆ ಹಣಸಹಾಯ ಮಾಡುತ್ತಿದ್ದಾರೆ ಎಂಬ ಸುದ್ಧಿ ನನಗೆ ಬಂದಿದ್ದು, ಅವರ ಬಗ್ಗೆ ಕ್ರಮ ಕೈಗೊಳುತ್ತೇನೆ ಎಂದು ಅವರು ಹೇಳಿಕೆ ನೀಡಿದರು. ಯಾರೇ ವಿನಂತಿಸಿದರೂ ಬೂಸಾ ಚಳುವಳಿ ದಿನದಿಂದ ದಿನಕ್ಕೆ ತನ್ನ ಉಗ್ರ ಸ್ವರೂಪವನ್ನು ಪಡೆದುಕೊಂಡಿತು. ಬಸವಲಿಂಗಪ್ಪ ಅವರನ್ನು ಬೆಂಬಲಿಸಿ ಇಡೀ ಶೋಷಿತ ಸಮುದಾಯ ಪ್ರತಿ ಹೋರಾಟಕ್ಕೆ ನಿಂತವು. ಡಾ. ಸಿದ್ದಲಿಂಗಯ್ಯ ಅವರು "ನಾವು ಆಗ ಸಚಿವರಾಗಿದ್ದ ಬಿ. ಬಸವಲಿಂಗಪ್ಪ ಅವರ ಬೆಂಬಲಕ್ಕೆ ನಿಂತೆವು. ಬೂಸಾ ಚಳುವಳಿಯಿಂದ ನಾನು ಅನೇಕ ಸಂಗತಿಗಳನ್ನು ಕಲಿತೆ, ಬಸವಲಿಂಗಪ್ಪನವರು ನನ್ನ ಗುರುಗಳಾಗಿದ್ದರು. ಅವರು ನನ್ನಲ್ಲಿ ವಿಶೇಷವಾದ ಧೈರ್ಯ ಉತ್ಸಾಹಗಳನ್ನು ತುಂಬಿದರು. ಅವರನ್ನು ಸಾವಿರಾರು ವಿದ್ಯಾರ್ಥಿಗಳು ಬೆಂಬಲಿಸಿದರು. ಬೆಂಗಳೂರಿನಲ್ಲಿ ನಡೆಸಿದ ಮೆರವಣಿಗೆಯ ನಾಯಕತ್ವವನ್ನು ನಾನು ವಹಿಸಿದ್ದೆ"ಎನ್ನುತ್ತಾರೆ.

"ಬಸವಲಿಂಗಪ್ಪನವರನ್ನು ಮುಖ್ಯಮಂತ್ರಿ ದೇವರಾಜ ಅರಸು ಅವರು ಮಂತ್ರಿ ಸಂಪುಟದಿಂದ ತೆಗೆದುಹಾಕಬೇಕೆಂಬ ಒತ್ತಡ ವಿಪರೀತವಾಯಿತು. ದೇವರಾಜ ಅರಸು ಅವರು ಆ ಬಗ್ಗೆ ನಿಜ ಸಂಗತಿ ಏನೆಂದು ಖುದ್ದಾಗಿ ತಿಳಿಸಬೇಕೆಂದು ಮೈಸೂರಿಗೆ ಬಂದು ಸರಕಾರಿ ಅತಿಥಿಗೃಹದಲ್ಲಿ ಇಳಿದುಕೊಂಡಿದ್ದರು. ನಾನು ಬಸವಲಿಂಗಪ್ಪನವರು ಭಾಷಣ ಮಾಡಿದ ಸಭೆಯಲ್ಲಿದ್ದೆ. ಪತ್ರಿಕೆಗಳಲ್ಲಿ ಬಂದ ವರದಿ ಸರಿಯಾಗಿರಲಿಲ್ಲ. ಬಸವಲಿಂಗಪ್ಪನವರು ಕನ್ನಡ ಸಾಹಿತ್ಯ ಬೂಸಾ ಸಾಹಿತ್ಯ, ಕನ್ನಡ ಸಾಹಿತಿಗಳು ಬೂಸಾ ಸಾಹಿತಿಗಳು ಎಂದು ಸಾರಸಗಟಾಗಿ ಹೇಳಿರಲಿಲ್ಲ. ಆ ಭಾಷಣದ ಹಿಂದಿನ ದಿನ ಶಿವಮೊಗ್ಗದಲ್ಲಿ ಹಿಂದೂ ಧರ್ಮ, ಪುರೋಹಿತಶಾಹಿ ಕುರಿತಂತೆ ಅವರು ಆಡಿದ ಮಾತುಗಳನ್ನು ವಿಕೃತಗೊಳಿಸಿ ಪತ್ರಿಕೆಯೊಂದು ವರದಿ ಮಾಡಿದೆ ಎಂದು, ಇಂಥ ಪತ್ರಿಕೆಗಳಲ್ಲಿ ಏನೇನೋ

ಬರೆದು ಹೊಟ್ಟೆ ತುಂಬಿಸಿಕೊಳ್ಳುವ ಇಂಥ ಕನ್ನಡ ಸಾಹಿತಿಗಳು ಬೂಸಾ ಸಾಹಿತಿಗಳು, ಅವರು ಬರೆಯುವ ಕನ್ನಡ ಸಾಹಿತ್ಯವೂ ಬೂಸಾ ಸಾಹಿತ್ಯ, ಅಂಥ ಬೂಸಾ ಸಾಹಿತ್ಯಕ್ಕೆ, ಅಂಥ ಬೂಸಾ ಸಾಹಿತಿಗಳಿಗೆ ತಾನು ಯಾವ ಬೆಲೆಯನ್ನು ಕೊಡುವುದಿಲ್ಲ, ಲಕ್ಷ್ಯವನ್ನು ಕೊಡುವುದಿಲ್ಲ ಎಂದು ಏರಿಸಿದ ವ್ಯಗ್ರ ಧ್ವನಿಯಲ್ಲಿ ಹೇಳಿದ್ದರು. ಹಾಗೆ ಹೇಳುವಾಗ ಬಸವಲಿಂಗಪ್ಪನವರ ಮನಸ್ಸಿನಲ್ಲಿದ್ದುದು, ಅವರು ಉದ್ದೇಶಿಸಿದ್ದು ಶಿವಮೊಗ್ಗದ ಭಾಷಣ ವರದಿ ಮಾಡಿದ ವರದಿಗಾರನ ಪತ್ರಿಕಾ ವರದಿ ಮತ್ತು ಆ ಪತ್ರಿಕಾ ವರದಿಗಾರ. ಆದರೆ ಕನ್ನಡ ಎಂಬ ಪದವನ್ನು ಯಾಕೋ ಬಹುಶಃ ಹಿಂದಿನ ದಿನದ ಭಾಷಣದ ವರದಿ ಕನ್ನಡ ಪತ್ರಿಕೆಯೊಂದರಲ್ಲಿ ಬಂದಿದ್ದುದರಿಂದಲೇ ಏನೋ ಎರಡು ಸಲ ಅಗತ್ಯವಿಲ್ಲದ, ಸೂಕ್ತವಲ್ಲದ ಸ್ಥಳ-ಸಂದರ್ಭದಲ್ಲಿ ಬಳಸಿದ್ದರು. ಅದು ಅಪಾರ್ಥಕ್ಕೆ ಅವಕಾಶ ಮಾಡಿಕೊಟ್ಟಿತೋ ಅಪಾರ್ಥ ವ್ಯಾಖ್ಯಾನ ಮಾಡಲೆಂದೇ ಕಾಯುತ್ತಿದ್ದವರಿಗೆ ಆಹಾರ ಒದಗಿತೋ! ಹೇಳುವುದು ಕಷ್ಟ. ಪತ್ರಿಕಾವರದಿ ಹಾಗೆ ಬರುವವರೆಗೆ ಕನ್ನಡ ಸಾಹಿತ್ಯ, ಕನ್ನಡ ಸಾಹಿತಿಗಳನ್ನು ಹಾಗೆ ಸಾರಾಸಗಟಾಗಿ ಅವರು ಬೂಸಾ ಎಂದರೇನೋ ಎಂದು ನನಗೆ ಅನ್ನಿಸಿಯೇ ಇರಲಿಲ್ಲ". ಎಂದು ಈ ನಾಡಿನ ಹೆಸರಾಂತ ವಿಮರ್ಶಕರಾದ ಪ್ರೊ. ಜಿ.ಎಚ್. ನಾಯಕ್ ಅವರು ಒಂದು ಪತ್ರಿಕಾ ಪ್ರಕಟಣೆಗಾಗಿ ಮಾಡಿಕೊಂಡಿದ್ದ ವರದಿಯನ್ನು ಮೇಲಿನ ಹೇಳಿಕೆಗಳನ್ನು ಶ್ರೀ ಚದುರಂಗರ ಮುಖಾಂತರ ಮುಖ್ಯಮಂತ್ರಿ ದೇವರಾಜ ಅರಸು ಅವರಿಗೆ ವಿವರಿಸಿದರು. ಯಾರು ಏನೇ ಹೇಳಿದರು ರಾಜೀನಾಮೆಯನ್ನು ತಡೆಯಲಿಕ್ಕಾಗಲಿಲ್ಲ. ದಿನಾಂಕ 14-12-1973 ರಂದು ಬಿ.ಬಸವಲಿಂಗಪ್ಪ ಅವರು ಮುಖ್ಯಮಂತ್ರಿ ಶ್ರೀ ಡಿ.ದೇವರಾಜ ಅರಸು ಅವರಿಗೆ ದೆಹಲಿಯಿಂದಲೇ ರಾಜೀನಾಮೆ ಪತ್ರ ಕಳುಹಿಸಿಕೊಟ್ಟರು. ಬಸವಲಿಂಗಪ್ಪ ಅವರು ಮುಂದಿನ ಮಂತ್ರಿ ಮಂಡಲದಲ್ಲಿ ಇರದಂತೆ ನೋಡಿಕೊಳ್ಳುವ ಸ್ಪಷ್ಟ ಹಾಗೂ ದಿಟ್ಟ ನಿಲುವನ್ನು ದೆಹಲಿಯ ಕಾಂಗ್ರೆಸ್ ವರಿಷ್ಠರು ತಾಳಬೇಕು ಎಂದು ಕರ್ನಾಟಕದಿಂದ ಬಸವಲಿಂಗಪ್ಪ ವಿರೋಧಿ ಸಚಿವರು ಕೇಂದ್ರಕ್ಕೆ ತಿಳಿಸಿದ್ದರು. ಅಂತಿಮವಾಗಿ ಬಸವಲಿಂಗಪ್ಪ ಅವರು ಅಧಿಕಾರ ಕಳೆದುಕೊಂಡರು. ಪ್ರತಿಗಾಮಿ ಶಕ್ತಿಗಳಿಗೆ ರಾಜಕೀಯ ಜಯ ದೊರಕಿತು. ಮಂತ್ರಿ ಪದವಿ ಹೋದದ್ದಕ್ಕಾಗಿ ನನಗೆ ನೋವು ಇಲ್ಲ. ಆದರೆ ಬಡವರ ವಿರುದ್ಧ ಹೋರಾಡುವವರು ಹಾಗೂ ಬಡವರ ವಿರುದ್ಧ ಕೆಲಸ ಮಾಡುವ ಜನ ಇಂದು ಅಧಿಕಾರದಲ್ಲಿದ್ದಾರೆ. ಬಡವರಿಗಾಗಿ ಕಾರ್ಯ ಮಾಡುವವರಿಗೆ ವಿಪತ್ತು ಇದ್ದೇ ಇದೆ ಎಂದು

ಬಸವಲಿಂಗಪ್ಪ ವಿಷಾದಿಸಿದರು. ಡಾ.ಸಿದ್ದಲಿಂಗಯ್ಯ ಅವರು ಹೇಳುವಂತೆ "ನಮ್ಮ ರಾಜ್ಯದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ನಡೆದ ಮೊದಲ ಹಲ್ಲೆ ಇದಾಗಿತ್ತು. ತನಗೆ ಅನ್ನಿಸಿದ್ದನ್ನು ಹೇಳುವ ಹಕ್ಕು ಅದರಲ್ಲೂ ದಲಿತರಿಗೆ ಇಲ್ಲ ಅನ್ನುವುದು ಬಹಳ ಚಿಂತಾಜನಕವಾದ ವಿಚಾರ. ಯಾರು ಏನು ಬೇಕಾದರೂ ಹೇಳಬಹುದು. ಆದರೆ ಒಬ್ಬ ದಲಿತ ಹೇಳಿದಾಗ ಜನ ಹುಷಾರಾಗಿ ಬಿಡುತ್ತಿದ್ದರು. ಅದರಲ್ಲೂ ಬಸವಲಿಂಗಪ್ಪ ಹೇಳಿದರೆ ಇನ್ನು ಹುಷಾರಾಗಿ ಬಿಡುತ್ತಿದ್ದರು". ಇದು ಸಂಪ್ರದಾಯವಾದಿಗಳ ಕೊಳಕು ಮನಸ್ಥಿತಿಯನ್ನು ತೋರಿಸುತ್ತದೆ.

ರಾಜೀನಾಮೆ ನೀಡಿದ ನಂತರದ ದಿನದಲ್ಲಿ ರಾಷ್ಟ್ರಕವಿ ಕುವೆಂಪು ಅವರು "ಈ ಬೂಸಾ ಸಾಹಿತ್ಯ ಅಂತ ಯಾವುದನ್ನ ಕರೆಯುತ್ತೇವೆಯೋ ಅದು ಪ್ರಪಂಚದ ಎಲ್ಲಾ ಸಾಹಿತ್ಯದಲ್ಲಿಯೂ ಇರುತ್ತದೆ. ಸುಮಾರು ಮುಕ್ಕಾಲು ಪಾಲಿನ ಮೇಲೆ ಇರುವುದು ಬೂಸಾ ಸಾಹಿತ್ಯವೆ. ದನ, ಎಮ್ಮೆ ಸಾಕುವವರಿಗೆ ಗೊತ್ತು ಬೂಸಾವೇ ಮುಖ್ಯ ಅಂತ, ಪ್ರಧಾನವಾದ ಆಹಾರ ಅಂತ" ಹೇಳಿ ಬಿ. ಬಸವಲಿಂಗಪ್ಪ ಅವರ ಬೂಸಾದ ಮಾತಿನ ಹಿನ್ನೆಲೆಯನ್ನು ಸಮರ್ಥಿಸಿದರು. "ಬಸವಲಿಂಗಪ್ಪನವರು ಕನ್ನಡ ಸಾಹಿತ್ಯವನ್ನು ಬೂಸಾ ಎಂದು ಕರೆದಾಗ ಹಾಗೇಕೆ ಕರೆದರೆಂಬ ಪ್ರಶ್ನೆಯನ್ನು ನಮಗೆ ನಾವು ಕೇಳಿಕೊಳ್ಳಬೇಕು. ನಮ್ಮ ಮತಧರ್ಮಗಳಿಂದ ಮೊದಲಿನಿಂದಲೂ ವಂಚಿತರಾಗಿ ಹೊರಗುಳಿದ ಪಂಚಮರಿಗೆ ಮತೀಯ ಸಾಹಿತ್ಯದಿಂದ ತುಂಬಿದ ಕನ್ನಡ ಸಾಹಿತ್ಯ ಅರ್ಥಹೀನವಾಗಿ ಕಂಡರೆ ಅದರಲ್ಲೇನು ಆಶ್ಚರ್ಯವಿದೆ? ಅಲ್ಲದೆ ಪಂಚಮರು ಕನ್ನಡ ಸಾಹಿತ್ಯದ ಇಂಥ ಮತೀಯ ಪರಂಪರೆಯನ್ನು ಉದ್ವಿಗ್ನತೆಯಲ್ಲಿ ತ್ಯಜಿಸಿದಾಗ ಮಹಾರಾಷ್ಟ್ರದ ಮಹರ್ ಜನಾಂಗದ ಲೇಖಕರಂತೆ (ದಲಿತ ಪ್ಯಾಂಥರ್ಸ್) ಇವರು ಕನ್ನಡಕ್ಕೆ ನಿಜವಾಗಿಯೂ ಹೊಸದಾದ್ದನ್ನು ಸೇರಿಸುವ ಸಾಧ್ಯತೆಯಿಲ್ಲವೇ? ಎಂದು ಜ್ಞಾನಪೀಠ ಪುರಸ್ಕೃತರಾದ ಡಾ. ಯು. ಆರ್. ಅನಂತಮೂರ್ತಿ ಅವರು ಬಿ. ಬಸವಲಿಂಗಪ್ಪ ಅವರನ್ನು ಬೆಂಬಲಿಸಿ ಪ್ರಜಾವಾಣಿ ಪತ್ರಿಕೆಗೆ ಬರೆದ ವಿಷಯವನ್ನು ತಿಳಿಸುತ್ತಾರೆ ಹೀಗೆ ಬಸವಲಿಂಗಪ್ಪ ಅವರ ಪರವಾಗಿ ದಲಿತೇತರರೂ ಪ್ರಗತಿಪರರೂ ಆದ ಕಾಳೇಗೌಡ ನಾಗವಾರ, ಅಗ್ರಹಾರ ಕೃಷ್ಣಮೂರ್ತಿ, ಕರಿಗೌಡ ಬೀಚನಹಳ್ಳಿ, ಶೂದ್ರ ಶ್ರೀನಿವಾಸ ಆ ಮೂಲಕ ಒಂದು ಹೊಸ ಸಮಾಜದ ಸೃಷ್ಟಿಗೆ ಬಯಸಿದರು, ಹಾಗೆಯೇ ಈ ಬೂಸಾ ಪ್ರಕರಣವಂತೂ ದಲಿತರಲ್ಲಿ ಜಾಗೃತಿಯನ್ನು ಮೂಡಿಸಿದಂತಹ ಚಳುವಳಿಯಾಗಿದೆ. ಆ ದಿನಗಳಲ್ಲಿ ಇದು ಕಷ್ಟಕರವಾದ ಪರಿಸ್ಥಿತಿಗಳನ್ನೂ

ಹುಟ್ಟುಹಾಕಿದರೂ ಆನಂತರದ ದಿನಗಳಲ್ಲಿ ಅದರಿಂದ ಒಳ್ಳೆಯ ಫಲ ಸಿಕ್ಕಿದೆ ಇದರ ಪ್ರತಿಫಲವಾಗಿ ದಲಿತರೆಲ್ಲರು ಒಗ್ಗೂಡಿ ಸ್ವಾಭಿಮಾನ, ಆತ್ಮಗೌರವ, ಸಂಘರ್ಷ ಮತ್ತು ಪರಿವರ್ತನೆ ಎಂಬ ಸಿದ್ಧಾಂತವನ್ನು ಆಧಾರವಾಗಿಟ್ಟುಕೊಂಡು 1974ರ ಡಿಸೆಂಬರ್ 28, 29 ಮತ್ತು 30 ರಂದು ಭದ್ರಾವತಿಯಲ್ಲಿ ದಲಿತ ಲೇಖಕರ ಮತ್ತು ಕಲಾವಿದರ ಬಳಗ ಎನ್ನುವ ಹೆಸರಿನಲ್ಲಿ ಪ್ರಥಮ ಸಮಾವೇಶವನ್ನು ನಡೆಸಲಾಯಿತು. ಈ ಸಮಾವೇಶವನ್ನು ಬಿ. ಬಸವಲಿಂಗಪ್ಪ ಅವರೇ ಉದ್ಘಾಟಿಸಿ ಮಾತನಾಡುತ್ತಾ "ಭಲವಂತ ಸಾಹಿತಿಗಳೆ ಮತ್ತು ಭಲವಂತ ಸಭಿಕರೆ ಡಿಸೆಂಬರ್ ಹದಿನಾಲ್ಕನೇ ತಾರೀಖು ಬೂಸಾ ಗಲಭೆಯಿಂದ ನನ್ನ ರಾಜೀನಾಮೆಯನ್ನು ಒಪ್ಪಿಸಿದೆ. ಅಂದಿನಿಂದ ಈ ಹೊತ್ತಿನವರೆಗೆ ಈ ದೇಶದಾದ್ಯಂತ ಅದರಲ್ಲೂ ಯುವಕರಲ್ಲಿ ಒಂದು ಕ್ರಾಂತಿಯ ಮನೋಭಾವನೆ, ಸಿಟ್ಟಿನ ಮನೋಭಾವನೆ, ಒಂದು ಧಾರ್ಮಿಕ ಸಿಟ್ಟಿನ ಮನೋಭಾವನೆ ಎದ್ದು ಕಾಣುತ್ತಿದೆ. ನಾನು ಎಲ್ಲಿಗೆ ಹೋದರೂ ಕೂಡ ಯುವಕ ವೃಂದ ಸಿಟ್ಟಿಗೆದ್ದು ನಾನು ಏನು ಕನ್ನಡ ಸಾಹಿತ್ಯದ ಬಗ್ಗೆ ಮಾತನಾಡಿದ್ದೆ ಅದು ಸರಿ, ಸರಿ ಇಲ್ಲ ಎನ್ನುವಂತಹ ವಾದ ವಿವಾದ ನಡೆಸುತ್ತಾ ಇದ್ದಾರೆ. ನಾನು ಮಾಡಿರುವಂತಹ ಭಾಷಣ ಸರಿ ತಪ್ಪು ಎಂದು ಹೇಳುವಂತಹುದು ಆ ಸಭೆಯಲ್ಲಿದ್ದ ಜನರಿಗೆ ಗೊತ್ತು. ಆದರೆ ಪತ್ರಕರ್ತರು ಮಾಡಿದ ಒಳಸಂಚೇನಿದೆ ಅದಕ್ಕೆ ಮೆಚ್ಚಬೇಕಾಗಿದೆ. ನನಗನ್ನಿಸುತ್ತದೆ ಇದು ಒಳ್ಳೆಯದಕ್ಕೆ ಆಯಿತು. ಯಾರು ಪತ್ರಕರ್ತರಿದ್ದಾರೆ ಅವರಿಗೆ ನಾನು ವೈಯಕ್ತಿಕವಾಗಿ ವಂದನೆಯನ್ನು ಸಲ್ಲಿಸುತ್ತೇನೆ. ಅದು ನನ್ನ ಜೀವನದಲ್ಲಿ ಮಹದಾನಂದವನ್ನು ಉಂಟು ಮಾಡಿದೆ. ಈ ಕ್ರಾಂತಿಯ ಸಂಕೇತ ಏನು? ಬಸವೇಶ್ವರ ತನ್ನ ಕಾಲದಲ್ಲಿ ಏನು ಬಸವ ಕಲ್ಯಾಣದಲ್ಲಿ ಪ್ರಾರಂಭ ಮಾಡಿದನೋ ಅದು ಈ ಹೊತ್ತು ಪ್ರಾರಂಭವಾಯಿತು ಅಂತ ನನಗನ್ನಿಸುತ್ತದೆ. ಜಾತಿ ಭೇದವಿಲ್ಲದೆ ಮತ ಭೇದವಿಲ್ಲದೆ, ಇಪ್ಪತ್ತು ಮೂವತ್ತು ಸಾವಿರ ಜನ, ಈ ಸಮೂಹ ಒಂದು ಕಡೆ ಸೇರಿ ಯಾವೊಬ್ಬ ಮನುಷ್ಯ ಸಂಕೇತ ರೂಪವಾಗಿ ಒಂದು ಸಮಾಜದಲ್ಲಿ ಬದಲಾವಣೆಯಾಗಬೇಕು, ವಿಚಾರಶಕ್ತಿ ಬದಲಾವಣೆಯಾಗಬೇಕು ಅಂತ ಹೇಳಿಬಿಟ್ಟು ಸಂಕಲ್ಪಮಾಡಿ, ಹಟ ತೊಟ್ಟು ನಿಲುವನ್ನು ತಾಳಿದ್ದಾನೆ. ಅವನಿಗೆ ತೋರಿಸುವಂತಹ ಆದರ ಅದನ್ನು ನೋಡಿ ನನ್ನ ಎದೆ ಉಬ್ಬಿಹೋಯಿತು. ತಮ್ಮನ್ನೆಲ್ಲ ನೋಡಿ ನನಗೆ ಬಹಳ ಆನಂದವಾಯಿತು. ತಾವು ಭಲವಂತರಾಗಿದ್ದೀರಿ, ನೀವು ಏನಾದರೂ ನಿಲುವನ್ನು ತಾಳಿ ಈ ಸಮಾಜದ ವ್ಯವಸ್ಥೆಯನ್ನು ಬದಲಾವಣೆ ಮಾಡಬೇಕು.

ವಿಚಾರ ಸರಣಿಯನ್ನು ಬದಲಾವಣೆ ಮಾಡಬೇಕು. ನೀವು ಇಂತಹ ಕೆಲಸ ಮಾಡುತ್ತೀರೆಂದು ನನಗೆ ಆಸೆ ಮೂಡಿದೆ. ನೀವೆಲ್ಲರು ಕೂಡ ಹೇಗೆ ಬಸವೇಶ್ವರ ಅನುಭವ ಮಂಟಪ ಅಂತ ಮಾಡಿಬಿಟ್ಟು ಜಾತಿ ಹೋಗಬೇಕು ಎಂದು ಪ್ರಾರಂಭ ಮಾಡಿದ ಹಾಗೆ ಮಾಡಬೇಕು. ಎಲ್ಲ ತಾಯಿ–ತಂದೆಗಳಿಗೂ ಹುಟ್ಟಿರುವಂತಹ ಮಕ್ಕಳನೆಲ್ಲ ಸೇರಿಸಿದ, ಯಾರಿಗೂ ವ್ಯತ್ಯಾಸವಿಲ್ಲ ಅಂತ ಹೇಳಿದ, ಹೆಣ್ಣಿಗೂ, ಗಂಡಿಗೂ ವ್ಯತ್ಯಾಸವಿಲ್ಲ ಅಂತ ಹೇಳಿದ, ಅಂತಹ ಒಂದು ಮಾನವೀಯತೆಯ ಸಮಾಜವನ್ನು ಸೃಷ್ಟಿ ಮಾಡಬೇಕು ಅಂತ ಹೇಳಿ ಆತ ಪ್ರಾರಂಭ ಮಾಡಿದ ಈ ಹೊತ್ತು ನಾವು ಪುನಃ ಅದನ್ನ ಪ್ರಾರಂಭ ಮಾಡಿದರೆ ನನಗನ್ನಿಸುತ್ತದೆ ಖಂಡಿತವಾಗಿಯೂ ಕೂಡ ನಮಗೆ ಯಶಸ್ಸು ದೊರಕುತ್ತದೆ" ಎಂದು ಹೇಳಿ ದಲಿತರಲ್ಲಿ ಆತ್ಮಸ್ಥೈರ್ಯ ಮೂಡಿಸಿದರು. ಒಂದು ರೀತಿಯಲ್ಲಿ ದಲಿತರ ಸಾಮೂಹಿಕ ಸಂಘಟನೆಯನ್ನು ಹುಟ್ಟುಹಾಕಿದರು. ಕೇವಲ ಪ್ರಾದೇಶಿಕವಾಗಿದ್ದ ದಲಿತ ಸಂಘರ್ಷ ಸಮಿತಿ, ದಲಿತ ಕ್ರಿಯಾ ಸಮಿತಿಗಳು ಬಲಿಷ್ಟವಾಗಿ ಒಂದೆಡೆ ಐಕ್ಯಗೊಂಡು ಪೂರ್ಣಪ್ರಮಾಣದಲ್ಲಿ 'ಕರ್ನಾಟಕ ದಲಿತ ಸಂಘರ್ಷ ಸಮಿತಿ' ಎಂದು ನಾಮಕರಣವಾಯಿತು. ನಂತರದ ದಿನದಲ್ಲಿ ದಲಿತ ಸಾಹಿತಿಗಳು ಹೋರಾಟಗಾರರು ಒಗ್ಗೂಡಿ ಪಂಚಮ ಪತ್ರಿಕೆ ತಂದರು, ನಂತರ ಸುದ್ದಿ ಸಂಗಾತಿ ಹುಟ್ಟುಹಾಕಿದರು, ದಲಿತರ ಚಳುವಳಿಗೆ ಪೂರಕವಾಗಿ ಮುಂಗಾರು, ಮಾನವ, ರುಜವಾತು, ಶೂದ್ರ, ಸಂಕ್ರಮಣ, ಲಂಕೇಶ್ ಪತ್ರಿಕೆಗಳು ಬೆಂಬಲವಾಗಿ ನಿಂತವು.

ಬೂಸಾ ಚಳುವಳಿಯನ್ನು ಒಳಹೊಕ್ಕಿ ನೋಡಿದಾಗ ಕೆಲವು ಸತ್ಯಾಸತ್ಯತೆಗಳನ್ನು ಕಾಣಬಹುದು. ಬಿ. ಬಸವಲಿಂಗಪ್ಪ ಅವರು ನೇರ ನಡೆ ನುಡಿಯುಳ್ಳವರಾಗಿದ್ದರು. ಜಾತಿವಾದಿ, ಕೋಮುವಾದಿ, ಬಂಡವಾಳಶಾಹಿಗಳ ಹುನ್ನಾರವನ್ನು ಪ್ರಗತಿಪರ ಚಳುವಳಿಗಳು ವಿಫಲಗೊಳಿಸಬೇಕು ಎಂದು ಕರೆಕೊಟ್ಟಿದ್ದರು. ಇವರ ಸಾಮಾಜಿಕ ಚಳುವಳಿಗೆ ಬುದ್ಧ, ಬಸವಣ್ಣ, ಅಂಬೇಡ್ಕರ್ ಮತ್ತು ಸಮಾಜವಾದ ಚಿಂತನೆಗಳ ತತ್ವಗಳು ಮುಖ್ಯವಾದವುಗಳಾಗಿದೆ "ಚಳುವಳಿ ಎನ್ನುವುದು ಬಡವರ ಆಸ್ತಿ, ದುರ್ಬಲರಿಗೆ, ನಿರ್ಗತಿಕರಿಗೆ ಚಳುವಳಿಯೇ ಶ್ರೀಮಂತಿಕೆಯ ಸಾಧನ ಎಂದು ಹೇಳುತ್ತಾ ಶೋಷಿತ ವರ್ಗದ ಜನರಲ್ಲಿ ಆತ್ಮವಿಶ್ವಾಸವನ್ನು ಬಿತ್ತಿದ್ದರು" ಇವೆಲ್ಲವೂ ಮಡಿವಂತಿಕೆಯ ಸಮಾಜವನ್ನು ಕೆರಳಿಸಿತ್ತು. ಹಾಗೂ ದ್ವೇಷಕ್ಕೆ ಕಾರಣವಾಗಿತ್ತು.

ಕವಿ ಹಾಗೂ ಹೋರಾಟಗಾರರಾದ ಡಾ.ಸಿದ್ಧಲಿಂಗಯ್ಯ ಅವರು ಗುರುತಿಸುವಂತೆ: "ಬಿ.ಬಸವಲಿಂಗಪ್ಪನವರು ದೇವರಾಜ ಅರಸು ಸರ್ಕಾರದಲ್ಲಿ ಮಂತ್ರಿಯಾಗಿ ಹೊಸ ಹೊಸ ರೀತಿಯ ಹೇಳಿಕೆಗಳನ್ನು ಕೊಡುತ್ತಿದ್ದರು. ಒಂದು ಸಲ ಅವರು ಗಾಂಧಿಗೆ ಸತ್ಯ ಅಂದ್ರೆ ಏನು ಅಂತ ಗೊತ್ತಿರಲಿಲ್ಲ ಅಂತ ಹೇಳಿಕೆ ಕೊಟ್ಟಿದ್ದರು. ಇನ್ನು ಕೆಲವು ತಿಂಗಳಾದ ಮೇಲೆ 'ಕನ್ನಡ ಸಾಹಿತ್ಯ ಬೂಸಾ' ಅಂತ ಹೇಳಿದರು ಈ ಹೇಳಿಕೆಗಳನ್ನು ಯಾವ ರೀತಿಯಲ್ಲಿ ಕೊಟ್ಟರು? ಅವುಗಳ ಸ್ವರೂಪ ಏನು? ಯಾವ ಒಂದು ಹಿನ್ನೆಲೆಯಲ್ಲಿ ಈ ಮಾತುಗಳನ್ನು ಹೇಳಿದರು ಅನ್ನೋದು ಅವರು ಹೇಳಿಕೆಗಳನ್ನು ಕೊಟ್ಟಾಗ ಸಭೆಯಲ್ಲಿದ್ದ ಸಭಿಕರಿಗೆ ಮಾತ್ರ ಗೊತ್ತು. ಆದರೆ ಪತ್ರಿಕೆಯಲ್ಲಿ ಬಸವಲಿಂಗಪ್ಪನವರು ಹೀಗೆ ಹೇಳಿದ್ದಾರೆ ಅಂತ ಬಂತು. ಬಸವಲಿಂಗಪ್ಪನವರು ಗಾಂಧೀಜಿಗೆ ಸತ್ಯ ಅಂದ್ರ ಏನೂ ಅಂತ ಗೊತ್ತಿರಲಿಲ್ಲ' ಎಂದು ಹೇಳಿದಾಗ ಕಾಂಗ್ರೆಸ್ ನವರಿಗೆ, ಗಾಂಧೀ ಭಕ್ತರಿಗೆ ಒಂದು ರೀತಿ ಗೊಂದಲ ಆಯ್ತು. ಆದರೆ ಯಾವ ಗಲಾಟೆನೂ ಆಗಲಿಲ್ಲ. ಮತ್ತೆ ಬಸವಲಿಂಗಪ್ಪನವರು 'ದೇವರ ಪಟಗಳನ್ನು ಚರಂಡಿಗೆ ಹಾಕಿ' ಎಂದು ಹೇಳಿದಾಗ ಭಕ್ತರಿಗೆ ಗೊಂದಲ ಆಯ್ತು. ಹೇಳಿಕೊಳ್ಳುವಂಥ ಗಲಾಟೆ ಆಗಲಿಲ್ಲ. ಆಮೇಲೆ ಬಸವಲಿಂಗಪ್ಪನವರು 'ಕನ್ನಡ ಸಾಹಿತ್ಯ ಬೂಸಾ' ಅಂತ ಹೇಳಿದಾಗ ಜನ ಗಲಾಟೆ ಶುರುಮಾಡಿದರು. ಈ ಗಲಾಟೆನ ಕೆಲವರು ನಿಂತು ಮಾಡಿಸಿದರು. ಮಂತ್ರಿಯೊಬ್ಬರು ಈ ರೀತಿ ಮಾತಾಡೋದು ಜನಗಳ ಭಯಕ್ಕೆ ಕಾರಣ ಆಯ್ತು. ಹಿಂದೆ ಗಾಂಧಿ ಮತ್ತು ದೇವರುಗಳನ್ನು ಬಸವಲಿಂಗಪ್ಪನವರು ಟೀಕೆ ಮಾಡಿದಾಗ ಸುಮ್ಮನಿದ್ದ ಜನರಿಂದ ಕನ್ನಡ ಸಾಹಿತ್ಯ ಬೂಸಾ ಅಂದಾಗ ಬೆಂಬಲಸಿಕ್ಕಿತು. ಹಿಂದೆ ದೇವರ ವಿಷಯಕ್ಕೆ ಗಾಂಧಿ ವಿಷಯಕ್ಕೆ ಬಸವಲಿಂಗಪ್ಪನವರ ಟೀಕೆಯಿಂದ ವಿಚಲಿತರಾಗಿದ್ದ ಜನವೂ ಈ ಗಲಾಟೆಗೆ ಸೇರ್ಕೊಂಡ್ರು ಕನ್ನಡ ಸಾಹಿತ್ಯವನ್ನು ಬೂಸಾ ಅಂದಿದ್ದರಿಂದ ಚಳುವಳಿ ಮಾಡಿದಂಥ ವಿದ್ಯಾರ್ಥಿಗಳು, ಕನ್ನಡ ಸಾಹಿತ್ಯವನ್ನೇನು ಅಧ್ಯಯನ ಮಾಡಿದವರಲ್ಲ ಅವರು ಕನ್ನಡದ ಉಗ್ರ ಅಭಿಮಾನಿಗಳೂ ಆಗಿರಲಿಲ್ಲ. ಎಲ್ರೂ ಚಳುವಳಿ ಮಾಡ್ತಿದಾರೆ ಅಂತ ಇವರೂ ಮಾಡಿದರು. ಅವರಿಗೆ ಕನ್ನಡ ಬೂಸಾ ಅಂದದ್ದು ಮುಖ್ಯವಾಗಿರಲಿಲ್ಲ. ಬಸವಲಿಂಗಪ್ಪ ನಾಸ್ತಿಕ ಆದ್ದರಿಂದ ಅವರು ರಾಜೀನಾಮೆ ಕೊಡ್ಬೇಕು ಅನ್ನುವುದು ಅವರ ಬೇಡಿಕೆಯಾಗಿತ್ತು" ಬಿ.ಬಸವಲಿಂಗಪ್ಪ ಅವರ ರಾಜಕೀಯ ಪ್ರವೇಶ ಪೂರ್ವ ನಿರ್ಧರಿತವಾದದ್ದು. ರಾಜಕೀಯ ಅಧಿಕಾರವಿದ್ದರೆ ಏನಾದರೂ ಬದಲಾವಣೆ ಮಾಡಬಹುದೆನ್ನುವ

ನಂಬಿಕೆ ಇವರದಾಗಿತ್ತು. 1957 ರಲ್ಲಿ ವಿಧಾನ ಸಭೆಯನ್ನು ಪ್ರವೇಶಿಸಿ 1958ರಲ್ಲಿ ಬಿ. ಡಿ. ಜತ್ತಿ ಅವರ ಸಚಿವ ಸಂಪುಟದಲ್ಲಿ ಉಪಗೃಹಮಂತ್ರಿಯಾಗಿ ನೇಮಕಗೊಂಡು ರಾಜ್ಯದಾದ್ಯಂತ ಸಂಚರಿಸಿ ದಲಿತರನ್ನು ಸಂಘಟಿಸಿದರು, ದಲಿತರನ್ನು ಪೊಲೀಸ್ ಇಲಾಖೆಯಲ್ಲಿ ಹೆಚ್ಚಾಗಿ ಸೇರಿಸಿ ನ್ಯಾಯದ ಭರವಸೆಯನ್ನು ಮೂಡಿಸಿದ್ದರು. 1972ರಲ್ಲಿ ದೇವರಾಜ ಅರಸು ನಾಯಕತ್ವದಲ್ಲಿ ಪೌರಾಡಳಿತ ಸಚಿವರಾಗಿ ದಲಿತರು ತಲೆ ತಲಾಂತರಗಳಿಂದ ಊರವರು ಮಾಡಿದ ಮಲ–ಮೂತ್ರಗಳನ್ನು ತಲೆಯ ಮೇಲೆ ಹೊತ್ತುಹಾಕುವ ಅಮಾನವೀಯ ಪದ್ಧತಿಯನ್ನು ಇಡೀ ರಾಷ್ಟ್ರದಲ್ಲಿ ಪ್ರಪ್ರಥಮ ಭಾರಿಗೆ ರದ್ದುಗೊಳಿಸಿದರು. "ಈ ಅಮಾನವೀಯ ವ್ಯವಸ್ಥೆಗೆ ಹಿಂದೂ ಮನುಷ್ಯರು ನಾಚದಿರುವುದು ಅವರ ಕ್ರೂರ ಹೃದಯಗಳ ನಗ್ನ ದರ್ಶನವೇ ಆಗಿದೆ. ಸಮಾಜದ ಎಲ್ಲರೂ ಎಲ್ಲಾ ಪ್ರಸಂಗಗಳಲ್ಲಿ ಈ ಕಾರ್ಯ ಮಾಡುತ್ತಿದ್ದರೆ ಏನು ಅನ್ನಿಸುತ್ತಿರಲಿಲ್ಲ. ಮತ್ತೊಬ್ಬರ ಮಲ–ಮೂತ್ರಗಳನ್ನು ಒಂದೇ ಒಂದು ಜನಾಂಗ ಕಾಲಾನುಕಾಲದಿಂದ ತಲೆ ಮೇಲೆ ಹೊತ್ತು ಸಾಗಿಸುವಂತದ್ದು ನಾಚಿಗೇಡಿನ ಪದ್ಧತಿ" ಎಂದು ತಿಳಿದು ವಿರೋಧಿಸಿದ್ದರು. ಹಾಗೆಯೇ ರದ್ದುಗೊಳಿಸಿದ್ದರು ಇದು ಬಸವಲಿಂಗಪ್ಪ ಅವರ ಅತ್ಯಂತ ಕ್ರಾಂತಿಕಾರಕ ಸಾಧನೆಯಾಗಿದೆ. "ದಲಿತರು ಮಲ ಹೊರುವುದನ್ನು ಅದೆಷ್ಟು ನಿಶ್ಚಿತವಾದ ಕಾರ್ಯಕ್ರಮ ಮಾಡಿಕೊಂಡು ಅವರು ನಿಲ್ಲಿಸಿದರು. ಆಗ ಬಂದ ವಾಗ್ವಾದಗಳು, ಜನ ಕೋರ್ಟಿಗೆ ಹೋಗಿದ್ದು ಮತ್ತು ದೆಹಲಿಯಿಂದ ಇಂದಿರಾಗಾಂಧಿ ಸರ್ಕಾರದಿಂದ ಒಬ್ಬರು ಬಂದು ಸದ್ಯಕ್ಕೆ ಇದಾಗದೆ ಇದ್ದರೆ ಕೊನೆ ಪಕ್ಷ ಒಂದು ಗಂಟೆಯಾದರೂ ಮಲ ತೆಗೆದುಕೊಂಡು ಹೋಗುವುದಕ್ಕೆ ಒಪ್ಪಬಹುದಲ್ಲ ಅಂತ ಅಂದಾಗ ಅದಕ್ಕೂ ಒಪ್ಪದೆ ಬಸವಲಿಂಗಪ್ಪನವರು ಅದನ್ನು ಸಾಧಿಸಿದ್ದು ನಮ್ಮ ಕಾಲದ ಒಂದು ದೊಡ್ಡ ಸಾಧನೆ ಎಂದು ಡಾ.ಯು.ಆರ್.ಅನಂತಮೂರ್ತಿ ಅವರು ಹೇಳುತ್ತಾರೆ". ಇದು ಮಡಿವಂತಿಕೆಯ ಸಮಾಜವನ್ನು ದಿಗ್ಭ್ರಮೆಗೊಳಿಸಿತು. ಅಲ್ಲದೆ ಬಿ. ಬಸವಲಿಂಗಪ್ಪ ಅವರನ್ನು ರಾಜಕೀಯದಿಂದ ಕಿತ್ತೆಸೆಯಲು ಒಳಸಂಚನ್ನು ರೂಪಿಸಿದರು. ಹಾಗೆಯೇ ಇದು ಫಲಕಾರಿಯೂ ಕೂಡ ಆಯ್ತು. ವಸತಿ ಸಚಿವರಾಗಿ ಗೃಹಮಂಡಳಿ ವತಿಯಿಂದ ಮನೆಗಳನ್ನು ಪರಿಶಿಷ್ಟ ಜಾತಿ, ಪಂಗಡ ಹಾಗೂ ಅಲ್ಪಸಂಖ್ಯಾತರ ವರ್ಗಗಳಿಗೆ ಮೀಸಲಿಡುವುದಕ್ಕೆ ಕಾರಣಕರ್ತರಾದರು. ಗ್ರಾಮಾಂತರ ಪ್ರದೇಶದಲ್ಲಿ ಜನತಾಗೃಹ ಯೋಜನೆಯನ್ನು ಆರಂಭಿಸಿದರು. ಮನೆ ನಿರ್ಮಿಸಲು ಅಸಮರ್ಥರಾದ ಸಮಾಜದ ವಸತಿ ರಹಿತ ದುರ್ಬಲ ವರ್ಗದವರಿಗಾಗಿ

ಸ್ವಾಯುತ್ತಾ ಮಂಡಳಿಗಳಲ್ಲಿ ಸೋಷಿಯಲ್ ರೆಸ್ಪಾನ್ಸಿಬಲಿಟಿ ಲೆವಿ ಎಂಬ ಒಂದು ನಿಧಿಯನ್ನು ಪ್ರಾರಂಭಿಸಿದರು. ಹೊಸದಾಗಿ ರಚನೆಗೊಂಡ ಬಡಾವಣೆಗಳಲ್ಲಿ ಶೇ. 18 ರಷ್ಟು ನಿವೇಶನಗಳನ್ನು ದಲಿತರಿಗಾಗಿ ಮೀಸಲಿಟ್ಟರು. ದೇವದಾಸಿ ಪದ್ಧತಿಯ ಅಮಾನವೀಯ ಮಹಿಳಾ ಶೋಷಣೆಯನ್ನು ಕಟುವಾಗಿ ಅಲ್ಲಗಳೆದು ಇಂತಹ ನೀಚ ಪದ್ಧತಿಯನ್ನು ನಿಷೇಧಿಸಲು ಮತ್ತು ಅದರಿಂದ ನೊಂದವರ ಬದುಕಿಗೆ ಸೂಕ್ತ ಬದಲಾವಣೆಗಳನ್ನು ತರುವಲ್ಲಿ ಮುಂದಾದರು ಹಾಗೆಯೇ ಕರ್ನಾಟಕ ರಾಜ್ಯ ಸೇವೆಯಲ್ಲಿ ಪರಿಶಿಷ್ಟರ ಮೀಸಲಾತಿಯ ಕಡ್ಡಾಯ, ಬಡ್ತಿ, ನೇಮಕಾತಿಯಲ್ಲಿ ಮೀಸಲು, ರೋಸ್ಟರ್ ಹೀಗೆ ದಲಿತಪರ ನಿಯಮವನ್ನು ಜಾರಿಗೊಳಿಸುವಲ್ಲಿ ಸಾಕಷ್ಟು ಶ್ರಮಿಸಿದವರಾಗಿದ್ದಾರೆ.

ಇವೆಲ್ಲವೂ ಮೇಲ್ವರ್ಗದ ಜಾತಿ ಹಿಂದೂಗಳ ಮನಸ್ಸಿನಲ್ಲಿ ಬಿ. ಬಸವಲಿಂಗಪ್ಪ ಅವರನ್ನು ವಿರೋಧಿಸುವ ಮನೋಭಾವನೆಯನ್ನು ಬೆಳೆಸಿತು. ಇವರನ್ನು ಹೀಗೆ ಬಿಟ್ಟರೆ ನಮಗೆ ಉಳಿಗಾಲವಿಲ್ಲ ಎಂದು ತಿಳಿದು ಬೂಸಾ ಚಳುವಳಿಯಲ್ಲಿ ಬಸವಲಿಂಗಪ್ಪ ಅವರನ್ನು ಬಲಿ ತೆಗೆದುಕೊಂಡರು. ಒಂದು ಕಡೆ ಇದರಿಂದ ದಲಿತರಿಗೆ ನಷ್ಟ ಉಂಟಾದರೂ ಆನಂತರದ ದಿನಗಳಲ್ಲಿ ಜಾಗೃತಿ ಮೂಡಿಸಿದಂತಾಯಿತು. "ಬಿ.ಬಸವಲಿಂಗಪ್ಪನವರು ಜಾಗೃತಿ ಜ್ಯೋತಿಯನ್ನು ಈ ನಾಡಿನ ಜನಮನದಲ್ಲಿ ಅದರಲ್ಲೂ ಶೋಷಿತ ವರ್ಗಗಳ ಹೃದಯದಲ್ಲಿ ಹಚ್ಚಿದ್ದಾರೆ. ಆ ಜ್ಯೋತಿ ಆರದಂತೆ ನೋಡಿಕೊಳ್ಳಬೇಕು. ಅದು ಸದಾ ಬೆಳಕನ್ನು ಚೆಲ್ಲುತ್ತಾ ಇರಬೇಕು. ಅದು ಆರಿ ಮಂಕಾಗಬಾರದು. ಆದ್ದರಿಂದಲೇ ನಾವು ಮತ್ತೆ ಮತ್ತೆ ಅವರನ್ನು ನೆನಪು ಮಾಡಿಕೊಳ್ಳಬೇಕು". ರಾಜ್ಯದ ದಲಿತ ನಾಯಕರಾಗಿ ಬಿ. ಬಸವಲಿಂಗಪ್ಪ ಅವರು ದಲಿತ ಜನಾಂಗದ ಮನಗೆದ್ದಿದ್ದಾರೆ. ಕರ್ನಾಟಕದ ದಲಿತ ಚಳುವಳಿಗೇ ತಮ್ಮನ್ನೇ ಅರ್ಪಿಸಿಕೊಂಡಿದ್ದಾರೆ. ಬೂಸಾ ಚಳುವಳಿ ದಲಿತರು ಮತ್ತು ಪ್ರಗತಿಪರ ಚಿಂತನೆ ಇರುವ ದಲಿತೇತರರನ್ನು ಒಗ್ಗೂಡಿಸಿದ ಪ್ರಕರಣವಾಗಿದೆ. ಒಂದು ದೃಷ್ಟಿಯಲ್ಲಿ ಚಾರಿತ್ರಿಕವಾಗಿ ಇದು ಕರ್ನಾಟಕದ ನೆಲದಲ್ಲಿ ದಲಿತ ಸಂಘಟನೆಗೆ ಮೂಲ ಪ್ರೇರಕ ಶಕ್ತಿಯೂ ಆಗಿದೆ.

## 8. ಬೌದ್ಧ ಧರ್ಮದೆಡೆಗೆ

ಇತಿಹಾಸವನ್ನು ಅವಲೋಕಿಸಿದಾಗ ಬೌದ್ಧಧರ್ಮವನ್ನು ಪ್ರಚಾರ ಮಾಡುವ ಕೆಲಸವನ್ನು ಕೈಗೆತ್ತಿಗೊಂಡವರು ಮೊದಲು ಈ ದೇಶದ

ಮೂಲನಿವಾಸಿಗಳಾದ ನಾಗ ಜನಾಂಗದವರು ಎಂಬ ಸಂಗತಿಯ ದೇಶದ ಬೌದ್ಧ ಚರಿತ್ರೆಯಿಂದ ಗೊತ್ತಾಗುತ್ತದೆ. ಬೌದ್ಧ ಧರ್ಮದ ಮೂಲಭೂತ ನಿಯಮವೇ ಸಮಾನತೆಯಾಗಿದೆ. ಮೇಲು, ಕೀಳು ಎಂಬ ಭೇದವನ್ನು ವಿರೋಧಿಸಿ ಸಮಾನತೆಯ ಬಗ್ಗೆ ಮಾತಾಡಿದ ಮೊದಲ ಮಹಾನ್ ವ್ಯಕ್ತಿಯೆಂದರೆ ಗೌತಮಬುದ್ಧ ಇವರು ತಮ್ಮ ಧರ್ಮವನ್ನು ದೈವಿಕ ಧರ್ಮವೆಂದೂ, ತಾವು ದೈವಾಂಶ ಸಂಭೂತರೆಂದೂ ಹೇಳಿಕೊಂಡಿಲ್ಲ. ಇಂತಹ ಮಾನವ ಪರವಾದ ಬೌದ್ಧಧರ್ಮವನ್ನು ಅಪ್ಪಿಕೊಂಡ ಮೌರ್ಯ ಸಾಮ್ರಾಜ್ಯದ ಅಶೋಕನ ಕಾಲದಲ್ಲಿ ಬುದ್ಧ ಧರ್ಮ ಉತ್ತುಂಗ ಸ್ಥಿತಿಯಲ್ಲಿತ್ತು. 12ನೇ ಶತಮಾನದ ವಚನ ಚಳುವಳಿ ಬೌದ್ಧ ಧರ್ಮ ತತ್ವಾಂಶವನ್ನೇ ಹೋಲುವ ಬಸವಾದಿ ಶರಣರು ಕನ್ನಡದ ನೆಲದಲ್ಲಿ ನಡೆಸಿದ ಸಾಮಾಜಿಕ ಹೋರಾಟ ಅಪ್ರತಿಮವಾದುದು. ಬುದ್ಧ ಬಸವಾದಿ ಶರಣರ ನಂತರ ಈ ಬುದ್ಧ ಧರ್ಮದ ಪ್ರವರ್ತಕರಾಗಿ ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಕಾಣುತ್ತಾರೆ. 1935ರಲ್ಲಿ ನಾಸಿಕ್‌ನ ಇಯೋಲದ ಬಹಿರಂಗ ಸಭೆಯಲ್ಲಿ ನಾನು ಹಿಂದುವಾಗಿ ಹುಟ್ಟಿರಬಹುದು, ಆದರೆ ಹಿಂದುವಾಗಿ ಸಾಯಲಾರೆ ಎನ್ನುವ ಪ್ರತಿಜ್ಞೆಯನ್ನು ಮಾಡುತ್ತಾರೆ. ಹಾಗೆಯೇ 1956 ಅಕ್ಟೋಬರ್ 14 ರಂದು ನಾಗಪುರದಲ್ಲಿ ಲಕ್ಷಾಂತರ ಅಭಿಮಾನಿಗಳೊಡನೆ ಬೌದ್ಧ ಧರ್ಮವನ್ನು ಸ್ವೀಕರಿಸುತ್ತಾರೆ.

ಮಹಾ ಮಾನವತಾವಾದಿಯಾದ ಅಂಬೇಡ್ಕರ್ ಅವರ ಕಟ್ಟಾ ಅನುಯಾಯಿಯಾದ ಬಿ.ಬಸವಲಿಂಗಪ್ಪ ಅವರು ಅಂಬೇಡ್ಕರ್‌ರ ಚಿಂತನೆಗಳಿಂದ ಪ್ರಭಾವಿತರಾಗಿದ್ದು, ಕರ್ನಾಟಕದ ರಾಜಕಾರಣದಲ್ಲಿ ವಿಶಿಷ್ಟ ಪ್ರಾಮುಖ್ಯತೆಯನ್ನು ಪಡೆದು ದಲಿತ ವರ್ಗಕ್ಕೆ ತಮ್ಮ ಬದುಕನನ್ನೇ ಅರ್ಪಿಸಿದ ಧೀಮಂತ ರಾಜಕಾರಣಿ. ದಲಿತರ ಹೀನಾಯ ಸ್ಥಿತಿಗೆ ಕೇವಲ ಬಡತನ, ಅಜ್ಞಾನಗಳಷ್ಟೆ ಕಾರಣವಲ್ಲ. ತಾವಿರುವ ಹಿಂದೂ ಧರ್ಮದ ವ್ಯವಸ್ಥೆಯೇ ಕಾರಣವೆಂದು ಗ್ರಹಿಸಿ ಶಾಲೆಯೊಂದನ್ನು ಪ್ರಾರಂಭಿಸಿ ವಿದ್ಯಾರ್ಥಿಗಳಿಗೆ ಹಿಂದೂ ಧರ್ಮದ ಸೋಂಕು ತಾಕದಂತೆ ಬೆಳೆಸಬೇಕಾದರೆ ಆ ಶಾಲೆಯನ್ನು ಬೌದ್ಧ ಕೇಂದ್ರವನ್ನಾಗಿ ರೂಪಿಸಬೇಕೆಂಬ ಆಶಯ ಅವರದಾಗಿತ್ತು. ಅಂಬೇಡ್ಕರ್ ಅವರು ಮೈಸೂರು ಮಹಾರಾಜರಿಗೆ ಕಾನೂನು ಸಲಹೆಗಾರರಷ್ಟೇ ಅಲ್ಲದೆ, ಆಪ್ತ ಮಿತ್ರರಾಗಿದ್ದರು. ಬುದ್ಧ ಧರ್ಮಕ್ಕೆ ಒಲಿದಿದ್ದ ಅವರು ಅದರ ಬೆಳವಣಿಗಾಗಿ ಬೆಂಗಳೂರಿನಲ್ಲಿ ಜಮೀನು ನೀಡುವಂತೆ ಮಹಾರಾಜರನ್ನು ಕೇಳಿದ್ದರು. ಇದರ ಪ್ರತಿಫಲವಾಗಿ 1955ರಲ್ಲಿ ಅಂಬೇಡ್ಕರ್ ಅವರಿಗೆ ಬೌದ್ಧ ಕೇಂದ್ರವೊಂದನ್ನು ತೆರೆಯುವ

ಸದುದ್ದೇಶದಿಂದ ಮೈಸೂರು ಮಹಾರಾಜರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್ 5 ಎಕರೆ ಭೂಮಿಯನ್ನು ಬೆಂಗಳೂರಿನ ಪ್ರತಿಷ್ಠಿತ ರಾಜಮಹಲ್ ವಿಲಾಸ್ ಬಡಾವಣೆಯಲ್ಲಿ ನೀಡಿದ್ದರು. ಆದರೆ ಅಂಬೇಡ್ಕರ್ ಅವರ ಮಹಾಪರಿನಿರ್ವಾಣದ ನಂತರ ಆ ನಿವೇಶನ ಅನಾಥವಾಗಿತ್ತು. ಅಂಬೇಡ್ಕರ್ ಅವರು ಹುಟ್ಟುಹಾಕಿದ 'ಪೀಪಲ್ಸ್ ಎಜುಕೇಷನ್ ಸೊಸೈಟಿಯ ಟ್ರಸ್ಟಿಗಳಾಗಿ 1964ರಲ್ಲಿ ಬಸವಲಿಂಗಪ್ಪ ಅವರು ನೇಮಕಗೊಂಡು ಅದನ್ನು ಸೊಸೈಟಿಯ ಸೊತ್ತನ್ನಾಗಿಸಿ ಅಲ್ಲಿ 1984ರಲ್ಲಿ ನಾಗಸೇನಾ ವಿದ್ಯಾಲಯ ಪ್ರಾರಂಭಿಸಿ ಬುದ್ಧ ಭೂಮಿ ಎಂದು ನಾಮಕರಣ ಮಾಡಿದರು. ಯಾವುದೇ ಸಾರ್ವಜನಿಕರ ಹಣಕಾಸಿನ ಸಹಾಯವಿಲ್ಲದೆ ಇಲ್ಲಿ ಈಗ ಬಸವಲಿಂಗಪ್ಪ ಅವರು ಬಯಸಿದಂತೆ ಬೃಹತ್ ಆದ ಬೌದ್ಧ ವಿಹಾರ ಅಸ್ಥಿತ್ವದಲ್ಲಿದ್ದು ಧ್ಯಾನಮಂದಿರ, ಸುಸಜ್ಜಿತವಾದ ಗ್ರಂಥಾಲಯ, ಅಂತರ್ ರಾಷ್ಟ್ರೀಯ ಮಟ್ಟದ ಬೌದ್ಧ ಬಿಕ್ಷುಗಳ ತರಬೇತಿ ಕೇಂದ್ರವಿದ್ದು ಇದಕ್ಕೆ ಹಗಲಿರುಳೆನ್ನದೆ ಶ್ರಮಿಸುತ್ತಿರುವವರು ಪ್ರಸ್ತುತ ಪೀಪಲ್ಸ್ ಎಜುಕೇಷನ್ ಸೊಸೈಟಿಯ ಅಧ್ಯಕ್ಷರು, ಈ ರಾಜ್ಯದ ಹಿರಿಯ ರಾಜಕೀಯ ಮುತ್ಸದ್ಧಿ ಕೆ.ಎಚ್.ರಂಗನಾಥ್ ಅವರಾಗಿದ್ದಾರೆ.

ಅಂಬೇಡ್ಕರ್ ಅವರು ದಲಿತರ, ಹಿಂದುಳಿದವರ ಏಳಿಗೆಗಾಗಿ 1929ರಲ್ಲಿ ಧಾರವಾಡದಲ್ಲಿ ಶಿಕ್ಷಣ ಸಂಸ್ಥೆಯನ್ನು ತೆರೆದು ವಸತಿ ನಿಲಯವನ್ನು ಪ್ರಾರಂಭಿಸುತ್ತಾರೆ. ಇದರ ಆಡಳಿತವನ್ನು ನಂತರದ ವರ್ಷಗಳಲ್ಲಿ ವಹಿಸಿಕೊಂಡ ಬಸವಲಿಂಗಪ್ಪ ಅವರು ದಲಿತ ಪದವಿ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸುತ್ತಾರೆ. ಅಲ್ಲದೆ ಡಾ.ಬಿ.ಆರ್.ಅಂಬೇಡ್ಕರ್ ಎಜುಕೇಷನ್ ಆಂಡ್ ಚಾರಿಟೇಬಲ್ ಟ್ರಸ್ಟ್(ರಿ) ಸ್ಥಾಪಿಸಿ ಬುದ್ಧರಕ್ಕಿಥ ವಸತಿ ಶಾಲೆ ಪ್ರಾರಂಭಿಸುತ್ತಾರೆ. ಹಾಗೆಯೇ ಶಿವಮೊಗ್ಗದ ರಾಗಿಗುಡ್ಡದಲ್ಲಿ 170 ಎಕರೆ ಜಮೀನು ಪಡೆದು ದಲಿತ ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಜಾನ್ಸಿರಾಣಿ ಲಕ್ಷ್ಮೀಬಾಯಿ ವಿದ್ಯಾರ್ಥಿನಿಯರ ವಸತಿ ಶಾಲೆಯನ್ನು, ನೌಕರಸ್ಥ ಮಹಿಳೆಯರಿಗಾಗಿ ವಸತಿ ಗೃಹ ಪ್ರಾರಂಭಿಸಿರುತ್ತಾರೆ. ಈ ಸಂಸ್ಥೆಗಳನ್ನು ಶಾಸಕರಾದ ಬಿ.ಪ್ರಸನ್ನಕುಮಾರ್ ಅವರು ಅಧ್ಯಕ್ಷರಾಗಿ ಮುನ್ನಡೆಸಿಕೊಂಡು ಹೋಗುತ್ತಿರುತ್ತಾರೆ. ಇದು ಬಸವಲಿಂಗಪ್ಪ ಅವರ ಮಾನವೀಯ ಮೌಲ್ಯವನ್ನು ತಿಳಿಸುತ್ತದೆ.

ಬಸವಲಿಂಗಪ್ಪ ಅವರು ಮಾನವ ಧರ್ಮವಾದ ಬೌದ್ಧ ಧರ್ಮದ ಕಡೆಗೆ ಸಾಗುತ್ತ "ಕರ್ನಾಟಕ ಬುದ್ಧ ಧಮ್ಮ ಸಮಿತಿ" ಸ್ಥಾಪಿಸಿ ಅದಕ್ಕೆ ಅಧ್ಯಕ್ಷರಾಗಿ

ರಾಜ್ಯದೆಲ್ಲೆಡೆ ಪ್ರವಾಸವನ್ನು ಕೈಗೊಂಡು ಜಿಲ್ಲಾ ಕೇಂದ್ರಗಳಲ್ಲೂ ಬುದ್ಧ ಧಮ್ಮ ಸಮಿತಿಯನ್ನು ರಚಿಸಿ ಬುದ್ಧ ಧಮ್ಮದ ಪ್ರಚಾರಕರಾಗಿ ಅಂಬೇಡ್ಕರ್ ಅವರ ನಂತರ ಶ್ರಮಿಸಿದವರಾಗಿದ್ದಾರೆ. ಶಾಂತಿಗಾಗಿ ಅಂತರ್‌ರಾಷ್ಟ್ರೀಯ ನೋಬೆಲ್ ಪ್ರಶಸ್ತಿ ಪಡೆದ ದಲಾಯ್‌ಲಾಮ ಅವರನ್ನು ಅಭಿನಂದಿಸುವ ಸಲುವಾಗಿ 02-08-1991 ರಂದು ಬೆಂಗಳೂರಿನಲ್ಲಿ ಅದ್ದೂರಿಯಾದ ಕಾರ್ಯಕ್ರಮ ಆಯೋಜಿಸಿ, ವಿದೇಶಿ ಅನುಯಾಯಿಗಳೊಡನೆ ತಮ್ಮ ಬೆಂಬಲಿಗರ ಸಂಬಂಧವನ್ನು ಇನ್ನಷ್ಟು ಬೆಸೆದುಕೊಂಡರು. 1992ರ ಜುಲೈ 2 ರಂದು ಬಿಜಾಪುರದಲ್ಲಿ ಬಸವಲಿಂಗಪ್ಪ ಅವರ ನೇತೃತ್ವದಲ್ಲಿ ನಡೆದ ಬೌದ್ಧ ಧರ್ಮದ ಬೃಹತ್ ಸಭೆ ಯಶಸ್ವಿಯಾಗಿ ನಡೆಯಿತು. ಅಂದು ಸಾವಿರಾರು ಜನರು ಬೌದ್ಧ ಧರ್ಮದತ್ತ ನಡೆದರು. ಹೀಗೆ ದಲಿತರನ್ನು ಸಂಘಟಿಸುತ್ತ ಅವರ ಬಿಡುಗಡೆಗಾಗಿ ಬೌದ್ಧ ಧರ್ಮ ಬಯಸಿ ಅವರಲ್ಲಿ ಆತ್ಮಸ್ಥೈರ್ಯವನ್ನು ತುಂಬಿದವರಾಗಿದ್ದಾರೆ.

ಬಸವಲಿಂಗಪ್ಪ ಅವರಿಗೆ ಅಂಬೇಡ್ಕರ್ ಅವರ ಹಾಗೆ ರಾಜ್ಯದಲ್ಲಿ ಬೃಹತ್ ಪ್ರಮಾಣದಲ್ಲಿ ಜನರನ್ನು ಸಂಘಟಿಸಿ ಬೌದ್ಧ ಧರ್ಮದ ಕಡೆಗೆ ಸಾಗುವ ಕಾರ್ಯಕ್ರಮವನ್ನು ನಡೆಸಬೇಕೆಂದಿದ್ದರು. ಆದರೆ ಅವರ ಆಸೆ ಈಡೇರಲೇ ಇಲ್ಲ. ಅವರ ಕೊನೆಯ ದಿನಗಳಲ್ಲೂ ತಮಗಿಂತ ಕಿರಿಯವರಾದವರನ್ನು ಮುಖ್ಯಮಂತ್ರಿಯನ್ನಾಗಿ ಮಾಡಿ ತಮಗೆ ಕನಿಷ್ಠ ಮಂತ್ರಿ ಸ್ಥಾನವನ್ನು ನೀಡದ ರಾಜಕೀಯ ಪಿತೂರಿ ಇವರನ್ನು ಮಾನಸಿಕವಾಗಿ ನರಳಿಸಿತು. ಈ ದೇಶದ ಬಡವರಿಗೆ, ದಲಿತರಿಗೆ ನ್ಯಾಯ ಸಿಗುವುದೇ ಎಂಬ ಆತಂಕ ಇವರನ್ನು ಕಾಡತೊಡಗಿತು. ರಾಜಕೀಯ ಗೊಂದಲದಲ್ಲಿ ಸಿಲುಕಿ 26-12-1992ರಂದು ತೀವ್ರವಾದ ಮೆದುಳು ಒತ್ತಡದಿಂದ ಪರಿನಿರ್ವಾಣ ಹೊಂದಿದರು. ಶೋಷಿತರಿಗಾಗಿ ದುಡಿದ ಈ ಮಹಾಚೇತನದ ಆಸೆಯನ್ನು ಪೂರೈಸುವ ದಿಕ್ಕಿನಲ್ಲಿ ದಲಿತ ಸಮುದಾಯ ಸಾಗಬೇಕಿದೆ.

# ಭಾಗ – II

# I ಗೃಹ ಇಲಾಖೆಯಲ್ಲಿ ಸುಧಾರಣೆ

## 1. ಸದನದಲ್ಲಿ ದೇವರನ್ನು ಪ್ರಾರ್ಥಿಸಿ ಎಂಬುದಕ್ಕೆ ವಿರೋಧ (9ನೇ ಏಪ್ರಿಲ್ 1960)

ಶ್ರೀ ಬಿ. ಬಸವಲಿಂಗಪ್ಪ (ಗೃಹ ಖಾತೆಯ ಉಪ-ಸಚಿವರಾಗಿ):- ಸರ್, ನಾನು ಇಲ್ಲಿ ಒಬ್ಬ ಸಚಿವನಾಗಿ ಆ ಹುದ್ದೆಯ ದಕ್ಷತೆಯಿಂದ ಮಾತಾನಾಡಲು ಇಚ್ಛಿಸುವುದಿಲ್ಲ, ಆದರೆ ಈ ಸಭೆಯ ಒಬ್ಬ ಸದಸ್ಯನಾಗಿ ನನ್ನ ಚಿಂತನೆಗಳನ್ನು ಹಂಚಿಕೊಳ್ಳುತ್ತಿದ್ದೇನೆ. ನಾನು ನನ್ನ ಹಿರಿಯ ಸ್ನೇಹಿತರಾದ ಶ್ರೀ. ಟಿ. ಸಿದ್ದಲಿಂಗಯ್ಯನವರು ವಕೀಲರು, ಅವರು ಮಂಡಿಸಿರುವ ವಿಚಾರವನ್ನು ತುಂಬಾ ಚೆನ್ನಾಗಿ ಗಮನಿಸಿರುತ್ತೇನೆ. ನಾನು ಸಹ ಸಾಕಷ್ಟು ಕಾಲ ನ್ಯಾಯಾಲಯದಲ್ಲಿ ವಕೀಲಿ ವೃತ್ತಿಯನ್ನು ಮಾಡಿರುತ್ತೇನೆ. ಆದರೆ ನನಗೆ ಇವರು ಈ ಸದನವನ್ನು, ನ್ಯಾಯಾಲಯವನ್ನಾಗಿ ಮಾಡಲು ಹೊರಟಿದ್ದಾರೆಯೇ ಎನ್ನುವುದು ಆಶ್ಚರ್ಯವಾಗುತ್ತಿದೆ. ಒಬ್ಬ ಕ್ರೈಸ್ತನ ವಿಚಾರ ಸಾಕ್ಷಿಯ ವಿಚಾರಕ್ಕೆ ಬಂದಾಗ ಅವನನ್ನು ಬೈಬಲ್ ಹಿಡಿದು ಪ್ರಮಾಣೀಕರಿಸಿ ಸತ್ಯವನ್ನು ಹೇಳು ಎಂದು ಹೇಳಲಾಗುತ್ತದೆ. ಎಲ್ಲಾ ಸತ್ಯವೋ/ಏನಿಲ್ಲದಿದ್ದರೂ ಅದು ಸತ್ಯ. ಆದರೆ ನಾನು ಹಿಂದಕ್ಕೆ ಗಮನ ಸೆಳೆಯುತ್ತಾ ಇಲ್ಲಿಯೂ ಅದೇ ರೀತಿ ಏನಾದರೂ ಮಾಡಬೇಕಾಗುತ್ತದೆಯೋ ಎಂದು ಅನ್ನಿಸುತ್ತಿದೆ. ಆದರೆ ಇವರು ಈ ಸದನವನ್ನು ಕಾನೂನಿನ ನ್ಯಾಯಾಲಯವನ್ನಾಗಿ ಮಾಡುತ್ತಿದ್ದಾರೋ ಇಲ್ಲವೋ ಎಂಬುದೇ ನನಗೆ ತಿಳಿಯುತ್ತಿಲ್ಲ. ಆದರೆ ನಾನು ನಂಬಿದ ಹಾಗೆ ಈ ಸಭೆಯ ಹಿರಿಯ ಸದಸ್ಯರುಗಳು ಈ ವಿಚಾರವನ್ನು ಮಂಡಿಸಲು ಮತ್ತೇ ತಿದ್ದುಪಡಿ ಮಾಡಲು ಹೊರಟಂತೆ ಕಾಣುತ್ತಿರುವುದರಿಂದ ನಾನು ಈ ಸಭೆಯ ಗೌರವಗಳು ಕಲಾಪಗಳು ತುಂಬಾ ಪ್ರಾಮುಖ್ಯವಾಗಿ ದೇಶ ಮತ್ತು ಸಮಾಜದ ಒಳಿತಿಗಾಗಿರಬೇಕೆಂಬುದೆ ನನ್ನ ಅಭಿಪ್ರಾಯ. ಈ ವಿಚಾರಕ್ಕೆ ಸಂಬಂಧಪಟ್ಟಂತೆ ನನ್ನ ನೆನಪು/ಮನಸ್ಸು ಸುಮಾರು ವರ್ಷಗಳ ಹಿಂದಕ್ಕೆ ಯೋಚನೆ ಮಾಡುತ್ತಾ. ಆದರ ನೆನಪು ಬರುತ್ತಿದೆ. ನಾವು ಪ್ಲೇಟೋ ಹೇಳಿರುವ ವಿಚಾರವನ್ನು ಎಂದಿಗೂ

ಮರೆಯಬಾರದು. ಅವನು ಹೇಳಿರುವ ವಿಚಾರವೆಂದರೆ – ಇವನ ಪ್ರಕಾರ ಎಲ್ಲರೂ ಒಳ್ಳೆಯವರಾಗಿರಬೇಕು. ಪ್ರತಿಯೊಬ್ಬ ವ್ಯಕ್ತಿಯು ಒಳ್ಳೆಯವರಾದರೆ ಯಾವ ಸರ್ಕಾರದ ಅವಶ್ಯಕತೆಯೂ ಇರುವುದಿಲ್ಲ, ಯಾವ ನೀತಿ ನಿಯಮ ಅಥವಾ ಪೋಲಿಸರ ಅವಶ್ಯಕತೆ ಇರುವುದಿಲ್ಲ. ನಾವು ಪ್ಲೇಟೋನ ಕಾಲದಿಂದಲೂ ನಾವು ಇತಿಹಾಸದಲ್ಲಿ ಒಂದು ರೀತಿ ಹೆಜ್ಜೆಗುರುತುಗಳಾಗಿ ಉಳಿದಂತೆ ಈ ನಿಯಮವನ್ನು ಅನುಸರಿಸುತ್ತಿದ್ದೇವೆ. ಈ ದೇಶದಲ್ಲಿ ಸಾಕಷ್ಟು ಜನ ಸನ್ಯಾಸಿಗಳು ಧಾರ್ಮಿಕ ಗುರುಗಳು ಹುಟ್ಟಿದ್ದಾರೆ. ಆದರೆ ಈ ಎಲ್ಲಾ ವ್ಯಕ್ತಿಗಳು ಬರೆದಿರುವ ಪುಸ್ತಕಗಳು ಮತ್ತು ಅವರ ಭೋದನೆಗಳನ್ನು ಒಂದು ಕಡೆ ಕಲೆಹಾಕಿದರೆ ಇಡೀ ಸದನವೇ ತುಂಬಿ ಹೋಗುತ್ತದೆ. ಆದರೆ ನನ್ನದೊಂದು ಪ್ರಶ್ನೆ – ಈ ಭೋದನೆಗಳು ಕೇವಲ 1% ಜಾರಿಗೆ ಬಂದಿವೆಯೇ? ಆದರೆ ಈ ಹಿಂದೆ ಮಹಾನ್ ವ್ಯಕ್ತಿ ಬುದ್ಧನು ಎಲ್ಲಾರು ಒಳ್ಳೆಯ ರೀತಿಯಿಂದ ಸಮಾನವಾದ ನೀತಿಯಿಂದ ರಾಷ್ಟ್ರದಲ್ಲಿ ಮತ್ತೆ ಸಮಾಜದ ಒಳಿತಿಗಾಗಿ ಬದುಕಬೇಕು ಎಂದಿದ್ದನು. ಜೊತೆಗೆ ಅವನು ಒಂದು ಮಾನವೀಯ ಧರ್ಮವನ್ನು ಆಚರಣೆಗೆ ತರಬೇಕೆಂದಿದ್ದನು. ಅವನಿಗೆ ಪ್ರತಿಯೊಬ್ಬ ವ್ಯಕ್ತಿಯು ಸಂತೋಷದಿಂದಿರಬೇಕು ಎಂದು ಬಯಸಿದ್ದನು. ಅವನು ಎಲ್ಲರು ಸಮಾನವಾದ ರೀತಿಯಲ್ಲಿ ಹಕ್ಕು ಮತ್ತೆ ಕರ್ತವ್ಯಗಳಲ್ಲಿ ಭಾಗಿಯಾಗಿರಬೇಕು ಎಂದು ನಂಬಿದ್ದನು. ಆದರೆ ಆ ಧರ್ಮವನ್ನೆ ಈ ದೇಶದಿಂದ ಹೊರಹಾಕಲಾಯಿತು. ಆದರೆ ಇತ್ತೀಚೆಗೆ ಹೆಚ್ಚೆಚ್ಚು ಜನರು ಆ ಧರ್ಮಕ್ಕೆ ಮತಾಂತರವಾಗುತ್ತಿದ್ದಾರೆ. ಈಗ ಬಸವಣ್ಣನವರ ವಿಚಾರಕ್ಕೆ ಬರೋಣ – ಇವರ ಸಹೋದರತ್ವ ಮತ್ತು ಮಾನವೀಯ ತತ್ವಗಳು ಶ್ರೇಷ್ಠವಾದುವುಗಳು. ಅವನು ಸಹ ಪ್ರತಿಯೊಬ್ಬ ವ್ಯಕ್ತಿಯೂ ಸುಖಿಯಾಗಿರಬೇಕೆಂದು ನಂಬಿಕೆಯಿಟ್ಟಿದ್ದರು. ಹಾಗೂ ಎಲ್ಲರೂ ಸಮಾನವಾಗಿರಬೇಕೆಂದು ಆಶಿಸಿದ್ದರು. ನಮಗೆ ಗೊತ್ತಿದೆ ಅವನಿಗೆ ಏನಾಯಿತು ಎನ್ನುವುದು? ಅನಂತರ ಗಾಂಧಿಯವರು ಸಹ ಇದೇ ರೀತಿ ಹೋರಾಡಿದರು. ಹಾಗಾದರೆ ಈ ಪ್ರಸಿದ್ಧ ಧಾರ್ಮಿಕ ಗ್ರಂಥಗಳನ್ನು ಬರೆದಿರುವ ವ್ಯಕ್ತಿಗಳಿಗೆ ಏನಾಯಿತು? ನಾವು ಕೇವಲ 1% ಬೋಧನೆಗಳನ್ನು ಅನುಸರಿಸಿದ್ದೀವಾ? ಪ್ರಾರ್ಥನೆಯು ಮನುಷ್ಯನನ್ನು ಸಾಕಷ್ಟು ಬದಲಾವಣೆ ಮಾಡಿಲ್ಲ ಅವು ಮಾಡುವುದೂ ಇಲ್ಲ. ನಮ್ಮ ಮೈಸೂರು ರಾಜ್ಯದಲ್ಲಿ ಸುಮಾರು 45,000 ಪೂಜಾರಿಗಳು ದೇವಸ್ಥಾನದಲ್ಲಿ ದಿನನಿತ್ಯ ಪೂಜೆ ಸಲ್ಲಿಸುತ್ತಿದ್ದಾರೆ.

ಅವರ ಪ್ರಾರ್ಥನೆಯು ಏನಾಯಿತು? ನಾವು ಬದಲಾಗಿದ್ದೇವೆಯಾ? ನಾವು ನಮ್ಮ ಅಸಮಾನತೆಯ ಸಮಸ್ಯೆಯನ್ನು ಪರಿಹರಿಸಿಕೊಂಡಿದ್ದೇವೆಯಾ? ನಾವು ವೈಯುಕ್ತಿಕ/ ವ್ಯಕ್ತಿಗತವಾಗಿ ಶೋಷಣೆಯನ್ನು ನಿಲ್ಲಿಸಿದ್ದೇವೆಯಾ? ನಾವು ಸಹನೆಯ ಮನಸ್ಥಿತಿಯನ್ನು ಬೆಳೆಸಿಕೊಂಡಿದ್ದೇವಾ? ನಾನು ಮತ್ತು ಶ್ರೀ ರಾಚಯ್ಯ ಮಾತ್ರ ಈ ವಿಚಾರ ಮಾತಾನಾಡಿರುತ್ತೇವೆ. ಆದರೆ ಈ ವಿಚಾರದಿಂದಾಗಿ ಗೌರವಾನ್ವಿತ ಜವಾಬ್ದಾರಿಯಿಂದ ಸದಸ್ಯರು ಸಹ ಈ ವಿಚಾರದಲ್ಲಿ ಅವರ ಮನಸ್ಥಿತಿ ದ್ವೇಷ/ಅಸೂಯೆಯಿಂದ ಸಹನೆ ಕಳೆದುಕೊಂಡಿದ್ದಾರೆ. ನಾನು ಏನನ್ನು ಹೇಳಲು ಬಯಸುತ್ತೇನೆಂದರೆ ನಮ್ಮ ಸಾವಿರಾರು ದೇವಸ್ಥಾನಗಳಲ್ಲಿ ಪೂಜಾರಿಗಳು ಪೂಜಿಸುತ್ತಿದ್ದಾರೆ. ಈ ಪ್ರಾರ್ಥನೆಗೋಸ್ಕರ ನಮ್ಮ ಹಿರಿಯ ಸ್ನೇಹಿತರಿಗೆ ಈ ಸದನದಲ್ಲಿ ಪೂಜೆ ಮಾಡಲು ಪುರೋಹಿತರನ್ನು ಕರೆಸಬೇಕಾ? ಮುಸಲ್ಮಾನರು ಅವರಿಗಾಗಿ ಪ್ರಾರ್ಥನೆ ಮಾಡುತ್ತಾರೆ. ಕ್ರೈಸ್ತರು ಅವರ ಪಾದ್ರಿಗಳ ಮೂಲಕ ಪ್ರಾರ್ಥನೆಯನ್ನು ಮಾಡುತ್ತಾರೆ. ಹಾಗೆಯೇ ಜೊರಾಸ್ಟ್ರಿಯವರು ಅವರಿಗೋಸ್ಕರ ಪ್ರಾರ್ಥನೆಯನ್ನು ಮಾಡುತ್ತಾರೆ. ಅದರೆ ಈ ಸದನವು ವಿವಿಧ ಧರ್ಮೀಯರು ಇರುವಂತಹದ್ದಾಗಿದೆ. ನನ್ನ ಸ್ನೇಹಿತರಾದ ಶ್ರೀ ಮೊಹಸಿನ್‌ರವರು ಅವರ ಭಾವನೆಗಳನ್ನು ಈ ವಿಚಾರವಾಗಿ ಹೇಳಿದ್ದಾರೆ. ಈ ಸದನದಲ್ಲಿ ಬೇರೆ ಬೇರೆ ಧರ್ಮೀಯರ ಮತ್ತು ವಿವಿಧ ಆಚಾರ ವಿಚಾರಗಳ ಜನರಿದ್ದಾರೆ, ಆದರೆ ಪ್ರಾರ್ಥನೆಯಿಂದ ಸಮಾಜದಲ್ಲಿ ಸಮಾನತೆ ತರಲು ಸಾಧ್ಯವಿಲ್ಲ. ಅದೇ ರೀತಿ ಈ ಸದನದ ಸದಸ್ಯರು ಪ್ರಾರ್ಥನೆ ಮಾಡಿದರೆ ಯಾವ ಸಾಮಾಜಿಕ/ ಆರ್ಥಿಕ ಬದಲಾವಣೆ ತರಲಾಗುವುದಿಲ್ಲ. ಶ್ರೀ ಸಿದ್ಧಲಿಂಗಯ್ಯನವರು ನನಗಿಂತ ಹಿರಿಯವರು, ಅನುಭವಿಗಳು ಮತ್ತೆ ನುರಿತವರು ಹೆಚ್ಚೆಚ್ಚು ಪ್ರವಾಸ ಮಾಡಿಯೂ ಒಟ್ಟಾರೆಯಾಗಿ ಎಲ್ಲಾ ಅನುಭವವುಳ್ಳವರು, ನನಗೆ ಆಶ್ಚರ್ಯವೆಂದರೆ ಹೇಗೆ ಈ ವಿಚಾರವನ್ನು ಸದನದಲ್ಲಿ ಚರ್ಚಿಸುವುದು?

**ಶ್ರೀ ಮಹಮೂದ್ ಶರೀಫ್**:- ನನಗೆ ಈ ವಿಚಾರವಾಗಿ ಏನನ್ನಿಸುತ್ತಿದೆಯೆಂದರೆ, ಗೌರವಾನ್ವಿತ ಶ್ರೀ ಸಿದ್ದಲಿಂಗಯ್ಯನವರು ಪ್ರಾರ್ಥನೆಯ ವಿಚಾರವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿಲ್ಲ ಅನಿಸುತ್ತದೆ. ಪ್ರಾರ್ಥನೆಯೇಂದರೆ ಅಧಿವೇಶನ ಪ್ರಾರಂಭವಾಗುವುದಕ್ಕೆ ಮುನ್ನ ನಾವುಗಳು ನಮ್ಮ ಗಮನವನ್ನು ದೇವರ ಕಡೆ ಹರಿಸಿ ಅವುಗಳಿಂದ ಆಶೀರ್ವಾದ ಪಡೆದುಕೊಳ್ಳಬೇಕು ಮತ್ತೆ ಈ ಸದನವು ಚೆನ್ನಾಗಿ ನಡೆಯಲು ದೇವರು

ಸಹಾಯ ಮಾಡಲೆಂದು ಎಲ್ಲಾ ಸದಸ್ಯರು ಪ್ರಾರ್ಥಿಸಬೇಕು. ಪ್ರಾರ್ಥನೆಯಾದರೆ ತಾವು ಇಲ್ಲಿಗೆ ಪುರೋಹಿತರನ್ನು ಕರೆಯಿಸಿ ಮಂತ್ರ ಪಠಣೆ ಮಾಡಿ ನಮ್ಮ ಕರ್ತವ್ಯಗಳೇನು ಎಂದು ಹೇಳುವುದಲ್ಲ. ಆದರೆ ಅಮೇರಿಕ ಮತ್ತು ಇಂಗ್ಲೇಂಡ್‌ನಲ್ಲಿ 2 ನಿಮಿಷ ಪ್ರಾರ್ಥನೆಯನ್ನು ಮಾಡುತ್ತಾರೆ. ಹಾಗಾಗಿ ಗೌರವಾನ್ವಿತ ಸ್ನೇಹಿತರು ಪ್ರಾರ್ಥನೆಯನ್ನು ಏಕೆ ಒಂದು ರೀತಿ ತೋರಿಕೆಯ ಪ್ರಾರ್ಥನೆ ಎಂದು ತಿಳಿಯಬಾರದು.

**ಶ್ರೀ ಎ.ಜೆ. ದೊಡ್ಡಮೇಟಿ, ರೋಣ:–** ಈಗ ಶ್ರೀಮಾನ್. ಸಿದ್ಧಲಿಂಗಯ್ಯನವರ ಮೂಲ ಗೊತ್ತುವಳಿಗೆ ಶ್ರೀ ಶರೀಫರು ತಂದಿರುವ ತಿದ್ದುಪಡಿಯನ್ನು ಶ್ರೀ ಸಿದ್ದಲಿಂಗಯ್ಯನವರು ಒಪ್ಪಿಕೊಂಡಿದ್ದಾರೆಯೇ?

**ಸಭಾಪತಿಯವರು:–** ಅದನ್ನು ಅವರು ಒಪ್ಪಬೇಕಾಗಿಲ್ಲ ಆ ವಿಚಾರ ಈ ಸಭೆಗೆ ಸೇರಿದ್ದು.

**ಶ್ರೀ ಬಿ. ಬಸವಲಿಂಗಪ್ಪ:–** ಸರ್, ನಾನು ಈ ಗೊತ್ತುವಳಿಯ ವಿಚಾರವನ್ನು ಅರ್ಥಮಾಡಿಕೊಂಡಿದ್ದೇನೆ. ನಾನು ಯಾರಾದರು ದೇವರಿಗೆ ಪ್ರಾರ್ಥನೆ ಮಾಡುವುದನ್ನು ಅಥವಾ ಭೂತಾಯಿಯನ್ನು ಪೂಜಿಸುವುದು ಅಥವಾ ದೇಶವನ್ನು ಪೂಜಿಸುವುದಕ್ಕೆ ನನ್ನ ಅಭ್ಯಂತರವಿಲ್ಲ. ಆದರೆ ಈ ಸದನದ ಹೊರಗೆ ಆ ಕೆಲಸ ಮಾಡುವುದು ಸೂಕ್ತ. ಒಳಗೆ ಅದಕ್ಕೆ ಅವಕಾಶವಿರುವುದಿಲ್ಲ. ನಾನು ಹೇಳುತ್ತಿದ್ದೆ ಜನರು ಅನುಸರಿಸುತ್ತಿರುವ ಯಾವ ಧಾರ್ಮಿಕ ಭೋದನೆಗಳು ಅವರ ಜೀವನದಲ್ಲಿ ಶಿಸ್ತಿನಿಂದ ಆಚರಿಸುವುದಿಲ್ಲ. ಆದರೆ ಹೇಳುವುದೇ ಒಂದು ಮಾಡುವುದು ಇನ್ನೊಂದು. ಅದು ನಮ್ಮ ಸಂಪ್ರದಾಯ. ಈ ಭೋದನೆಯಿಂದಾಗಿ ಅಥವಾ ಭೋದಿಸಿರುವ ವ್ಯಕ್ತಿಗಳಿಂದಾಗಲಿ ಯಾವ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗಿಲ್ಲ. ಹಾಗಾಗಿ ಈ ಗೊತ್ತುವಳಿಗೂ ಅರ್ಥವಿರುವುದಿಲ್ಲ. ಆದರೆ ಈ ಗೊತ್ತುವಳಿ ಮಂಡಿಸುವವರ ಪ್ರಕಾರ ಇಲ್ಲಿಗೆ ಯಾವುದೇ ಪುರೋಹಿತರು ಅಥವಾ ಮೌಲ್ವಿಗಳು ಬಂದು ಭೋದಿಸಬೇಕೆಂದಲ್ಲ. ನಾನು 37 ಅಥವಾ 38 ವಯಸ್ಸಿನವನಾಗಿರಬೇಕು. ಆದರೆ ನನಗೆ ಅವೆರಡರ ನಡುವೆಯೇ ನನ್ನ ನಿಜವಾದ ವಯಸ್ಸಿನ ಬಗ್ಗೆ ಚಿಂತಿಸುವ ಅಗತ್ಯವಿದೆ. ಹಾಗಾಗಿ ನಾನು ಅವರನ್ನೂ ಈ ಗೊತ್ತುವಳಿಯನ್ನು ವಾಪಸ್ಸು ಪಡೆದುಕೊಳ್ಳಲು ಹೇಳಬಯಸುತ್ತೇನೆ ಮತ್ತೇ ಇದರಿಂದಾಗಿ ಇನ್ನೊಂದು ಚರ್ಚೆಗೆ ಅವಕಾಶವಾಗಬಾರದೆಂದು ಕೋರುತ್ತೇನೆ.

J-070-4

## 2) ವ್ಯಕ್ತಿ ಸ್ವಾತಂತ್ರ ಹರಣ ಮಾಡುವುದಲ್ಲ (21ನೇ ಜುಲೈ 1961)

**ಶ್ರೀ ಬಿ. ಬಸವಲಿಂಗಪ್ಪ:**– ಸನ್ಮಾನ್ಯ ಅಧ್ಯಕ್ಷರೇ, ಸರ್, ಸುಮಾರು ಜನ ಸದಸ್ಯರು ಈ ಮಸೂದೆ ಬಗ್ಗೆ ಹೆಚ್ಚಿನ ಮಾಹಿತಿ ಮತ್ತು ಇದರ ಬಗ್ಗೆ ಬೆಳಕು ಚೆಲ್ಲಿದ್ದಾರೆ (ಗಮನಹರಿಸಿದ್ದಾರೆ). ವಿಶೇಷವಾಗಿ ವಿರೋಧ ಪಕ್ಷದ ನಾಯಕರು ಮಸೂದೆಯಲ್ಲಿ ಕೆಲವು ತಪ್ಪುಗಳಿಂದ ಕೂಡಿದೆ ಎಂದು ಹೇಳಿದ್ದಾರೆ. ಆದರೆ ಯಾವ ತಪ್ಪುಗಳಿಲ್ಲ. ಸಾಕಷ್ಟು ಸದಸ್ಯರು ಈ ಮಸೂದೆಯನ್ನು ಮಂಡಿಸಲು/ತರಲು ಉತ್ತಮವಾದ ನಿದರ್ಶನಗಳನ್ನು ಕೊಟ್ಟಿದ್ದಾರೆ ಅವರಿಗೆ ಧನ್ಯವಾದಗಳು. ಕೆಲವರಿಗೆ ಈ ಮಸೂದೆಯ ಮೇಲೆ ಮಾತನಾಡಲು ಯಾವ ಆಧಾರವೂ ಇಲ್ಲ. ಆದರೆ ಸುಮ್ಮನಾದರೂ ಟೀಕಿಸಲು ಮಾತಾನಾಡುತ್ತಿದ್ದಾರೆ. ಗೌರವಾನ್ವಿತ ಸದಸ್ಯರು ಮಾಡುತ್ತಿರುವ ಎಲ್ಲಾ ವಾದಗಳು ಮೂರು ಮೂಲಭೂತ ಕಾರಣಗಳಿಂದಾಗಿ ಅವೆಲ್ಲವೂ ಗಾಳಿಗೆ ತೂರಿ ಹೋಗುತ್ತೇವೆ. ಅವುಗಳೆಂದರೆ,

1) ಈ ಮಸೂದೆಯು ಒಬ್ಬ ವ್ಯಕ್ತಿಯ ಮೂಲಭೂತ ಸಮಸ್ಯೆಗೆ ಸಂಬಂಧಿಸಿದ್ದಾಗಿದೆ.

2) ಈ ಮಸೂದೆಯು ಒಬ್ಬ ವ್ಯಕ್ತಿಯನ್ನು ನ್ಯಾಯಾಂಗದ ಸುಪರ್ದಿಯಲ್ಲಿ ಪ್ರಶ್ನಿಸಲು/ನ್ಯಾಯಾಲಯಕ್ಕೆ ಹೋಗಲು ಅನುವು ಮಾಡುತ್ತದೆ.

3) ಕಾರ್ಯಾಂಗವು ಇಲ್ಲಿ/ಈ ಮಸೂದೆಯ ಮೂಲದಲ್ಲಿ ಹಾಗೂ ಅವರು ಎಂದಿನಂತೆ ನಡೆದುಕೊಳ್ಳದಿದ್ದರೆ ಅವರೆ ಅಪರಾಧಿಗಳಾಗುತ್ತಾರೆ.

ನಾನು ಸುಮಾರು 8 ವರ್ಷಗಳಿಂದಲೂ ವಕೀಲನಾಗಿದ್ದೇನೆ. ಆದ್ದರಿಂದ ಒಬ್ಬ ವ್ಯಕ್ತಿಯ ವೈಯಕ್ತಿಕ ಸ್ವಾತಂತ್ರ್ಯದ ಮೂಲಭೂತ ಹಕ್ಕುಗಳು ಹೇಗೆ ಮಾನ್ಯ ಮಾಡಿವೆ ಎಂಬುದು ನನಗೆ ಗೊತ್ತಿದೆ. ಶ್ರೀ ಶ್ರೀನಿವಾಸ್‌ಶೆಟ್ಟಿ ಮತ್ತು ವೈ.ಎಸ್. ಪಾಟೀಲ್‌ರವರು ಮತ್ತು ಇತರೇ ಸದಸ್ಯರು ಜೊತೆ ಸೇರಿ ಮಾತಾನಾಡುತ್ತಿದ್ದಾರೆ. ಆದರೆ ನಾವು ವ್ಯಕ್ತಿಯ ಸ್ವಾತಂತ್ರ್ಯದ ವಿಚಾರವನ್ನು ಸ್ಪಷ್ಟವಾಗಿ ಹೇಳುತ್ತಿದ್ದೇವೆ. ನಾವು ಸಾಮಾನ್ಯವಾಗಿ ಸಂವಿಧಾನದಡಿಯಲ್ಲಿ ಎಲ್ಲಾ ಹಕ್ಕುಗಳನ್ನು ಅನುಭವಿಸುತ್ತಿರುವವರ ಬಗ್ಗೆ ಮಾತಾನಾಡುತ್ತಿಲ್ಲ ಏನು ಮಾಡುತ್ತಿಲ್ಲ. ಆದರೆ ನಾವು ಮಾಡುತ್ತಿರುವ ಕಾನೂನು ಈಗಿರುವ ಕಾನೂನಿನ ಚೌಕಟ್ಟಿನ ವಿರುದ್ಧ ತನ್ನ ವಯಕ್ತಿಕ ಸ್ವಾತಂತ್ರ್ಯವನ್ನು ಅನುಭವಿಸಲು ಹೋಗಿ ರಾಜ್ಯದ ಆಸ್ತಿಗೆ, ವ್ಯಕ್ತಿಗೆ ಧಕ್ಕೆ ತರುವಂತಹವರ ವಿರುದ್ಧ ಈ ಕಾನೂನು ಕೆಲಸ

ಮಾಡುತ್ತದೆ. ಆದುದರಿಂದ ಇದೊಂದು ಮಹತ್ತರವಾದ ಕಾನೂನಾಗಿದೆ. ಈಗಾಗಲೇ ತಪ್ಪಿತಸ್ಥರನ್ನು ಶಿಕ್ಷಿಸಲು ಸಾಕಷ್ಟು ಕಾನೂನುಗಳಿವೆ. ಆದರೆ ಇದು ಕೂಡ ಶಿಕ್ಷಿಸಲು ಅನುಕೂಲವಾಗುವಂತಹದ್ದು. ನನ್ನ ಸ್ನೇಹಿತರೇನಾದರೂ ಇದನ್ನು ಬೇರೆ ಬೇರೆಯಾಗಿ ಮಾಡಲು ಹೋಗಿದ್ದರೆ ಇಲ್ಲಿ ಯಾವುದೇ ಚರ್ಚೆಗಳು ಬರುತ್ತಿರಲಿಲ್ಲ. ಆದರೆ ಈ ನೀತಿಯು ಯಾವುದೇ ವ್ಯಕ್ತಿಯ ಒಬ್ಬ ವ್ಯಕ್ತಿಗೆ ಆಸ್ತಿಗೆ ಅಥವಾ ಕಾರ್ಯಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಅವನಿಗೆ ಶಿಕ್ಷೆ ಜೈಲಿನಲ್ಲಿರುತ್ತದೆ.

18 ವರ್ಷ ಕೆಳಗಿರುವ ಮಕ್ಕಳಿಗೆ ಸಂಬಂಧಿಸಿದಂತೆ ಮಕ್ಕಳ ಕಾಯ್ದೆಯಲ್ಲಿ ಸರಿಯಾದ ಮಾರ್ಗದಲ್ಲಿ ಅವರಿಗೆ ಶಿಕ್ಷಿಸಲು ಸಾಕಷ್ಟು ಮಾರ್ಗಗಳಿವೆ. ಅಲ್ಲದೆ ಬೋರ್ಸ್ಟ್ಲ್ ಶಾಲೆಯ ಕಾಯ್ದಿಗೆ ಸಂಬಂಧಿಸಿದಂತೆ ಬಾಲಕಿಯರಿಗೆ ಮತ್ತು ಮಹಿಳೆಯರಿಗೆ ಸಂಬಂಧಿಸಿದಂತೆ ಸಾಕಷ್ಟು ನಿಯಮಗಳಿವೆ. ಈ ನಿಯಮಗಳಿಂದ ತಪ್ಪುದಾರಿಯಲ್ಲಿ ನಡೆಯುತ್ತಿರುವವರನ್ನು ಸರಿ ದಾರಿಗೆ ತರಲು ಉತ್ತಮ ನಾಗರೀಕರನ್ನಾಗಿ ಮಾಡಲು ಅವಕಾಶಗಳಿವೆ. ಈ ಕಾಯ್ದೆಯಲ್ಲಿ 18 ವರ್ಷ ತುಂಬಿದವರು ತಪ್ಪು ಮಾಡಿದಾಗ ಅಪರಾದ ಮಾಡಿದಾಗ ಅವರಿಗೆ ಶಿಕ್ಷಿಸಲು ಈ ಕಾಯ್ದೆಯನ್ನು ತರಲಾಗುತ್ತಿದೆ. ಆದುದರಿಂದ, ಗೌರವಾನ್ವಿತ ಸದಸ್ಯರುಗಳು ತಮ್ಮ ವೈಯಕ್ತಿಕ ಸ್ವಾತಂತ್ರ್ಯದ ಬಗ್ಗೆ ಗಮನವಿಡಬೇಕು. ಅವರು ತಪ್ಪು ಮಾಡಿದರೆ ಶಿಕ್ಷೆಗೆ ಒಳಪಡುತ್ತಾರೆ. ಇದು ಯಾವ ವ್ಯಕ್ತಿ ಸ್ವಾತಂತ್ರ್ಯವನ್ನು ಹರಣಮಾಡುತ್ತಾನೋ ಅವನಿಗೆ ಸಂಬಂಧಿಸಿದಂತವುಗಳು.

ಸರ್, ಕೆಲವು ಸದಸ್ಯರುಗಳು ಈ ಮಸೂದೆಯನ್ನು ತರುವುದನ್ನು ಟೀಕಿಸುತ್ತಾರೆ. ಶ್ರೀ ಸುತಂಕರ್ ಮತ್ತು ಶ್ರೀ ಶ್ರೀನಿವಾಸಶೆಟ್ಟಿ ಹೇಳಿರುವಂತೆ, ರಾಜ್ಯದಲ್ಲಿ ಕೆಲವು ಮಸೂದೆ ಒಂದು ರೀತಿ ಮೇಲೋಗರದಂತಾಗಿವೆ. ಅಲ್ಲದೆ ಎಲ್ಲಾ ಕಾನೂನುಗಳು ಸಹ ಅದೇ ರೀತಿಯಾಗಿವೆ. ಯಾರು ಸರಿ ಎಂಬುದೆ ನನಗೆ ಗೊತ್ತಿಲ್ಲ. ನನ್ನ ಅಭಿಪ್ರಾಯದಲ್ಲಿ ಎಲ್ಲರದು ತಪ್ಪಿದೆ ಏಕೆಂದರೆ ಮಸೂದೆಯನ್ನು ಮಾಡಿರುವವರು ಕೇಂದ್ರ ಸರ್ಕಾರದವರು.

ಕೇಂದ್ರ ಸರ್ಕಾರವು ಹೊಸ ಕಾನೂನನ್ನು ಜಾರಿಗೆ ತಂದಿದೆ. ಕಾನೂನು ಇಲಾಖೆಯ ಈ ಮಸೂದೆಯ ಜಾರಿಗೆ ತರಲು ಸಹಾಯಮಾಡಿಲ್ಲ.

ನನ್ನ ಇನ್ನೊಬ್ಬ ಸ್ನೇಹಿತರು ಈ ಬಿಲ್ಲಿನ ಬಗ್ಗೆ ನ್ಯಾಯಾಂಗದ ಒಪ್ಪಿಗೆ ಬಗ್ಗೆ ಕೇಳಿದ್ದಾರೆ. ಸರ್ ನಾನು ಹೇಳಿರುವಂತೆ ನಾವು ಶಿಕ್ಷಿಸುವುದು ಸಾಮಾನ್ಯ ನಾಗರೀಕರಿಗಲ್ಲ. ಇದು ಅಸಭ್ಯವಾಗಿ/ಅಥವಾ ವಿಚಿತ್ರವಾಗಿ ನಡೆದುಕೊಳ್ಳುವವರಿಗೆ ಮತ್ತು ಅವರ ವಿರುದ್ಧ ಕ್ರಮ ತೆಗೆದುಕೊಳ್ಳಲು ಕಾರ್ಯಾಂಗಕ್ಕೆ ಮಾತ್ರ ಅಧಿಕಾರವಿರುತ್ತದೆ.

ಹಾಗಾಗಿ ಸರ್ಕಾರವು ಒಬ್ಬ ವ್ಯಕ್ತಿಯನ್ನು ಉತ್ತಮ ದಾರಿಗೆ ತರಲು ಎಲ್ಲಾ ರೀತಿಯ ಪ್ರಯತ್ನವನ್ನು ಮಾಡುತ್ತಿದೆ. ನಾವು ಯಾರನ್ನು ಶಾಶ್ವತವಾಗಿ ಅಪರಾಧಿ ಎಂದು ಪರಿಗಣಿಸುವುದಿಲ್ಲ. ನಾವು ಅವನು ಒಬ್ಬ ಸಾಮಾನ್ಯ ಮನುಷ್ಯನಾಗುವ ರೀತಿ ತರಬೇತಿ ನಿಡುತ್ತೇವೆ. ಹಾಗಾಗಿ ಪ್ರಶ್ನೆ–ಎತ್ತಿರುವ ನಮ್ಮ ಸ್ನೇಹಿತರ ವಾದಕ್ಕೆ ಯಾವುದೇ ತಿರುಳಿಲ್ಲ.

ಸರ್, ಈ ಕಾಯ್ದೆಯ ಪ್ರಕಾರ, ಜೀವವಾದಿ ಅಥವಾ ಗಲ್ಲು ಶಿಕ್ಷೆ ಕೊಡುವಂತಹ ವಿಚಾರವನ್ನು ಸೇರಿಸಿರುವುದಿಲ್ಲ. ಒಬ್ಬ ವ್ಯಕ್ತಿಯು ತಪ್ಪು ಮಾಡಿದರೆ ಈ ಮಸೂದೆಯ ಪ್ರಕಾರ ಕಾಯಿದೆ 302ರ ಪ್ರಕಾರ ಅವನನ್ನು ಹೊರಗಿಟ್ಟು ವಿಚಾರ ಮಾಡಬಹುದು. ನನ್ನ ಸ್ನೇಹಿತರು ಮಹಿಳೆಯ ಶೋಷಣೆ ವಿಚಾರಕ್ಕೆ. ಅಪರಾಧಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಸೇರಿಸಿರುವುದಕ್ಕೆ ಟೀಕೀಸಿದ್ದಾರೆ. ಆದರೆ ಮಹಿಳೆಯನ್ನು ವ್ಯಾಪಾರದ ಸರಕಿನಂತೆ ಅಥವಾ ವೇಶ್ಯಾವಾಟಿಕೆಗೆ ಒಳಪಡಿಸುವುದು ಸಹ ಶಿಕ್ಷಾರ್ಹ ಅಪರಾಧ, ಅಂತಹ ಮಹಿಳೆಯರಿಗೆ ಪ್ರತ್ಯೇಕ ಕಾನೂನು ಮಾಡಬೇಕು. ಇಲ್ಲಿ ಕೇವಲ ಭಾಗ 4ನ್ನು ಮಾತ್ರ ತರಲಾಗಿದೆ. ಹಾಗಾಗಿ ಇಲ್ಲಿ ಬೇರೆ ಮಾತಿಗೆ ಅವಕಾಶವಿಲ್ಲ. ನನ್ನ ಸ್ನೇಹಿತರು ಕಾರ್ಯಾಂಗಕ್ಕೆ ಹೆಚ್ಚು ಕೆಲಸವಿರುವಂತೆಯೂ ಹಾಗೂ ನ್ಯಾಯಾಂಗಕ್ಕೆ ಯಾವುದೇ ಕೆಲಸವಿಲ್ಲವೆಂದು ಹೇಳಿದ್ದಾರೆ. ಸರ್ ನಾನು ಈಗಾಗಲೇ ಹೇಳಿರುವಂತೆ ಇವರ್‍ಯಾರು ಸಾಮಾನ್ಯ ವ್ಯಕ್ತಿಗಳಲ್ಲ. ಕಾರ್ಯಾಂಗವು ಇವರ ಉಸಾಬರಿಯನ್ನು ನೋಡಿಕೊಳ್ಳಬೇಕು. ಅಲ್ಲದೆ ನನ್ನ ಸ್ನೇಹಿತರಾದ ಶ್ರೀ ಮಲ್ಲಾರಾಧ್ಯ ಮತ್ತು ಶ್ರೀ ಮುಕ್ಕಣಪ್ಪನವರು ಇಂತಹ ಜನರಿಂದ ತೊಂದರೆಗೊಳಪಟ್ಟಿಲ್ಲ. (ನಗಾಡಿದರು) ನಾವು ಅಂತಹ ವ್ಯಕ್ತಿಗಳನ್ನು ಸರಿಪಡಿಸಲು ಈ ಮಾರ್ಗವನ್ನು ಪಾಲನೆ ಮಾಡಬೇಕು. ಈ ವಿಚಾರಕ್ಕೆ ಸಂಬಂಧಿಸಿದಂತೆ ನಮ್ಮ ಸಮಾಜದಲ್ಲಿ ಅನಾಥರಿದ್ದಾರೆ, ಭಿಕ್ಷುಕರಿದ್ದಾರೆ. ಅವರನ್ನು ಬಿಡುಗಡೆಮಾಡಿ ನಂತರ 'ಪುನರ್ ವಸತಿ ಕಲ್ಪಿಸಬೇಕು' ಒಬ್ಬರು

ಅಧೀಕ್ಷಕರು ನನ್ನ ಕಛೇರಿಗೆ ಒಬ್ಬನನ್ನು ಕರೆದು ತಂದಿದ್ದರು. ಅವನನ್ನು ನಾನು ಅವನ ಅಪ್ಪನ ಹೆಸರು ಕೇಳಿದೆ ಅವನು ಗೊತ್ತಿಲ್ಲ ಎಂದು ಹೇಳಿದ. ಅವನಿಗೆ ಅವನ ತಾಯಿಯ ಹೆಸರು ಗೊತ್ತಿರಲಿಲ್ಲ. ಅಲ್ಲಿಗೆ ಅವನಿಗೆ ಅವನ ಹುಟ್ಟಿದ ಸ್ಥಳವು ಗೊತ್ತಿರಲಿಲ್ಲ. ನಾವು ಇಂತಹ ಸಮಸ್ಯೆಯನ್ನು ಎದುರಿಸುತ್ತಿದ್ದೇವೆ. ಹಾಗಾಗಿ ನಾವು ಈ ರೀತಿ ಕಡೆಗಣಿಸಲ್ಪಟ್ಟಿರುವ ಹುಡುಗರನ್ನು ನಿಗಾವಹಿಸಿ ನೋಡಿಕೊಳ್ಳಬೇಕು. ಮಾನ್ಯ ಸದಸ್ಯರುಗಳು ಸಹ ಈ ವಿಚಾರದಲ್ಲಿ ಸಹಕರಿಸಬೇಕು.

ಸರ್, ನಾನು ಈ ರೀತಿ ಹೇಳಿಕೆ ನೀಡಿರುವುದು ಸದಸ್ಯರುಗಳಿಗೆ ಗೊತ್ತಿದ್ದರೆ ಇವರನ್ನು ಹೇಗೆ ನಿಭಾಯಿಸುವುದು ಎಂದು ಸಲಹೆ ನೀಡಲಿ. ನನ್ನ ಸ್ನೇಹಿತರು ಈ ಮಸೂದೆ ಮೇಲೆ ಅಷ್ಟೊಂದು ಬಲವಾಗಿ ವಾದಿಸಿಲ್ಲ. ಹಾಗಾಗಿ ನಾನು ಈ ರೀತಿಯಿಂದ ಕೇಳುತ್ತಿದ್ದೇನೆ.

ಜಾತಿ ಪದ್ಧತಿಯು ಸಾಕಷ್ಟು ಸಮಸ್ಯೆಗಳಿಗೆ ಮೂಲ ಕಾರಣವಾಗಿದೆ. ಇಲ್ಲಿ ಆರ್ಥಿಕ ಸಮಸ್ಯೆಗಳಿವೆ. ಧಾರ್ಮಿಕ ಕಾರಣಗಳಿವೆ. ಇವೆಲ್ಲವು ಸಹ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧಿಸಿದಂತಾಗಿವೆ. ನಾವು ಈ ಎಲ್ಲಾ ಜನರ ಸಮಸ್ಯೆಯನ್ನು ಪರಿಗಣಿಸಿ ಅದನ್ನು ಪರಿಹರಿಸಲು ಪ್ರಯತ್ನಿಸಬೇಕು ಮತ್ತು ಎಲ್ಲರೂ ಆದರ್ಶ ಪ್ರಜೆಗಳ ರೀತಿ ಬದುಕಬೇಕು. ಯಾರಿಗೆ ಸರಿಯಾದ ಹುಟ್ಟಿದ ಸ್ಥಳ. ಅಥವಾ ವಸತಿ ಪೋಷಕರಿಲ್ಲವೋ ಅವರು ಭಾರತದ ಪ್ರಜೆಗಳೇ ಅಲ್ಲದ ಹಾಗೆ ಬದುಕುತ್ತಿದ್ದಾರೆ. ಅವರು ಭಾರತೀಯ ನಾಗರೀಕನು ಅಲ್ಲ. ಆದರೆ ಅವನಿಗೆ ಪೋಷಕರಿದ್ದಾರೋ ಅಥವಾ ಅವನು ಅಪರಾಧಿಯೋ ಆದರೆ ಅವನನ್ನು ಒಳ್ಳೆಯದಾರಿಗೆ ತರುವುದೇ ನಮ್ಮ ಉದ್ದೇಶ. ನಾವು ಇಂತಹ ಜನರಿಗೆ ಪುನರ್ವಸತಿ ಕಲ್ಪಿಸಬೇಕು. ಇಂತಹ ಜನರಿಗೆ ವಸತಿ ಒದಗಿಸಲು ಸಾಕಷ್ಟು ಕಾಯಿದೆಗಳಿವೆ. ಆದರೆ ಅವನು ಭಿಕ್ಷುಕನಿರಲಿ, ಅನಾಥನಿರಲಿ ಎಲ್ಲರನ್ನು ಉತ್ತಮರನ್ನಾಗಿಸಬೇಕು.

ನಾವುಗಳು ಇದರ ಉಸ್ತುವಾರಿ ನೋಡಿ ಕೊಡಲು ಸಮಾಜಕಲ್ಯಾಣ ಇಲಾಖೆ ನಿರ್ದೇಶಕರು ಅಥವಾ ಕಾರಾಗೃಹದ ಮಹಾನಿರ್ದೇಶಕರು ಅಥವಾ ಅಪರಾಧದ ನಿರ್ದೇಶಕರು, ಸಂಸ್ಥೆಗಳು ಅಥವಾ ಯಾರಿಗೆ ಕೊಡಬೇಕು ಎಂಬುದನ್ನು ಚಿಂತಿಸುತ್ತಿದ್ದೇವೆ. ಹಾಗಾಗಿ ಕಿರಿಯ ಅಧಿಕಾರಿಗಳಿಗೆ ಇದರ ಅಧಿಕಾರ ಕೊಡಲು ಬರುವುದಿಲ್ಲ.

48ನೇ ಅಂದಾಜು ಸಮಿತಿಯ ವರದಿಯಲ್ಲಿ ಈ ಜನರ ಎಲ್ಲಾ ಬಯಕೆ ಮತ್ತು ಸಮಸ್ಯೆಗಳನ್ನು ಸಂಪೂರ್ಣವಾಗಿ ಪರಿಗಣಿಸಿಲ್ಲ. ಆದರೆ ಈ ಶಿಫಾರಸ್ಸುಗಳು ಸುಮಾರು 20 ವರ್ಷಗಳ ಹಿಂದೆ ಮಾಡಿದ ಶಿಫಾರಸ್ಸುಗಳೇ ಆಗಿವೆ ಮತ್ತೇ ಈ ಸಮುದಾಯದ ಅಭಿವೃದ್ಧಿಗೆ ಪೂರಕವಾದ ಯಾವ ಅಂಶವು ಇರುವುದಿಲ್ಲ. ಆದುದರಿಂದ ಈ ಸಮುದಾಯ ಎದುರಿಸುತ್ತಿರುವ ಎಲ್ಲಾ ಸಮಸ್ಯೆಗಳನ್ನು ಸಂಪೂರ್ಣವಾಗಿ ತಿಳಿದು ತುರ್ತು ಕ್ರಮಕೈಗೊಳ್ಳುವ ಅಗತ್ಯವಿದೆ. ಈ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಬೇಕು ಮತ್ತು ಅಂದಾಜು ಸಮಿತಿಯು ಮಾಡಿರುವ ಶಿಪಾರಸ್ಸುಗಳನ್ನು ಜಾರಿ ಮಾಡಲು ಮತ್ತು ಅವರ ಜೀವನ ಕ್ರಮ, ಕೆಲಸದ ಸ್ಥಿತಿಗತಿಗಳನ್ನು ಬದಲಿಸಲು ಆ ವಾತಾವರಣದಿಂದ ಬೇರೆಡೆಗೆ ಜೀವನ ಶೈಲಿ ಬದಲಿಸಲು ಅವರಿಗೆ ಸಮಾಜದಲ್ಲಿ ಇತರೆ ಸಮುದಾಯಗಳಿಗೆ ಇರುವಂತಹ ಶಿಕ್ಷಣ, ತರಬೇತಿ ಮುಂತಾದ ಶೈಕ್ಷಣಿಕ ಕಾರ್ಯಕ್ರಮಗಳ ಮೂಲಕ ಅವರ ಮಕ್ಕಳು ವಿದ್ಯಾವಂತರಾಗುವಂತೆ ನೋಡಿಕೊಳ್ಳುವುದಕ್ಕೆ ನರ್ಸರಿ ಶಾಲೆಗಳು, ಮತ್ತು ಇತರೆ ಶಾಲೆಗಳನ್ನು ತೆಗೆಯುವುದರ ಜೊತೆಗೆ ಬ್ಯಾಂಕಿಂಗ್ ಸೇವೆ, ಸಹಕಾರಿ ಸಂಘಗಳಂತಹ ಸೌಲಭ್ಯ ಕೊಟ್ಟು ಈ ವೃತ್ತಿಯಿಂದ ಮುಕ್ತಿಹೊಂದಿ ಬೇರೆ ಕೆಲಸ ಮಾಡುವ, ಮತ್ತು ಸಮಾಜದ ಇತರೆ ಜನರಂತೆ ಜೀವಿಸುವ ಸೇವೆಗಳನ್ನು ಒದಗಿಸಬೇಕಾಗಿದೆ.

ನಾವು ಈಗ ಸ್ವತಂತ್ರವಾಗಿ 25 ವರ್ಷಗಳು ಕಳೆದಿದ್ದು ಅದರ ಪ್ರಯುಕ್ತ ಬೆಳ್ಳಿಹಬ್ಬವನ್ನು ಆಚರಿಸುತ್ತಿದ್ದು, ಭಾರತ ಸರ್ಕಾರವು ಸಹ ಇಂತಹ ಸಮಸ್ಯೆಗಳನ್ನು ಹೋಗಲಾಡಿಸಲು ಕೆಲವೊಂದು ಕಾರ್ಯಾಕ್ರಮಗಳನ್ನು ರೂಪಿಸಿಕೊಂಡಿದೆ. ಈ ಕಾರ್ಯಕ್ರಮದಲ್ಲಿ ಬಹಳ ಮುಖ್ಯವಾದ ಕಾರ್ಯಕ್ರಮವೇ ಮಾನವರು ತಲೆ ಮೇಲೆ ಮಲ ಹೊರುವ ಪದ್ಧತಿಯನ್ನು ನಿರ್ಮೂಲನೆ ಮಾಡುವುದು. ಈ ಶಿಫಾರಸ್ಸಿನನ್ವಯದಂತೆ ಮೈಸೂರು ಸರ್ಕಾರವು, ಪೌರಕಾರ್ಮಿಕರ ಸ್ಥಿತಿಗತಿಗಳನ್ನು, ಜೀವನ ಶೈಲಿಯನ್ನು ಅಧ್ಯಯನ ಮಾಡಲು ಸಮಿತಿಯನ್ನು ರಚಿಸಲು ತೀರ್ಮಾನಿಸಲಾಗಿದೆ. ಅನಂತರ ರಾಜ್ಯದ ಎಲ್ಲಾ ಸ್ಥಳೀಯ ಪೌರಾಡಳಿತ ಸಂಸ್ಥೆಗಳು ಕ್ರಮಕೈಗೊಳ್ಳಬೇಕು ಮತ್ತು ಸಮಿತಿಯು ಇಡಿ ರಾಜ್ಯವನ್ನು ಪ್ರವಾಸ ಮಾಡಿ ಪೂರಕವಾದ ಎಲ್ಲಾ ಮಾಹಿತಿಯನ್ನು ಕಲೆಹಾಕಿ ಸರ್ಕಾರ ಅನುಷ್ಠಾನಗೊಳಿಸಲು ಕೇಲವು ಶಿಪಾರಸ್ಸುಗಳನ್ನು ಮಾಡಬೇಕು. ಈ ಸಮಿತಿಯ ಕೆಲವೊಂದು ನೀತಿ ನಿಯಮಗಳನ್ನು ಒಳಗೊಂಡಿರುತ್ತದೆ. ಅವುಗಳೆಂದರೆ,

1) ರಾಜ್ಯದ ಎಲ್ಲಾ ಪೌರಾಡಳಿತ ಸಂಸ್ಥೆಗಳಿಗೆ ಈ ಸಮಿತಿಯು ಭೇಟಿ ನೀಡಿ ಮತ್ತು ಇತರ ಸ್ಥಳಗಳಿಗೂ ಭೇಟಿ ನೀಡಿ ಪೌರಕಾರ್ಮಿಕರ ಜೀವನ ಸ್ಥಿತಿ ಮತ್ತು ಸೇವೆಗಳನ್ನು ಅಧ್ಯಯನ ಮಾಡಿ ಅವರಿಗೆ ವಿಶೇಷವಾದ ಅವಕಾಶದ ಮೂಲಕ ಸರ್ಕಾರವು ಅವರ ಉನ್ನತಿಗೆ ಕಾರ್ಯಕ್ರಮ ರೂಪಿಸುವಂತ ಶಿಫಾರಸ್ಸು ಮಾಡಬೇಕು.

2) ಅವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳನ್ನು ತನಿಖೆ ಮಾಡಬೇಕು, ಜೊತೆಗೆ ಈ ಸಮಸ್ಯೆಗಳನ್ನು ಬಗೆಹರಿಸುವ ತುರ್ತು ಕಾರ್ಯಯೋಜನೆಯ ಮೂಲಕ ಅವರ ಉನ್ನತಿಗೆ ಸಹಕಾರಿಯಾಗುವಂತಹ ಶಿಫಾರಸ್ಸು ಮಾಡಬೇಕು.

3) ಸರ್ಕಾರಕ್ಕೆ ಕೆಲವು ವಿಶೇಷವಾದ ಶಿಫಾರಸ್ಸುಗಳನ್ನು ಮಾಡಲೇಬೇಕಾಗಿರುವುದು ಈ ಕೆಳಕಂಡಂತಿವೆ.

   ಎ) ಇವರಿಗೆ ವಿಶೇಷವಾದ ಶಿಕ್ಷಣವನ್ನು ಸರ್ಕಾರಿ ಶಾಲೆಗಳಲ್ಲಿ ಮತ್ತು ಕಾಲೇಜುಗಳಲ್ಲಿ ಕೊಡಿಸುವುದು ಅಥವಾ ಬೇರೆ ರೀತಿಯಲ್ಲಾದರೂ ಶಾಲೆ, ಕಾಲೇಜುಗಳಲ್ಲಿ ಪ್ರತ್ಯೇಕವಾದ ಸೀಟುಗಳನ್ನು ಮೀಸಲಾಗಿಡುವುದು, ವಿದ್ಯಾರ್ಥಿ ವೇತನ ನೀಡುವುದು, ಮತ್ತೇ ವಿದ್ಯಾರ್ಥಿ ನಿಲಯಗಳ ಸೌಲಭ್ಯ ನೀಡುವುದು ಮತ್ತು ಅವುಗಳನ್ನು ನಿರ್ವಹಿಸಲು ಭತ್ಯೆಯನ್ನು ನೀಡುವುದು.

   ಬಿ) ಸಮುದಾಯಕ್ಕೆ ಸೇರಿದ ವಿದ್ಯಾವಂತ ಮಕ್ಕಳಿಗೆ ಸೇವೆಯಲ್ಲಿ ಪ್ರತ್ಯೇಕವಾದ ಮೀಸಲಾತಿ ನಿಗದಿಪಡಿಸುವುದು.

4) 48ನೇ ಸಂಸತ್‌ನ ಅಂದಾಜು ಸಮಿತಿಯ ಶಿಫಾರಸ್ಸಿನಂತೆ ಈ ಪದ್ಧತಿಯನ್ನು ನಿರ್ಮೂಲನೆ ಮಾಡಬೇಕು ಅಲ್ಲದೆ ಇದು ಅಮಾನವೀಯ ಮತ್ತು ಅನಾರೋಗ್ಯವಾದ / ವಿಲಕ್ಷಣವಾದ ಪದ್ಧತಿಯಾಗಿದ್ದು ಈ ರೀತಿ ತಲೆ ಮೇಲೆ ಮಲ ಹೊರುವ / ಮನುಷ್ಯ ದೈಹಿಕವಾಗಿ ಈ ಕೆಲಸ ಮಾಡುವುದನ್ನು ತಪ್ಪಿಸಲು ಈ ಸಮಿತಿ ಕೆಳಕಂಡ ನಿರ್ಣಯಗಳನ್ನು ಕೈಗೊಂಡಿರುತ್ತದೆ.

ಎ) ಗೃಹ ಸಚಿವಾಲಯವು, ಪೌರಾಡಳಿತ ಸಂಸ್ಥೆಗಳಿಗೆ ಒತ್ತಡ ಹೇರಿ ಆದಷ್ಟು ಬೇಗ ಈ ಸಮಸ್ಯೆಯನ್ನು ತುರ್ತಾಗಿ ಕೊಟ್ಟಿರುವ ಕಾಲಾವಕಾಶದೊಳಗೆಯೇ ಬಗೆಹರಿಸುವುದು.

ಬಿ) ಈ ರೀತಿಯಾದಂತಹ ಸ್ಥಳೀಯ ಪೌರಾಡಳಿತ ಸಂಸ್ಥೆಗಳು ಹಣಕಾಸಿನ ನೆಪವೊಡ್ಡಿ ಅಥವಾ ಇತರ ಕಾರಣಗಳಿಂದಾಗಿ ಆದಷ್ಟು ಬೇಗ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾಗದೆ ಇರಬಹುದು. ಆದರೆ ಹಂತಹಂತವಾಗಿ ಈ ಸಮಸ್ಯೆಯನ್ನು ಬಗೆಹರಿಸಲು ಹಣಕಾಸಿನ ನೆರವು ನೀಡಿ ಪ್ರೋತ್ಸಾಹಿಸಬೇಕು.

## III ಕಂದಾಯ ಇಲಾಖೆ ಮತ್ತು ರೈತಪರ ಚರ್ಚೆಗಳು

### 1. ಭೂ ಸುಧಾರಣಾ ಕಾಯಿದೆ (29ನೇ ಆಗಸ್ಟ್ 1978)

**SRI B. BASAVALINGAPPA** (Minister for Revenue): I move:

That the Karnataka Land Reforms (Amendment) Bill, 1978, as passed by the Legislative Assembly, be taken into consideration. The Question was proposed

ಮಾನ್ಯ ಸಭಾಪತಿಗಳೆ, ಭೂ ಸುಧಾರಣೆ ಕಾಯಿದೆಗೆ ತಿದ್ದುಪಡಿಗಳನ್ನು ಕೆಳಮನೆಯಲ್ಲಿ ತಂದು ಸರ್ವಾನುಮತದಿಂದ ಅದು ಪಾಸಾಗಿದೆ. 1974ನೇ ಇಸವಿಯಿಂದ ತಹಲ್‌ವಾರ್‌ಗೂ ಇದನ್ನು ಜಾರಿಗೆ ಕೊಡಲಿಕ್ಕೆ ಏನೇನು ಅಡಚಣೆಗಳು ಬಂತು, ಕೋರ್ಟುಗಳ ವ್ಯವಹಾರದಿಂದ ನಮಗೆ ಏನೇನು ಅನುಭವ ಆಗಿದೆ ಅದರ ಹಿನ್ನೆಲೆಯಲ್ಲಿ ಈ ತಿದ್ದುಪಡಿಗಳನ್ನು ತಂದಿದ್ದೇವೆ. ಕೆಲವಾರು ಭಾಗಗಳಿಂದ ಕೆಲವಾರು ಗೇಣಿದಾರರಿಂದ ಹಲವಾರು ತೊಂದರೆಗಳು ಆಗಿರುವ ಬಗ್ಗೆ ದೂರುಗಳು ಬಂದಿವೆ. ಈಗ ಇರತಕ್ಕ ಕಾನೂನು ಜಾರಿಗೆ ಕೊಡುವುದರಲ್ಲಿ ದೂರುಗಳು ಬಂದಿವೆ. ನಾವು ಕೆಲವು ವಿಚಾರಗಳಲ್ಲಿ ಸಾಕಷ್ಟು ಪರಿಹಾರ ಕೊಡಲಿಕ್ಕೆ ಅವಕಾಶ ಇಲ್ಲದೆ ವಿಫಲರಾಗಿದ್ದೇವೆ. ಆದುದರಿಂದ ಇವೆಲ್ಲವನ್ನು ಗಮನದಲ್ಲಿಟ್ಟುಕೊಂಡು ಹಲವಾರು ಪರಿಣಾಮಕಾರಿಯಾದ ತಿದ್ದುಪಡಿಗಳನ್ನು ತಂದಿದ್ದೇವೆ. ಕರ್ನಾಟಕ ರಾಜ್ಯದಲ್ಲಿ ಯಾರು ಯಾರು ಗೇಣಿದಾರರಾಗಿರುತ್ತಾರೆ ಅವರಿಗೆ ಇದರಿಂದ ಅನುಕೂಲವಾಗುವ ನಿರೀಕ್ಷಣೆ ಸರ್ಕಾರಕ್ಕೆ ಇದೆ. ಕರ್ನಾಟಕ ರಾಜ್ಯದಲ್ಲಿ ನಾವು ಏನು ಈ ಭೂಸುಧಾರಣೆಯನ್ನು ಜಾರಿಗೆ ತಂದಿದ್ದೇವೆ. ಇವೊತ್ತು ಆ ತಿದ್ದುಪಡಿಗಳನ್ನು ತಮ್ಮ ಮುಂದೆ ಇಟ್ಟಿದ್ದೇವೆ. ಇದರಿಂದ ಬಡ ಜನರಿಗೆ ಅನುಕೂಲವಾಗುತ್ತದೆ ಅಲ್ಲದೆ ಇಡೀ ಇಂಡಿಯಾ ದೇಶದಲ್ಲೇ ಯಾವ ರಾಜ್ಯದಲ್ಲೂ ಇಂತಹ ಕ್ರಾಂತಿಕಾರಕವಾದ ತಿದ್ದುಪಡಿಯ ಮಸೂದೆಯನ್ನು ತಂದು ಪಾಸ್ ಮಾಡಿಲ್ಲ.

ಆದ್ದರಿಂದ ಮಾನ್ಯ ಸದಸ್ಯರು ಈ ಒಂದು ಭೂಸುಧಾರಣಾ ತಿದ್ದುಪಡಿಯ ಬಗ್ಗೆ ತೀವ್ರವಾಗಿ ಗಮನಕೊಟ್ಟು ಇದಕ್ಕೆ ತಾವು ಎಲ್ಲ ಬೆಂಬಲವನ್ನು ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ನಾವು ತಂದಿರತಕ್ಕಂತ ಒಂದೊಂದು

ಪರಿಣಾಮಕಾರಿಯಾದಂಥ ತಿದ್ದುಪಡಿಗಳಲ್ಲಿ ಗೇಣಿದಾರರ ಬಗ್ಗೆ ತಂದಿರುವ ತಿದ್ದುಪಡಿಯ ಬಗ್ಗೆ ವಿವರಗಳನ್ನು ನೀಡಬಯಸುತ್ತೇನೆ. ಇದರಲ್ಲಿ ಸಣ್ಣ ಹಿಡುವಳಿದಾರರು ಅಂದರೆ 1200 ರೂಪಾಯಿ ಆದಾಯ ಪರಿಮಿತ ಏನು ಇತ್ತು ಅದನ್ನು 4800 ರೂಪಾಯಿಗಳ ವರೆಗೂ ಏರಿಸಿದ್ದೇವೆ. ಇದರಿಂದ ಯಾರು ಸಣ್ಣ ಹಿಡುವಳಿದಾರರು ಎಂದರೆ ಆ ಕಾಲದಲ್ಲಿ ಅವರ ಮಿತಿ ಏನು ಇತ್ತು ಆ ಮಿತಿಯನ್ನು ಏರಿಸಿರತಕ್ಕಂಥಾದ್ದು ಎಂದು ಇಲ್ಲಿ ಸರ್ಕಾರದವರು ವ್ಯಕ್ತಪಡಿಸಿ ಒಂದು ನಿರ್ಣಯವನ್ನು ತೆಗೆದುಕೊಂಡು ತಿದ್ದುಪಡಿ ಮಾಡಿದ್ದಾರೆ. ಕೆಲವು ಸಂದರ್ಭಗಳಲ್ಲಿ ಗೇಣಿದಾರರನ್ನು ಒಕ್ಕಲೆಬ್ಬಿಸುವ ಮತ್ತು ಅವರನ್ನು ಓಡಿಸುವುದು ಸ್ವಾಭಾವಿಕವಾಗಿಯೇ ನಡೆದಿರುತ್ತದೆ. ಹಣವಂತರಾಗಿರತಕ್ಕಂಥವರು, ಶಕ್ತಿಯುತರಾಗಿರತಕ್ಕಂಥವರು ಗೇಣಿದಾರರನ್ನು ಓಡಿಸುವುದಷ್ಟೇ ಅಲ್ಲ. ಅವರನ್ನು ಇಲ್ಲವೇ ಇಲ್ಲ ಎಂದು ಹೇಳುವುದಕ್ಕೆ ಸಾಕಷ್ಟು ಪುರಾವೆಗಳನ್ನು ಇಟ್ಟುಕೊಂಡಿರುತ್ತಾರೆ, ಇದಕ್ಕೆ ನಾವು ಭೂ ಸುಧಾರಣೆ ಕಾನೂನಿಲ್ಲಿ ತಹಸೀಲ್‌ದಾರರಿಗೆ ನಿರ್ಣಯವನ್ನು ಕೊಡಬೇಕು, ಫೈಸಲ್ ಮಾಡಬೇಕೆಂದು ಕಾನೂನು ಮೊದಲು ಇತ್ತು. ಆದರೆ ತಹಸೀಲ್‌ದಾರರಿಗೆ ಬಂದಿರತಕ್ಕಂಥ ನೂರಾರು ಅರ್ಜಿಗಳು ಈವತ್ತಿನವರೆಗೆ ಫೈಸಲ್ ಮಾಡಿಲ್ಲ, ತೀರ್ಮಾನ ಕೊಟ್ಟಿಲ್ಲ. ಆದ್ದರಿಂದ ಭೂಮಿಯು ಅವರಿಗೆ ಸ್ವಾಧೀನವಿಲ್ಲದೆ ಪರಿತಾಪ ಪಡುತ್ತಿರತಕ್ಕಂಥ ನಿದರ್ಶನಗಳೂ ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಆದ್ದರಿಂದ ಅವರ ಕೈ ತಪ್ಪಿಸಬೇಕು ಎನ್ನುವ ಉದ್ದೇಶದಿಂದ ಲ್ಯಾಂಡ್ ಟ್ರಿಬ್ಯುನಲ್‌ಗಳನ್ನು ತೆಗೆದು ಅವರ ಒಪ್ಪಿಗೆಯನ್ನು ತೆಗೆದುಕೊಳ್ಳಬೇಕೆಂದು ಈ ಒಂದು ಭೂಸುಧಾರಣಾ ತಿದ್ದುಪಡಿಯನ್ನು ತಂದಿರುತ್ತೇವೆ.

ಮತ್ತೆ ಮಿಲಿಟರಿಗೇ ಸೇರಿರತಕ್ಕಂಥವರು ಸೈನಿಕರು ಯುದ್ಧ ಮಾಡಿ ಮರಣ ಹೊಂದಿದ್ದರೆ ಅವರು ಟೆನೆನ್ಸಿ ಮಾಡಬೇಕು ಎಂದು ಉದ್ದೇಶಪಟ್ಟರೆ ಗೇಣಿದಾರರು ಮಾತ್ರ ಮಾಡಬೇಕೆಂದು ಹೇಳಿ ಅವರಿಗೆ ಕಾಯಿದೆ ಇರುತ್ತದೆ. ನಮಗೆ ಇದರ ಬಗ್ಗೆ ಹಲವಾರು ಕಡೆಗಳಿಂದ ದೂರು ಬಂದು ಯಾರು ಸೈನಿಕರು ಯುದ್ಧದಲ್ಲಿ ಸತ್ತಿರತಕ್ಕಂಥವರ ಮನೆಯಲ್ಲಿ ಹೆಣ್ಣು ಮಕ್ಕಳಿಗೆ ಬಹಳ ಕಷ್ಟದಲ್ಲಿರುತ್ತಾರೆ ಅಂಥವರಿಗೆ ಗೇಣಿದಾರ ಮಾಡಬೇಕು ಎನ್ನುವ ನಿಯಮವಿದೆ, ಅದು ಅವರಿಗೆ ಸಹಾಯ ಮಾಡಿದಂತಾಗುವುದಿಲ್ಲ. ಗೇಣಿದಾರರಿಗೆ ನಷ್ಟವಾಗುತ್ತದೆ, ಅದು ಒಪ್ಪತಕ್ಕಂಥ ಮಾತಾಗಿದೆ. ಯಾವನು ಒಬ್ಬ ಸೈನಿಕನಾಗಿರುತ್ತಾನೆ ಅವನು ಭೂಮಾಲೀಕನಾಗಬೇಕು ಎನ್ನುವ ಉದ್ದೇಶದಿಂದ ಸರ್ಕಾರದವರು ಇಚ್ಛೆಪಟ್ಟು

ಈ ಒಂದು ತಿದ್ದುಪಡಿಯನ್ನು ತಂದಿದ್ದೇವೆ. ಕೆಲವಾರು ಕಾರಣಗಳಿಂದ ಭೂ ಮಾಲಿಕ ಗೇಣಿದಾರನಿಂದ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ತಾನು ಸ್ವಂತನಾಗಿ ಆಬಾದು ಮಾಡುತ್ತಾನೆಂದು ಹೇಳಿ ಸ್ವಾಧೀನಕ್ಕೆ ತೆಗೆದುಕೊಂಡಥವರು ಆ ವರ್ಷ ಆಬಾದು ಮಾಡಹೋದರೆ ಪುನಃ ಗೇಣಿದಾರನಿಗೆ ವಾಪಸ್ ಕೊಡತಕ್ಕಂಥ ತಿದ್ದುಪಡಿ ಇದುವರೆಗೆ ಏನು ಇತ್ತು ಮತ್ತು ಅವರು ಮಾಡದೆ ಇದ್ದಾಗ್ಯೂ ಕೂಡ ಅವರ ಸ್ವಾಧೀನವನ್ನು ತಪ್ಪಿಸಲಿಕ್ಕೆ ಒಂದು ಅವಕಾಶ ಕಾಯಿದೆಯಲ್ಲಿ ಇರಲಿಲ್ಲ. ಆ ಒಂದು ವಿಷಯದ ಬಗ್ಗೆಯೂ ಕೂಡ ನಾವು ಬಹಳ ಪ್ರಮುಖವಾಗಿರತಕ್ಕಂಥ ಒಂದು ತಿದ್ದುಪಡಿಯನ್ನು ತಂದಿರುತ್ತೇವೆಂದು ಹೇಳುತ್ತೇನೆ.

ಇನ್ನು 38ನೇ ಸೆಕ್ಷನ್ ಪ್ರಕಾರ ಇದರಲ್ಲಿ ಯಾರು ಯಾರು ಕೃಷಿ ಕಾರ್ಮಿಕರು ಇದ್ದಾರೆ. ಅಂದರೆ ಈ ರಾಜ್ಯದಲ್ಲಿ ಕೃಷಿ ಕಾರ್ಮಿಕರಾಗಿ ಸುಮಾರು 27 ಲಕ್ಷ ಜನರು ಇದ್ದಾರೆ. ವ್ಯವಸಾಯ ಕಾರ್ಮಿಕರಾಗಿ ಕೂಲಿ ಮಾಡಿಕೊಂಡು ಜೀವನ ಮಾಡತಕ್ಕಂಥ ಜನರ ಬಗ್ಗೆ ಬಹಳ ಅಶ್ರದ್ಧೆಯಿಂದ ನೋಡಿದ್ದಾರೆಂದು ಮಾತನಾಡಿದ್ದಾರೆ. ಅವರ ಸ್ಥಿತಿಗತಿಗಳನ್ನು ನೋಡಿ ಅವರಿಗೆ ಸರಿಯಾದ ರೀತಿಯಲ್ಲಿ ವ್ಯವಸ್ಥೆಯನ್ನು ಮಾಡಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಲೇ ಬಂದಿರುತ್ತಾರೆ. ಆದ್ದರಿಂದ ಕೃಷಿಕಾರ್ಮಿಕರ ಸುತ್ತಮುತ್ತಲು ಪ್ರದೇಶಗಳಲ್ಲಿ ಸೇರಿದಂತೆ ಜಮೀನುಗಳಲ್ಲಿಯೇ ಮನೆಗಳನ್ನು ಕಟ್ಟಿಕೊಂಡು ವಾಸವಾಗಿರುತ್ತಾನೆ, ಅವರಿಗೆ ಅಲ್ಲಿ ಇರಲು ಹಕ್ಕು ಇರುವುದಿಲ್ಲ; ಅವನನ್ನು ಹೊರಗೆ ಓಡಿಸತಕ್ಕಂಥ ವ್ಯವಸ್ಥೆ ಕಾನೂನಿನಲ್ಲಿ ಇರುತ್ತದೆ. ಅಂಥ ಒಬ್ಬ ನಿರ್ಭಾಗ್ಯರಿಗೆ ರಕ್ಷಣೆ ಕೊಡಬೇಕೆಂದು ಯಾರು ಯಾರು ಕೃಷಿ ಕಾರ್ಮಿಕರು ಇದ್ದಾರೆ ಅವರಿಗೆ ಮನೆಗಳನ್ನು ಕಟ್ಟಿಸಿಕೊಳ್ಳುವುದಕ್ಕೆ ಸುತ್ತಮುತ್ತಲೂ ಇರತಕ್ಕಂಥ ಜಮೀನಿನಲ್ಲಿ 5 ಸೆಂಟ್ಸ್ ಎಂದರೆ 30 ಅಡಿ ಅಗಲ 40 ಉದ್ದಕ್ಕೆ ಜಾಗವನ್ನು ಅವರಿಗೆ ಕೊಡಬೇಕೆಂದು ಹೇಳಿ ಒಂದು ತಿದ್ದುಪಡಿಯನ್ನೂ ಕೂಡ ಇದರಲ್ಲಿ ನಮೂದು ಮಾಡಿದ್ದೇವೆ.

ಇನ್ನು ಕಾಂಪೆನ್‌ಸೇಷನ್ ಕೊಡುವ ಬಗ್ಗೆ ಇಂತಿಷ್ಟು ಹಣವನ್ನು ಕೊಡಬೇಕು ಎಂದು ನಾವು ಇದರಲ್ಲಿ ವ್ಯವಸ್ಥೆಯನ್ನು ಮಾಡಿದ್ದೇವೆ. ಹಾಗಿದ್ದರೂ ಕೂಡ ಅಧಿಕಾರಿಗಳು ಮುಂದೆ ಒಂದು ಪ್ರಭಾವಕ್ಕೆ ಒಳಗಾಗುತ್ತಾರೆಂದು ಹೇಳಿದರೂ ಕೂಡ ತಪ್ಪಾಗಲಾರದು. ಅವರು ಹಿಂದೆ ಕಾಂಪೆನ್‌ಸೇಷನ್

ಕೊಡುವುದರಲ್ಲಿ ತಮ್ಮ ಗಡಿಯನ್ನು ಮೀರಿ ಕೊಡತಕ್ಕಂಥ ಪದ್ಧತಿ ಬೆಳೆದು ಬಂದಿತ್ತು. ಒಂದು ಜಮೀನಿಗೆ ಎರಡು ಸಾವಿರ ರೂಪಾಯಿಗಳು ಕೊಡುವುದು ಇದ್ದರೆ ಅದಕ್ಕೂ ಮೀರಿ 10–15 ಸಾವಿರ ರೂಪಾಯಿಗಳನ್ನು ಕೊಟ್ಟಿರತಕ್ಕಂಥಾದ್ದು ಸರ್ಕಾರದ ಗಮನಕ್ಕೆ ಬಂದು ಅದಕ್ಕೆ ಕೊನೆಮಾಡಬೇಕೆಂದು ಹೇಳಿ, ಅವರಿಗೆ ಇರತಕ್ಕಂಥ ಒಂದು ಅವಕಾಶ, ವ್ಯಾಪ್ತಿ ಏನು ಇತ್ತು ಅದನ್ನೆಲ್ಲ ತೆಗೆದು ಹಾಕಿ ಇಂತಿಷ್ಟು ಹಣ ಕೊಡಬೇಕು, ಆ ಒಂದು ಚೌಕಟ್ಟಿನಲ್ಲಿ ಅಮೌಂಟ್ ಕೊಡುವ ಬಗ್ಗೆ ರೂಲ್ಸ್ ಮಾಡಿ ಅವಕಾಶ ಮಾಡಿ ಕೊಟ್ಟಿದ್ದೇವೆ.

ಇನ್ನು ಇದುವರೆಗೆ ಗೇಣಿದಾರರಿಗೆ ಅರ್ಜಿ ಹಾಕಿಕೊಳ್ಳುವುದಕ್ಕೆ ಅವಕಾಶವಿರಲಿಲ್ಲ. ಯಾರು ಯಾರು ಶಾನುಭೋಗರ ಹತ್ತಿರ, ಬರವಣಿಗೆ ಬರತಕ್ಕಂಥವರ ಹತ್ತಿರ ಹೋದಾಗ ಅವರು ಮೋಸ ಮಾಡಿರತಕ್ಕಂಥ ಪ್ರಕರಣಗಳು ಎಷ್ಟೋ ನಡೆದಿರುತ್ತವೆ, ಎಲ್ಲರೂ ಈ ರೀತಿಯಾಗಿ ಮೋಸ ಮಾಡಿರುತ್ತಾರೆಂದು ಹೇಳುವುದಕ್ಕೆ ಹೋಗುವುದಿಲ್ಲ ಕೆಲವರು ಅವರಿಗೆ ತೊಂದರೆ ಮಾಡಬೇಕೆಂಬ ಉದ್ದೇಶದಿಂದ ಸರ್ವಪ್ರಯತ್ನಗಳನ್ನು ಮಾಡಿರುತ್ತಾರೆ. ಆದ್ದರಿಂದ ಈ ಒಂದು ತಿದ್ದುಪಡಿಯನ್ನು ತಂದಿರುವುದರಿಂದ ಅದಕ್ಕೆ ಅವಕಾಶವಿರುವುದಿಲ್ಲ. ಹೈಕೋರ್ಟ್‌ಗೆ ಹೋಗಿ ವಾಪಸ್ ಬಂದಿರತಕ್ಕಂಥ ಕೇಸ್‌ಗಳು ಬಹಳಷ್ಟಿದ್ದು ಅವರು ಪಡುತ್ತಿರುವ ತೊಂದರೆಯನ್ನು ನಿವಾರಣೆ ಮಾಡುವ ಸಲುವಾಗಿ ಮತ್ತೆ ಅರ್ಜಿಗಳನ್ನು ಹಾಕಿಕೊಳ್ಳಲು ಈ ತಿದ್ದುಪಡಿಯಲ್ಲಿ ಅವಕಾಶವನ್ನು ಮಾಡಿ ಕೊಟ್ಟಿರುತ್ತೇವೆ. ಯಾರು ಯಾರು ಜಮೀನುಗಳನ್ನು ಕಳೆದುಕೊಂಡಿರುತ್ತಾರೋ ಅಂಥವರಿಗೆ ನೆಗೋಷಿಯಬಲ್ ಬಾಂಡ್‌ಗಳ ಮುಖಾಂತರ ಹಣವನ್ನು ಕೊಡುವುದಕ್ಕೆ ಯೋಚನೆ ಮಾಡಿದ್ದೆವು. ಅದಕ್ಕೆ ರಿಸರ್ವ್‌ಬ್ಯಾಂಕ್‌ನವರು ಒಪ್ಪಲಿಲ್ಲ. ಸರ್ಕಾರಕ್ಕೂ ಕೂಡ ಕಟ್ಟುನಿಟ್ಟಾಗಿ ತಿರಸ್ಕಾರ ಮಾಡುವುದಕ್ಕೆ ಸಾಧ್ಯವಾಗಲಿಲ್ಲ. ಆದ್ದರಿಂದ ನಾನು ಈವತ್ತು ಏನು ಮಾಡಿದ್ದೇವೆಂದರೆ ನೆಗೋಷಿಯಬಲ್ ನಾನ್ ಟ್ರಾನ್ಸ್‌ಫರಬಲ್ ಬಾಂಡ್‌ಗಳನ್ನು ಕೊಡಬೇಕೆಂದು ಮಾಡಿದ್ದೆವು. ಅದಕ್ಕೂ ಕೂಡ ರಿಸರ್ವ್‌ಬ್ಯಾಂಕ್‌ನವರು ಒಪ್ಪಿಕೊಳ್ಳಲಿಲ್ಲ. ಆದ್ದರಿಂದ ಸರ್ಕಾರದವರು ಒಂದು ನಿರ್ಧಾರಮಾಡಿ ಯಾರು ಯಾರು ಭೂಮಿಯನ್ನು ಕಳೆದುಕೊಳ್ಳುತ್ತಾರೆ ಅಂಥವರಿಗೆ ನಾನ್‌ಟ್ರಾನ್ಸ್‌ಫರಬಲ್ ಬಾಂಡ್‌ಗಳನ್ನು ಕೊಟ್ಟರೆ ಅವರಿಗೆ ಕಾಂಪೆನ್‌ಸೇಷನ್ ಸಿಕ್ಕತಕ್ಕಂಥ ಒಂದು ಖಾಯಂ ಆದ ಒಂದು ಗ್ಯಾರಂಟಿಯನ್ನು ಕೊಟ್ಟಂತಾಗುತ್ತದೆನ್ನುವ ಭಾವನೆಯಿಂದ ಈ ಒಂದು ತಿದ್ದುಪಡಿಯನ್ನು ತೆಗೆದುಕೊಂಡು ಬಂದಿದ್ದೇವೆ.

**SRI R.S. BHAGAWAT:-** The Hon'ble Minister said about negotiable bonds, In what way the Reserve Bank of India can control our State Government?

**SRI B. BASAVALINGAPPA:-** He is a Lawyer, he knows what a Negotiable Instrument is. All that is tendered as money is governed by the Negotiable Instrument Act. Negotiable bond is as good as a legal tender. They are not permitting us to do the job of even no negoiable bonds ನಾವು ಈ ಒಂದು ತಿದ್ದುಪಡಿಯನ್ನು ತಂದಿರುವ ಉದ್ದೇಶವೇನೆಂದರೆ ಜನರಿಗೆ ಒಂದು ನೆಮ್ಮದಿ ಇರಲಿ ಎಂಬ ಉದ್ದೇಶದಿಂದ ಈ ಒಂದು ತಿದ್ದುಪಡಿಯನ್ನು ತಂದಿರುತ್ತೇವೆ.

ಯಾರ್‍ಯಾರು ಜಮೀನನ್ನು ಕಳೆದುಕೊಳ್ಳುತ್ತಾರೋ ಅವರ ಹಿತರಕ್ಷಣೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಅವರು ನೆಮ್ಮದಿಯಾಗಿರಲಿ ಎನ್ನುವ ದೃಷ್ಟಿಯಿಂದ ಇದನ್ನು ಮಾಡಿದ್ದೇವೆ. ಆಮೇಲೆ ಇನ್ನೊಂದು ಇದರಲ್ಲಿ ವಿಶೇಷ ಏನೆಂದರೆ ಮೈನರ್ ಆಗಿರತಕ್ಕಂಥಾವರಿಗೆ. ವಿಡೋಸ್ ಅವರಿಗೆ ಮತ್ತು ವುಮೆನ್ ನೆವರ್ ಮ್ಯಾರೀಡ್ ಅವರಿಗೆ ಈ ತಿದ್ದುಪಡಿಯಲ್ಲಿ ಒಂದು ಪ್ರಾವಿಷನ್ ಮಾಡಿದ್ದೇವೆ. ಸ್ಮಾಲ್ ಹೋಲ್ಡರ್ಸ್‌ನವರಿಗೆ ಈ ಜಮೀನನ್ನು ಕಳೆದುಕೊಂಡಂಥಾವರಿಗೆ ತಕ್ಷಣವಾಗಿ ಅವರಿಗೆ ಹಣ ಪಾವತಿ ಮಾಡಬೇಕು ಅಂತ ಮಾಡಿದ್ದೇವೆ. ಆಮೇಲೆ ಈ ಜಮೀನಿನ ಬಗ್ಗೆ ಟ್ರಿಬ್ಯೂನಲ್‌ನವರು ಏನು ಒಂದು ಆರ್ಡರ್ ಮಾಡುತ್ತಾರೋ ಅದರ ಒಂದು ಕಾಪಿಯನ್ನು ಸಬ್‌ರಿಜಿಸ್ಟ್ರಾರ್‌ರವರಿಗೆ ಕಳುಹಿಸುವುದಕ್ಕೆ ಒಂದು ಪ್ರಾವಿಷನ್ ಮಾಡಿದ್ದೇವೆ. ಮೊದಲು ಆಗಿದ್ದರೆ ಅವರು ಸಬ್‌ರಿಜಿಸ್ಟ್ರಾರ್ ಆಫೀಸ್‌ಗೆ ಕಳುಹಿಸುತ್ತಿರಲಿಲ್ಲಾ, ಅದನ್ನು ಬರೆದು ತರಿಸಿಕೊಳ್ಳುವುದಕ್ಕೆ ತಡವಾಗುತ್ತಿತ್ತು, ಹಿಂದಿನ ಒಂದು ಆಕ್ಟ್‌ನಲ್ಲಿ ಆ ರೀತಿ ಇತ್ತು. ಈಗ ಅದನ್ನು ಸ್ವಲ್ಪ ಬದಲಾವಣೆ ಮಾಡಿದ್ದೇವೆ. ಈಗ ಟ್ರಿಬ್ಯೂನಲ್‌ನಲ್ಲಿ ಪಾಸ್ ಆದ ಆರ್ಡರ್‌ನ ಒಂದು ಕಾಪಿಯನ್ನು ಸಬ್‌ರಿಜಿಸ್ಟ್ರಾರ್‌ರವರಿಗೆ ಕಳುಹಿಸಬೇಕು ಅಂತ ಮಾಡಿರುವುದರಿಂದ ಅದರಲ್ಲಿ ಅವನ ಹೆಸರು ಇನ್ನು ಇತರ ಎಲ್ಲಾ ವಿವರಗಳು ಅದರಲ್ಲಿ ಇರುವುದರಿಂದ ತಕ್ಷಣ ಅವನಿಗೆ ಇದರಿಂದ ಅನುಕೂಲವಾಗುತ್ತದೆ ಅಲ್ಲದೆ ಆ ಗೇಣಿದಾರನ ಮನಸ್ಸಿಗೂ ಕೂಡ ಒಂದು ನೆಮ್ಮದಿಯಾಗುತ್ತದೆ ಅನ್ನುವ ಒಂದು ಸದುದ್ದೇಶದಿಂದ ಈ ತಿದ್ದುಪಡಿಯನ್ನು ತೆಗೆದುಕೊಂಡು

ಬಂದಿದ್ದೇವೆ. ಆಮೇಲೆ ಗೇಣಿದಾರನಿಗೂ ಕೂಡ ಒಂದು ಆಕ್ಯುಪೇಷನಲ್ ರೈಟ್ ತಕ್ಷಣ ಸಿಕ್ಕಿದ ಹಾಗೆ ಆಗುತ್ತದೆ. ಸಬ್‌ರಿಜಿಸ್ಟ್ರಾರ್ ಆಫೀಸಿಗೆ ಒಂದು ಕಾಪಿ ಹೋಗುವುದರಿಂದ ಆ ಗೇಣಿದಾರ ಹೆಸರು ಯಾರು ಎನ್ನುವುದನ್ನು ಖಾಯಂ ಮಾಡಿಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಇನ್ನು ಮೊದಲಿನ ಒಂದು ಆಕ್ಟ್‌ನಲ್ಲಿ 6 ವರ್ಷದವರೆಗೆ ಆ ಜಮೀನನ್ನು ಪರಭಾರೆ ಮಾಡಬಾರದು ಅಂತ ಇತ್ತು, ಈಗ ಅದನ್ನು 15 ವರ್ಷದವರೆಗೆ ಪರಭಾರೆ ಮಾಡಬಾರದು ಅನ್ನುವ ಒಂದು ನಿರ್ಬಂಧವನ್ನು ಹಾಕಿದ್ದೇವೆ. ಇದರಿಂದ ಆ ಗೇಣಿದಾರನಿಗೂ ಕೂಡ ಒಂದು ಸ್ಥಿಮಿತ ಉಂಟಾಗಿ ಸಮಾಧಾನವಾಗುತ್ತದೆ. ಅವನಿಗೆ ಈ ಜಮೀನೇ ಒಂದು ಆಧಾರವಾಗಿರುವುದರಿಂದ ಈ ರೀತಿ ಮಾಡಿದರೆ ಅವನ ಸಂಸಾರ ನೆಮ್ಮದಿಯಾಗಿರಬಹುದು ಅಂತ ಮಾಡಿದ್ದೇವೆ. ಅಲ್ಲದೆ ಆ ಬಡವನಿಗೂ ಒಂದು ರೀತಿಯ ಸಮಾಧಾನವಾಗುತ್ತದೆ. ಇದನ್ನು 15 ವರ್ಷದವರೆಗೆ ಏತಕ್ಕೆ ನಿರ್ಬಂಧ ಹಾಕಿದ್ದೇವೆ ಎಂದರೆ ಆ ಬಡವ ಒಂದು ವೇಳೆ ಏನಾದರೂ ತೊಂದರೆಗೆ ಸಿಕ್ಕಿ ಪರಭಾರೆ ಆತನು ಕಷ್ಟಕ್ಕೆ ಸಿಕ್ಕಿಹಾಕಿಕೊಳ್ಳುತ್ತಾನೆ ಅಂತ ಮಾಡಿದ್ದೇವೆ. ಹೀಗೆ ಮಾಡುವುದರಿಂದ ಅವನು ಕಷ್ಟಕ್ಕೆ ಸಿಕ್ಕಿಹಾಕಿಕೊಳ್ಳುವ ಪ್ರಸಂಗವೇ ಬರುವುದಿಲ್ಲ. ಬಾಂಬೇ ಕರ್ನಾಟಕ ಏರಿಯಾದಲ್ಲಿ ಮೊದಲು ಇಂಥಾ ಟೆನ್ಯೂರ್ಸ್‌ಗಳು ಏನು ಇದ್ದರೋ ಅವರುಗಳು ಆ ಜಮೀನುಗಳನ್ನು ಮಾರುವ ಹಾಗೇ ಇರಲಿಲ್ಲಾ. ನಾವು ಇಲ್ಲಿ ಈಗ ಅವರು 15 ವರ್ಷದವರೆಗೆ ಪರಭಾರೆ ಮಾಡಬಾರದು ಅಂತ ಮಾತ್ರ ಮಾಡಿದ್ದೇವೆ. ಇದರಿಂದ ಆ ಬಡವನಿಗೆ ಸ್ವಲ್ಪ ಸಮಾಧಾನವಾಗಬಹುದು ಅಂತ ತಿಳಿದುಕೊಂಡಿದ್ದೇವೆ.

ಇನ್ನು ಸರ್‌ಪ್ಲಸ್ ಲ್ಯಾಂಡ್ ಬಗ್ಗೆ ಹೇಳುವುದಾದರೆ ಸೆಕ್ಷನ್ 77ರ ಪ್ರಕಾರ ಈ ಹೆಚ್ಚುವರಿ ಜಮೀನಿನ ಬಗ್ಗೆ ಇದುವರೆಗೂ ಕೂಡ ಲ್ಯಾಂಡ್ ಟ್ರಿಬ್ಯೂನಲ್‌ನವರೇ ತೀರ್ಮಾನ ಮಾಡುವ ಒಂದು ವ್ಯವಸ್ಥೆ ಇತ್ತು. ಇದರ ಬಗ್ಗೆ ಸರ್ಕಾರಕ್ಕೆ ದೂರುಗಳು ಜಾಸ್ತಿ ಬಂದಿದ್ದರಿಂದ ಅದನ್ನು ಗಮನದಲ್ಲಿಟ್ಟುಕೊಂಡು ಈ ಜಮೀನನ್ನು ಸರಿಯಾಗಿ ಹಂಚಬೇಕು ಅನ್ನುವ ಒಂದು ದೃಷ್ಟಿಯಿಂದ ರೆವಿನ್ಯೂ ಅಧಿಕಾರಿಗಳು ಏನು ಇರುತ್ತಾರೋ ಅವರು ಮತ್ತು ಡೆಪ್ಯುಟಿ ಕಮೀಷನರು ಲ್ಯಾಂಡ್ ಗ್ರಾಂಟ್ ರೂಲ್ಸ್ ಪ್ರಕಾರ ಆ ಸರ್‌ಪ್ಲಸ್ ಲ್ಯಾಂಡನ್ನು ಹಂಚಬೇಕು ಅನ್ನುವ ಒಂದು ವ್ಯವಸ್ಥೆ ಇರಬೇಕು ಅಂತ ಈ ತಿದ್ದುಪಡಿಯಲ್ಲಿ ತಂದಿದ್ದೇವೆ ಮತ್ತೆ ಈ ತಿದ್ದುಪಡಿಯಲ್ಲಿ ಇನ್ನೊಂದು ಅನುಕೂಲ ಎಂದರೆ,

ಲ್ಯಾಂಡ್ ಟ್ರಿಬ್ಯೂನಲ್‌ನವರು ಗೇಣಿದಾರನಿಗೆ ಪಹಣಿಯಾಗಲಿ ಯಾವ ಒಂದು ರಿಕಾರ್ಡ್ ಆಗಲಿ ಸರಿ ಮಾಡಿಕೊಡಬೇಕು ಅಂತ ಮಾಡಿದ್ದೇವೆ. ಹಾಗೆ ಇದ್ದರೆ ಹಣ ಪಾವತಿ ಮಾಡುವುದಕ್ಕೆ ಅನುಕೂಲವಾಗುತ್ತದೆ, ಅವನ ಹತ್ತಿರ ಯಾವ ದಾಖಲಾತಿಗಳೂ ಇಲ್ಲದೇ ಹೋದರೆ ಮೊದಲು ಹಣ ಪಾವತಿ ಮಾಡುವುದು ಕಷ್ಟವಾಗುತ್ತಿತ್ತು. ಮೊದಲು ಇದರ ಬಗ್ಗೆ ಇನ್‌ಸ್ಪೆಕ್ಷನ್ ಮಾಡಬೇಕು ಅಂತ ಇತ್ತು, ಆದರೆ ಎನ್‌ಕ್ವೈರಿ ಮಾಡಬೇಕು ಅಂತ ಏನೂ ಇರಲಿಲ್ಲ. ಅವನ ಹತ್ತಿರ ಒಂದು ವೇಳೆ ಎಲ್ಲಾ ದಾಖಲಾತಿಗಳು ಇದ್ದರೆ ಸರಿ ಇಲ್ಲದೇ ಹೋದರೆ ಅವರು ಇನ್‌ಸ್ಪೆಕ್ಷನ್ ಮಾಡಿ. ಎನ್‌ಕ್ವೈರಿ ಮಾಡಿ ಅದನ್ನು ಗುರುತಿಸಿ ಗೇಣಿದಾರನಿಗೆ ಕೊಡಬೇಕು ಅಂತ ಮಾಡಿದ್ದೇವೆ. ಇದರಿಂದ ಆ ಗೇಣಿದಾರನಿಗೆ ಬಹಳ ಅನುಕೂಲವಾಗುತ್ತದೆ ಅನ್ನುವ ದೃಷ್ಟಿಯಿಂದ ಈ ತಿದ್ದುಪಡಿ ತಂದಿದ್ದೇವೆ. ಇದು ಬಹಳ ಮುಖ್ಯವಾದುದು.

ಇನ್ನೊಂದು ಬಹಳ ಮುಖ್ಯವಾದ ತಿದ್ದುಪಡಿ ಎಂದರೆ ಯಾರ್‍ಯಾರ ಹತ್ತಿರ ಹೆಚ್ಚುವರಿ ಜಮೀನು ಇತ್ತೋ ಅಂಥಾವರು ಮೊದಲು ಡಿಕ್ಲರೇಷನ್ ಕೊಡುವಾಗ ನಿಜಾಂಶವನ್ನು ಬಚ್ಚಿಟ್ಟುಕೊಂಡು ಘೋಷಣೆ ಮಾಡಿದ್ದಾರೆ. ಇದು ಸರಿಯಾಗಿದ್ದರೇನೋ ಅನ್ವಯಿಸುವುದಿಲ್ಲ. ಒಬ್ಬೊಬ್ಬರಿಗೆ 2–3 ಸಾವಿರ ಎಕರೆ ಜಮೀನು ಇದ್ದರೂ ಕೂಡ ಅವರು ತಮ್ಮ ಸಂಬಂಧಿಕರ ಹೆಸರಿಗೆ ಪರಭಾರೆ ಮಾಡಿ ಸರ್‌ಪ್ಲಸ್ ಲ್ಯಾಂಡ್ ನಮ್ಮಲ್ಲಿ ಇಲ್ಲ ಎನ್ನುವ ಅಂಕಿ ಅಂಶ ಕೊಟ್ಟಿದ್ದಾರೆ. ಇವೆಲ್ಲಾ ನಮ್ಮ ಗಮನಕ್ಕೆ ಬಂದು ಯಾರ್‍ಯಾರಲ್ಲಿ ಭೂ ಸುಧಾರಣೆ ಕಾಯಿದೆ ಪ್ರಕಾರ ಹೆಚ್ಚುವರಿ ಜಮೀನು ಇರುತ್ತದೋ ಅಂಥಾದ್ದನ್ನು ಮೂಲೋತ್ಪಾಟನೆ ಮಾಡಲಿಕ್ಕೆ ಇದರಿಂದ ಅನುಕೂಲವಾಗುತ್ತದೆ. ಮತ್ತು ಯಾರ್‍ಯಾರು ಈ ಒಂದು ಉದ್ದೇಶಕ್ಕೆ ವಿರುದ್ಧವಾಗಿ ನಡೆದುಕೊಂಡು, ಯಾರ್‍ಯಾರು ಹೆಚ್ಚುವರಿ ಜಮೀನನ್ನು ಬಚ್ಚಿಟ್ಟುಕೊಂಡಿದ್ದಾರೋ ಯಾರ್‍ಯಾರು ಇದರಲ್ಲಿ ಮೋಸ ಮಾಡಿದ್ದಾರೋ ಅಂಥಾವರ ಬಗ್ಗೆ ಕಾರ್ಯಕ್ರಮ ತೆಗೆದುಕೊಳ್ಳುವುದಕ್ಕೆ ಇದರಿಂದ ಅನುಕೂಲವಾಗುತ್ತದೆ. ಪುನಃ ಯಾರಾದರೂ ಟ್ರಿಬ್ಯೂನಲ್ಸ್‌ಗಾಗಲಿ ಅಥವಾ ಅಧಿಕಾರಿಗಳಿಗಾಗಲಿ ತಾವೇ ಪುನಃ ಬಂದು ಅರ್ಜಿ ಕೊಟ್ಟರೆ.....

**SRI R. DAYANANDA SAGAR:-** If they have legally partitioned, how are you going to hold them legally responsible?

**ಶ್ರೀ ಬಿ. ಬಸವಲಿಂಗಪ್ಪ:-** ನ್ಯಾಯವಾಗಿ ಯಾರು ಯಾರು ಪರಭಾರೆ ಮಾಡಿದ್ದಾರೆ ಆ ಹೆಚ್ಚುವರಿ ಜಮೀನುಗಳನ್ನು ನ್ಯಾಯವಾಗಿ ಹಂಚಿಕೊಂಡಿದ್ದರೆ ಅಂಥಾವರ ಮೇಲೆ ಕೈ ಹಾಕುವುದಕ್ಕೆ ಹೋಗುವುದಿಲ್ಲ.

**ಶ್ರೀ ಆರ್. ದಯಾನಂದಸಾಗರ್:-** ಒಂದು ವೇಳೆ ಅವನು ನ್ಯಾಯವಾಗಿ ಮಾಡಿದ್ದರೂ ಸಹ ಅವನು ಅನ್ಯಾಯವಾಗಿ ಮಾಡಿದ್ದಾನೆ ಅಂತ ತಾವು ತಿಳಿದುಕೊಂಡರೆ ಅದು ಸರಿಯಲ್ಲ. ಹೇಗೆಂದರೆ ಅವನ ಹತ್ತಿರ ಒಂದು ಸಾವಿರ ಎಕರೆ ಜಮೀನು ಇತ್ತು ಅಂತ ಇಟ್ಟುಕೊಳ್ಳಿ. ಅವನು ಅದನ್ನು ಏನು ಮಾಡುತ್ತಾನೆ ಎಂದರೆ ಅವನು ಕಾನೂನು ಪ್ರಕಾರವಾಗಿಯೇ ತನ್ನ 4 ಜನ ಮೇಜರ್ ಸನ್ಸ್‌ಗೆ ಒಂದಷ್ಟು ಅಂಕಲ್ ಸನ್ಸ್‌ಗೆ ಒಂದಷ್ಟು ಇನ್ನು ಇತರೆ ಸಂಬಂಧಿಕರಿಗೆ ಒಂದಷ್ಟು ಹಂಚಿಬಿಟ್ಟು ಕೊನೆಗೆ ರೂಲ್ಸ್ ಪ್ರಕಾರ 50 ಎಕರೆ ಜಮೀನು ಇಟ್ಟುಕೊಂಡರೆ ಇವನು ಉದ್ದೇಶಪೂರ್ವಕವಾಗಿಯೇ ಈ ರೀತಿ ಮಾಡಿದ್ದಾನೆ ಅಂತ ತಾವು ಈಗಿನ ಕಾನೂನು ಪ್ರಕಾರ ಕ್ರಮ ತೆಗೆದುಕೊಳ್ಳುವುದು ಸರಿಯೇ?

**ಶ್ರೀ ಬಿ. ಬಸವಲಿಂಗಪ್ಪ:-** ಅದು ಕಾನೂನು ಪ್ರಕಾರ ಇಲ್ಲವೇ ಇಲ್ಲ. ಹೇಗೆಂದರೆ ಈ ಬಗ್ಗೆ ಫ್ಯಾಮಿಲಿ ಎಂದರೆ ಏನು ಅನ್ನುವುದನ್ನು ಡೆಫಿನಿಷನ್‌ನಲ್ಲೇ ಹೇಳಿದೆ. ಅದರ ಪ್ರಕಾರ ಒಂದು ಸಂಸಾರ ಎಂದರೆ 5 ಜನ ಅಂತ ಹೇಳಿದ್ದೇವೆ. ಮೇಜರ್ ಸನ್ಸ್ ಇದ್ದರೆ ಇಷ್ಟು ಇಟ್ಟುಕೊಳ್ಳಬೇಕು ಅಂತ ಇದೆ. ಅದು ಆ ಒಂದು ಸೀಲಿಂಗ್ ಲಿಮಿಟ್‌ನಲ್ಲಿ ಇರಬೇಕು. ನಂತರ ಮೇಜರ್ ಸನ್ಸ್‌ಗೆ ಇಷ್ಟು ಇಟ್ಟುಕೊಳ್ಳಬಹುದು ಅಂತ ಇದೆ. ಅದಕ್ಕಿಂತಲೂ ಜಾಸ್ತಿ ಇಟ್ಟುಕೊಳ್ಳುವುದಕ್ಕೆ ಕಾನೂನಿನಲ್ಲಿ ಇಲ್ಲವೇ ಇಲ್ಲ. ಒಂದು ವೇಳೆ ನೀವು ಹೇಳಿದ ಹಾಗೆ ಹೆಚ್ಚುವರಿ ಜಮೀನನ್ನು ತನ್ನ ಸಂಬಂಧಿಕರಿಗೆಲ್ಲಾ ಹಂಚಿದ್ದರೆ, ಅದನ್ನು ನಾವು ರಿವ್ಯೂ ಮಾಡಲಿಕ್ಕೆ ಅಧಿಕಾರ ಉಂಟು. ಆ ಪ್ರಕಾರ ಏನಾದರೂ ಹೆಚ್ಚುವರಿ ಜಮೀನು ಇದ್ದರೆ ಅದನ್ನು ತೆಗೆದುಕೊಳ್ಳುವುದಕ್ಕೆ ಅಧಿಕಾರ ಇದೆ.

**ಶ್ರೀ ಆರ್. ದಯಾನಂದಸಾಗರ್:-** ಒಂದು ಫ್ಯಾಮಿಲಿಯಲ್ಲಿ ಇರತಕ್ಕಂಥಾ ಸಿಸ್ಟರ್ಸ್ ಮತ್ತು ಸಿಸ್ಟರ್ಸ್ ಬ್ರದರ್, ಮತ್ತು ಅಂಕಲ್ ಸನ್ಸ್ ಇಂಥಾವರಿಗೇ ಅವರು ಹಂಚುತ್ತಾರೆ. ಹಾಗಿದ್ದರೆ ಅದು ಒಳ್ಳೆಯದಲ್ಲಾ ಎಂದು ಹೇಳುತ್ತೀರಾ?

**SRI B. BASAVALINGAPPA:-** Family is defined in section 2 sub clause (12). It says-family means (a) in the case

of individual who has spouse or spouse such individual spouse or spouses and their minor sons and unmarried daughters. This is called a family– ಈ ರೀತಿ ಇರುವಾಗ ಅವರು ಬೇರೆಯವರಿಗೆ ಹಂಚುವ ಹಾಗೇ ಇಲ್ಲ. ಹಾಗೇನಾದರೂ ಹಂಚಿದರೆ ಅದು ಸರಿಹೋಗುವುದಿಲ್ಲ.

**ಶ್ರೀ ಆರ್. ದಯಾನಂದಸಾಗರ್:–** ಈ ಸಂಸ್ಥಾನದಲ್ಲಿ ಯಾರ್ಯಾರಿಗೆ ಭೂಮಿ ಕಡಿಮೆ ಇದೆಯೋ ಅದು ನಿಮ್ಮ ಕಾನೂನು ಪ್ರಕಾರ ಅನ್ವಯವಾಗುವುದಿಲ್ಲ. I want to know from the hon-Minister how many acres of land has come to you for distribution I know for certain that none of the landlords who has got vast acres of land has given to the Government. He has adjusted in such a manner that not an inch of land has gone out of his possession.

**ಶ್ರೀ ಬಿ. ಬಸವಲಿಂಗಪ್ಪ:–** ಸರ್‌ಪ್ಲಸ್ ಲ್ಯಾಂಡ್ಸ್ ಯಾರ್ಯಾರ ಹತ್ತಿರ ಇದೆಯೋ ಅವರೆಲ್ಲಾ ನಮ್ಮ ಹತ್ತಿರ ಕೊಟ್ಟಿದ್ದಾರೆ ನಾಳೆ ದಿವಸ ಈ ಬಗ್ಗೆ ನಾನು ಉತ್ತರ ಕೊಡುವಾಗ ಇದರ ಪೂರ್ಣ ವಿವರವನ್ನು ಕೊಡುತ್ತೇನೆ. ಆದರೆ ಮಾನ್ಯ ಸದಸ್ಯರುಗಳು ಈ ಬಗ್ಗೆ ಏನೇನು ಹೇಳಿದ್ದಾರೆ ಈ ಒಂದು ಕಂಟಿನ್‌ಜೆನ್ಸಿ ಏನು ಇದೆ ಅದನ್ನು ನನ್ನ ಮನಸ್ಸಿನಲ್ಲಿಟ್ಟುಕೊಂಡು ಈ ತಿದ್ದುಪಡಿಯನ್ನು ತಂದಿದ್ದೇನೆ.

ಇನ್ನೊಂದು ವಿಷಯ ಏನೆಂದರೆ ಇದುವರೆಗೂ ಕೂಡ ಇನಾಂ ಅಬಾಲಿಷನ್ ಆಕ್ಟ್ ಮತ್ತು ಪರ್ಸನಲ್ ಇನಾಂ ಅಬಾಲಿಷನ್ ಆಕ್ಟ್ ಈ ರೀತಿಯಾಗಿ ಏನು ಇದ್ದುವು ಇದರ ಬಗ್ಗೆ ಸುಮಾರು 40 ಸಾವಿರ ಅಪ್ಲಿಕೇಷನ್ಸ್ ಬಂದಿವೆ. ಆದರೆ ಅವುಗಳ ಬಗ್ಗೆ ಇದುವರೆಗೂ ಕೂಡ ಫೈನಲ್ ಆಗಲಿಲ್ಲ. ಇದು ಬಹು ಭಾಗ ಗೇಣಿದಾರನಿಗೆ ಸಂಬಂಧಪಟ್ಟಿದ್ದು. ಇವೆಲ್ಲಾ ಅರ್ಜಿಗಳೂ ಕೂಡ ಇನಾಂ ಅಬಾಲಿಷನ್ ಡೆಪ್ಯೂಟಿ ಕಮೀಷನರ್ ಮುಂದೆ ಇವೆ. 1952ರಲ್ಲಿ ಇದು ಜಾರಿಗೆ ಬಂದದ್ದು. ಅವಾಗಿನಿಂದಲೂ ಕೂಡ ಇದು ಹಾಗೆಯೇ ಇದೆ. ಇವೆಲ್ಲಾ ಗೇಣಿದಾರರಿಗೆ ಸಂಬಂಧಪಟ್ಟಂತೆ ಇವೆ. These are all tenancy case. ಈಗ ಈ ಕೇಸಸ್‌ನೆಲ್ಲಾ ಟ್ರಿಬ್ಯೂನಲ್‌ನವರೇ ಫೈನಲ್ ಮಾಡಬೇಕು ಅಂತ ಮಾಡಿದ್ದೇವೆ. ಅಂಥಾ ಜನಗಳಿಗೆ ಅರ್ಜಿ ಹಾಕುವುದಕ್ಕೆ 6 ತಿಂಗಳವರೆಗೆ ಅವಕಾಶ ಮಾಡಿಕೊಟ್ಟಿದ್ದೇವೆ. ಇನಾಂ ಅಬಾಲಿಷನ್ ಆಕ್ಟ್ ಪ್ರಕಾರ ಯಾರ್ಯಾರು

ಅರ್ಜಿಗಳನ್ನು ಹಾಕಿಕೊಂಡಿದ್ದಾರೋ ಅವೆಲ್ಲಾ ಡೆಪ್ಯೂಟಿ ಕಮೀಷನರ್ ಮುಂದೆ ಇದೆ. ಅದರಲ್ಲಿ ಕೆಲವರು ಹೈಕೋರ್ಟ್‌ಗೆ ಹೋಗಿದ್ದರು. ಅವರು ಈ ಬಗ್ಗೆ ಸರಿಯಾದ ಸಬ್‌ಸ್ಟಾಂಟೀವ್ ಕಾಸ್ ಕೊಟ್ಟಿಲ್ಲಾ ಎಂದು ನಿಜವಾದ ಅರ್ಜಿಗಳನ್ನೂ ಕೂಡ ವಜಾ ಮಾಡಿದ್ದಾರೆ. ಅಂತಹ ಅರ್ಜಿಗಳನ್ನು ವಜಾ ಮಾಡಿದ್ದಾರೆ. ಕೃಷಿ ಕಾರ್ಮಿಕರು ವಾಸ ಮಾಡುವ ಮನೆ ಮತ್ತು ಅದರ ಸುತ್ತ ಮುತ್ತ ಇರುವ ಪ್ರದೇಶವನ್ನು ಅವರಿಗೇ ಕೊಡಬೇಕೆಂದು ತಿದ್ದುಪಡಿ ತರಲಾಗಿದೆ. ಇದನ್ನು ಭೂ ನ್ಯಾಯ ಮಂಡಲಿಗಳ ವ್ಯಾಪ್ತಿಗೆ ಸೇರಿಸಲಾಗಿದೆ. ಆದುದರಿಂದ, ಅವರುಗಳು ಅಲ್ಲಿಗೆ ಅರ್ಜಿ ಹಾಕಲು ಅನುಕೂಲವಾಗುವಂತೆ ಆರು ತಿಂಗಳ ಕಾಲಾವಕಾಶವನ್ನು ಕೊಡಲಾಗಿದೆ.

**ಶ್ರೀಮತಿ ಬಸವರಾಜೇಶ್ವರಿ:–** ವೇಸ್ಟ್ ಜಮೀನುಗಳ ಬಗ್ಗೆ ಸರ್ಕಾರದವರು ಏನು ಯೋಚನೆ ಮಾಡಿದ್ದಾರೆ?

**ಶ್ರೀ ಬಿ. ಬಸವಲಿಂಗಪ್ಪ:–** ಇದನ್ನು ಯೋಚನೆ ಮಾಡಲಾಗುವುದು. ಮಾನ್ಯ ಸದಸ್ಯರ ಸಲಹೆಯನ್ನು ಗಮನದಲ್ಲಿಟ್ಟುಕೊಳ್ಳಲಾಗುವುದು. ಷೆಡ್ಯೂಲಿನಲ್ಲಿ ಕೆಲವು ಭೂಮಿಗಳ ವಿವರಣೆಗಳಿವೆ. ಇದುವರೆವಿಗೂ ಸರ್ಕಾರ ಪ್ರತಿಯೊಂದು ಜಮೀನನ್ನು ನೋಟಿಫೈ ಮಾಡಿದೆಯೇ ಹೊರತು ಸರ್‌ಪ್ಲಸ್ ಜಮೀನನ್ನು ಹಂಚುವುದಕ್ಕೆ ಆಗಿಲ್ಲ. 1974ನೇ ಇಸವಿಯಿಂದಲೂ ಯಾವ ಸರ್‌ಪ್ಲಸ್ ಭೂಮಿಯನ್ನೂ ಹಂಚಲಿಕ್ಕಾಗಿಲ್ಲ. ಅದನ್ನು ಷೆಡ್ಯೂಲಿನಲ್ಲಿ ಹಾಗೆಯೇ ಇಟ್ಟುಕೊಳ್ಳಲಾಗಿದೆ. ಇಷ್ಟು, ಮಸೂದೆಯಲ್ಲಿ ತಂದಿರುವ ತಿದ್ದುಪಡಿಗಳು. ಈ ತಿದ್ದುಪಡಿ ಮಸೂದೆಗೆ ಕೆಳಮನೆಯ ಸದಸ್ಯರು ಸಮಾಧಾನ ವ್ಯಕ್ತಪಡಿಸಿ ಒಪ್ಪಿಗೆ ನೀಡಿದ್ದಾರೆ. ಈ ಮಸೂದೆಯಲ್ಲಿ ವಿರೋಧಪಕ್ಷ ಮತ್ತು ಆಡಳಿತ ಪಕ್ಷವೆಂಬ ತಾರತಮ್ಯ ತೋರಿಸಿಲ್ಲ. ಎರಡೂ ಪಕ್ಷದ ಸದಸ್ಯರು ಮಾಡಿರುವ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು. ಪರಿಣಾಮಕಾರಿಯಾದ ಸಮಗ್ರ ತಿದ್ದುಪಡಿಯನ್ನು ತರಲಾಗಿದೆ. ಮಾನ್ಯ ಸದಸ್ಯರು ಇದಕ್ಕೆ ಒಪ್ಪಿಗೆ ನೀಡಬೇಕೆಂದು ಪ್ರಾರ್ಥನೆ.

**ಶ್ರೀ ಆರ್.ಎಸ್. ಭಗವತ್ (ಸ್ಥಾನೀಯ ಪ್ರಾಧಿಕಾರಿಕ್ಷೇತ್ರ):–** ಮಾನ್ಯ ಉಪಸಭಾಪತಿಯವರೇ ಸಭೆಯ ಮುಂದೆ ಮಂಡಿಸಿರುವ ತಿದ್ದುಪಡಿ ಮಸೂದೆಕುರಿತು ನನ್ನ ಅಭಿಪ್ರಾಯ ಕೊಡುವ ಪೂರ್ವದಲ್ಲಿ ನಮಗೆ ಒದಗಿಸಿರುವ ತಿದ್ದುಪಡಿ ಮಸೂದೆ ಪುಸ್ತಕದಲ್ಲಿರುವ ನ್ಯೂನತೆಯನ್ನು ಮಾನ್ಯ ಸಚಿವರ ಗಮನಕ್ಕೆ ತರಬಯಸುತ್ತೇನೆ. ತಿದ್ದುಪಡಿಯೊಂದಿಗೆ ಒದಗಿಸುವ

ತಿದ್ದುಪಡಿಯ ಕಾರಣ ಮತ್ತು ಉದ್ದೇಶಗಳ ಕಡೆ ಸಂಬಂಧಪಟ್ಟ ಅಧಿಕಾರಿಗಳು ಮತ್ತು ಮಾನ್ಯ ಸಚಿವರು ಗಮನ ಕೊಡಬೇಕು. 1974ನೇ ಇಸವಿಯ ನಂತರ ಭೂ ಸುಧಾರಣೆ ಕಾನೂನಿಗೆ ಅನೇಕ ತಿದ್ದುಪಡಿಗಳನ್ನು ಮಾಡಲಾಗಿದೆ. ಹೀಗಾಗಿ ಈ ಕಾಯಿದೆಯ ಕೆಲವು ಶಬ್ಧಗಳ ವ್ಯಾಖ್ಯೆಯನ್ನು ಅನೇಕ ಸಲ ನೆನಪಿನಲ್ಲಿಡಲು ಸಾಧ್ಯವಾಗದಿರುವುದಿರಲಿ ಅದನ್ನು ಅರ್ಥ ಮಾಡಿಕೊಳ್ಳುವುದೂ ಕಷ್ಟವಾಗಿದೆ. ಏಕೆಂದರೆ, ಉದ್ದೇಶ ಮತ್ತು ಕಾರಣದ ತಖ್ತೆಯನ್ನು ನೋಡಿದ ಮೇಲೆ ಅದಕ್ಕೆ ಸಂಬಂಧಪಟ್ಟ ಒಂದೆರಡು ತಿದ್ದುಪಡಿಗಳನ್ನು ನೋಡಲು ಬಹಳಷ್ಟು ಹುಡುಕಬೇಕಾಯಿತು ಉದಾಹರಣೆಗೆ: On page 17-it is stated like this:

"members of the Tribunal who continuously absent themselves for more than three consecutive meeting of the Tribunal are proposed to be removed and the Dy. Commissioners are being empowered totransder cases from one Tribunal to another wherever necessary"

**ಶ್ರೀ ಬಿ. ಬಸವಲಿಂಗಪ್ಪ:–** ಅದನ್ನು ಬಿಟ್ಟುಬಿಡಲಾಗಿದೆ.

**ಶ್ರೀ ಆರ್.ಎಸ್. ಭಗವತ್:–** ಅದನ್ನು ಬಿಟ್ಟುಬಿಟ್ಟಿರಬಹುದು. ಆದರೆ ಕಾನೂನು ನೋಡಿದಾಗ ಹುಡುಕುವ ಪ್ರಸಂಗ ಬಂತಲ್ಲ?

**ಉಪಾಸಭಾಪತಿಯವರು:–** ಇಂದು ನಾವು ಮಧ್ಯಾಹ್ನ ಒಂದು ಗಂಟೆಗೆ ಸೇರಿದ್ದೇವೆ ಮತ್ತು ಇದುವರೆವಿಗೂ ಕೆಲಸ ನಡೆಸಿಕೊಂಡು ಬಂದಿದ್ದೇವೆ. ಕಾರ್ಯ ಬಹಳವಿರುವುದರಿಂದ ನಾಳಿನ ಅಧಿವೇಶನವನ್ನು ಎರಡು ಸಲ, ಅಂದರೆ ಬೆಳಿಗ್ಗೆ 9–00 ರಿಂದ 1–10 ಮತ್ತು 3–00 ರಿಂದ 6–00 ಗಂಟೆಯವರೆಗೆ ಇಟ್ಟುಕೊಳ್ಳಬೇಕೆಂದು ನಿರ್ಧರಿಸಲಾಗಿದೆ. ಮಾನ್ಯ ಸದಸ್ಯರು ಸಹಕರಿಸಬೇಕಾಗಿ ವಿನಂತಿ. ಈಗ ಸಭೆಯು ಎದ್ದು ನಾಳೆ ಮತ್ತೆ ಬೆಳಿಗ್ಗೆ 9–00 ಗಂಟೆಗೆ ಸೇರಲಿದೆ.

## 2. ಭೂ ದಾಖಲೆಗಳ ಕ್ರಮಬದ್ಧತೆ (30ನೇ ಆಗಸ್ಟ್ 1978)

**ಶ್ರೀ ಎಸ್. ಮಲ್ಲಿಕಾರ್ಜುನಯ್ಯ (ಪದವೀಧರರ ಕ್ಷೇತ್ರ):–** ಮಾನ್ಯ ಸಭಾಪತಿಯವರೇ, ನಾನು ಕಳೆದ ಸಾರಿ ಈ ಸದನದಲ್ಲಿ ಹೇಳಿದ್ದಂತೆ ಈ

ಟೆನೆಂನ್ಸಿಯನ್ನು ಡಿಸ್ಟೈಡ್ ಮಾಡತಕ್ಕಂಥ ಪ್ರಮುಖವಾದ ಅಂಶವೆಂದರೆ ಪಹಣಿ: ಇದು ಸೇಕ್ರೆಡ್ ಡಾಕ್ಯುಮೆಂಟ್, ವ್ಯಾಲ್ಯೂಯೇಬಲ್ ಡಾಕ್ಯುಮೆಂಟ್ ಆಗಿದೆ. ಈ ಪಹಣಿ ಬರೆಯತಕ್ಕಂಥಾದ್ದು ವಿಲೇಜ್ ಅಕೌಂಟೆಂಟ್ ಕೈಯಿಗೆ ಹೋದರೆ ಅವನು ಅದನ್ನು ಹೇಗೆ ಬೇಕಾದರೂ ಟ್ಯಾಂಪರ್ ಮಾಡುವುದಕ್ಕೆ ಅವಕಾಶ ಇದೆ ಎನ್ನತಕ್ಕಂಥ ವಿಚಾರವನ್ನು ನಾನು ಹಿಂದೆ ಇದ್ದಂಥ ಕಂದಾಯ ಮಂತ್ರಿಯವರಿಗೂ ಹೇಳಿದ್ದೇನೆ.

ಶ್ರೀ ಬಿ. ಬಸವಲಿಂಗಪ್ಪ:– ಈ ಒಂದು ವಿಚಾರವನ್ನು ಸರ್ಕಾರದವರು ಗಮನದಲ್ಲಿಟ್ಟುಕೊಂಡು ಪಹಣಿ ಬರೆಯತಕ್ಕಂಥ ವಿಚಾರದಲ್ಲಿ ಅವರು ಡುಪ್ಲಿಕೇಟ್ ಕಾಪಿಗಳನ್ನು ಮಾಡಿ ಒಂದನ್ನು ಗೇಣಿದಾರರಿಗೆ ಕೊಡಬೇಕು. ತಹಶೀಲ್ದಾರರು ಒಂದು ಕಾಪಿಯನ್ನು ಇಟ್ಟುಕೊಳ್ಳಬೇಕು ಮತ್ತು ವಿಲೇಜ್ ಅಕೌಂಟೆಂಟ್ ಒಂದು ಕಾಪಿಯನ್ನು ಇಟ್ಟುಕೊಳ್ಳಬೇಕು ಎಂದು ಹೇಳಿದ್ದೇವೆ. ಹೀಗೆ ಪಹಣಿ ಬರೆಯುವಾಗ 3 ಕಾಪಿಗಳನ್ನು ಮಾಡಬೇಕೆಂದು ನಾವು ಈಗಾಗಲೇ ಡೈರೆಕ್ಷನ್ ಕೊಟ್ಟಿದ್ದೇವೆ ಮತ್ತು ಎಲ್ಲೆಲ್ಲಿ ಈ ಪಹಣಿ ವಿಚಾರದಲ್ಲಿ ಇಂತಹ ಅನ್ಯಾಯಗಳು ಆಗುತ್ತದೆ ಅಲ್ಲೆಲ್ಲಾ ಇದನ್ನು ಜಾರಿಗೆ ಕೊಡುವುದಕ್ಕೆ ನಾವು ಆದೇಶ ಕೊಟ್ಟಿದ್ದೇವೆ.

ಶ್ರೀ **ಎಸ್. ಮಲ್ಲಿಕಾರ್ಜುನಯ್ಯ**:– ಸ್ವಾಮಿ, ನಾನು 5 ವರ್ಷಗಳ ಹಿಂದೆ ಈ ಮಾತನ್ನು ಹೇಳಿದ್ದೆ. ಈಗ ಮಾನ್ಯ ಮಂತ್ರಿಯವರು ಪಹಣಿ ಬರೆಯುವಾಗ ಡುಪ್ಲಿಕೇಟ್ ಕಾಪಿ ಮಾಡಿ ಗೇಣಿದಾರನಿಗೆ ಒಂದು ಕಾಪಿ ಕೊಟ್ಟು, ತಹಶೀಲ್ದಾರ್‌ರವರು ಒಂದು ಕಾಪಿ ಇಟ್ಟುಕೊಂಡು, ಇನ್ನೊಂದನ್ನು ವಿಲೇಜ್ ಅಕೌಟೆಂಟ್ ಇಟ್ಟುಕೊಳ್ಳುವಂತೆ ಆದೇಶ ಕೊಟ್ಟಿದ್ದೇವೆ ಎಂದು ಹೇಳಿದ್ದಾರೆ. ಇದು ಸಾಧ್ಯವಾದುದಾಗಿದೆ; ಇದನ್ನು ನಾನು ಸ್ವಾಗತ ಮಾಡುತ್ತೇನೆ. ಇದರಲ್ಲಿ ಏನಾಗುತ್ತದೆ ಎಂದರೆ ಟೆನೆಂಟ್‌ಗಳು ಪ್ರಭಾವಶಾಲಿಗಳಾಗಿದ್ದರೆ ಅವರಂತೆಯೇ ಪಹಣಿ ಬರೆಸಿಕೊಳ್ಳುತ್ತಾರೆ. ಮತ್ತು ಇದರಲ್ಲಿ ಲ್ಯಾಂಡ್‌ಲಾರ್ಡ್‌ಗಳು ಪ್ರಭಾವಶಾಲಿಗಳಾಗಿದ್ದರೆ ಅವರಂತೆ ಪಹಣಿ ಬರೆಸಿಕೊಳ್ಳುತ್ತಾರೆ. ಈ ರೀತಿ ಇದರಲ್ಲಿ ಮ್ಯಾನಾಪುಲೇಟ್ ಮಾಡುವುದಕ್ಕೆ ಸ್ಕೋಪ್ ಇದೆ. ಈ ರೀತಿ ಅನೇಕ ಕಡೆಗಳಲ್ಲಿ ಮಾಡಿದ್ದಾರೆ. ವಿಲೇಜ್ ಅಕೌಂಟೆಂಟ್ ಎಷ್ಟೇ ಪ್ರಾಮಾಣಿಕನಾಗಿ ಇದ್ದರೂ ಕೂಡ ಅವನಿಗೆ ಪ್ರೆಷರ್ ಮಾಡಿ ಬರೆಸಿಕೊಳ್ಳುತ್ತಾರೆ. ಮಾನ್ಯ ಮಂತ್ರಿಯವರು ಹೇಳಿದಂತೆ ಇದನ್ನು 5 ವರ್ಷಗಳ ಹಿಂದೆಯೇ ತಂದಿದ್ದರೆ ಇವತ್ತಿನ ದಿವಸ

ಅನೇಕರು ಹೂಡಿದಂತ ಲಿಟಿಗೇಷನ್ ಈ ರೂಪಕ್ಕೆ ಬರುತ್ತಾ ಇರಲಿಲ್ಲ; ಪ್ರಾಮಾಣಿಕ ರೈತನಿಗೆ ಭೂಮಿ ಆಗಲೇ ಸಿಕ್ಕುತ್ತಾ ಇತ್ತು. ಇನ್ನು ಎರಡನೆಯದಾಗಿ ಮಾನ್ಯಮಂತ್ರಿಯವರು ಇದನ್ನು ಪ್ರಗತಿಪರವಾದ ಮಸೂದೆಯಾಗಿ ಇಲ್ಲಿ ತರುತ್ತಾರೆಂದು ನಮಗೆ ಒಂದು ನಿರೀಕ್ಷೆ ಇತ್ತು. ಆದರೆ ಅದು ಹಾಗೆ ಆಗಲಿಲ್ಲ. ಏಕೆಂದರೆ ಈ ದೇಶದಲ್ಲಿರತಕ್ಕಂಥ ಜನರು ಯಾರೂ ಕೂಡ ಅನ್ಯಾಯವಾಯಿತು ಎಂದು ಹೇಳಬಾರದು ಈ ದೇಶದಲ್ಲಿ ಪ್ರತಿಯೊಬ್ಬರೂ ನೆಮ್ಮದಿಯಿಂದ ಜೀವನ ಮಾಡುವುದಕ್ಕೆ ಅವಕಾಶ ಇರಬೇಕು. ನಿರ್ಗತಿಕ ಕುಟುಂಬಗಳವರಿಗೆ 2 ಎಕ್ಕರೆ ವೆಟ್ ಲ್ಯಾಂಡ್‌ಗೆ ಎಗ್ಸೆಂಪ್‌ಷನ್ ಕೊಟ್ಟಿದ್ದರೆ ಮತ್ತು 4–5 ಎಕ್ಕರೆ ಡ್ರೈ ಲ್ಯಾಂಡ್‌ಗೆ ಎಗ್ಸೆಂಪ್‌ಷನ್ ಕೊಟ್ಟಿದ್ದರೆ ಸಣ್ಣಮಟ್ಟ ನೌಕರರಾಗಿರತಕ್ಕಂಥವರು ರಿಟೈರ್ ಆದನಂತರ ಅವರ ಮಕ್ಕಳಿಗೆ ನೌಕರಿ ಸಿಕ್ಕುವ ಗ್ಯಾರಂಟಿ ಇಲ್ಲದಿದ್ದರೂ ಕೂಡ ಅವರು ನೆಮ್ಮದಿಯಿಂದ ಜೀವನ ಮಾಡುವುದಕ್ಕೆ ಅವಕಾಶವಾಗುತ್ತಿತ್ತು. ಅದನ್ನು ಇದರಲ್ಲಿ ಮಾಡಿಲ್ಲ. 'ಉಳುವವನಿಗೆ ಭೂಮಿ ಕೊಡಬೇಕು' ಎಂದು ಹೇಳತಕ್ಕಂಥಾದ್ದು ಸಾಧುವಾಗಿದೆ; ಅದನ್ನು ನಾನು ಒಪ್ಪುತ್ತೇನೆ. ಆದರೆ ನಿರ್ಗತಿಕ ಕುಟುಂಬಗಳವರಿಗೆ ಆ ಒಂದು ಅನುಕೂಲವನ್ನು ಮಾಡಿಕೊಟ್ಟಿದ್ದರೆ ಉತ್ತಮವಾಗುತ್ತಿತ್ತು. ಎಂದು ಹೇಳುತ್ತೇನೆ. ಈಗ ಅವರಿಗೆ ತಾವು ಏನು ಪರಿಹಾರದ ಹಣವನ್ನು ಕೊಡಬೇಕೆಂದಿದ್ದೀರಿ ಆ ಹಣವನ್ನು ಲಮ್‌ಸಮ್ ಆಗಿ ಕೊಟ್ಟರೆ ಅದರಿಂದ ಬೇರೆ ಬೇರೆ ಉದ್ಯೋಗಗಳಲ್ಲಿ ಅವರು ತೊಡಗುವುದಕ್ಕೆ ಅವಕಾಶವಾಗುತ್ತದೆ; ಅಥವಾ ಬೇರೆ ಕೃಷಿ ಭೂಮಿಯನ್ನು ಕೊಂಡುಕೊಂಡು ಕೃಷಿ ಮಾಡುವುದಕ್ಕೆ ಅನುಕೂಲವಾಗುತ್ತದೆ. ಇಲ್ಲದಿದ್ದರೆ ಆ ಜನಕ್ಕೆ ಕಷ್ಟವಾಗುತ್ತದೆ. ಇದರಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ಭೂಮಿ ಕಳೆದುಕೊಂಡಿರುವವರಿಗೆ ಹೆಚ್ಚು ಕಷ್ಟವಾಗುತ್ತದೆ. ನಗರದಲ್ಲಿ ಇರತಕ್ಕಂಥ ದೊಡ್ಡ ದೊಡ್ಡ ಶ್ರೀಮಂತರುಗಳು 1962ನೇ ಇಸವಿಯಲ್ಲಿ ಈ ಕಾನೂನು ಬರುತ್ತದೆಂದು ತಿಳಿದಾಗ ಮೊದಲೇ ಪ್ಲಾನ್ ಮಾಡಿ ತಮ್ಮ ನೆಂಟರಿಷ್ಟರಲ್ಲಿ ತಮ್ಮ ಜಮೀನನ್ನು ಪಾರ್ಟಿಶನ್ ಮಾಡಿ ಡಿಸ್ಟ್ರಿಬ್ಯೂಟ್ ಮಾಡಿಕೊಂಡು ಅದನ್ನು ಇವತ್ತಿನ ದಿವಸ ಅನುಭವಿಸುತ್ತಿದ್ದಾರೆ. ಆದರೆ ಹಳ್ಳಿಗಳಲ್ಲಿ ಅಜ್ಞಾನದಿಂದ ಕೂಡಿರತಕ್ಕಂಥ ಜನರು ತಮ್ಮ ಭೂಮಿಯನ್ನು ಕಳೆದುಕೊಂಡಿದ್ದಾರೆ. ಅವರಿಗೆ ಲಮ್‌ಸಮ್ ಆಗಿ ಹಣವನ್ನು ಕೊಟ್ಟರೆ ಅವರು ಬೇರೆ ಉದ್ಯೋಗಗಳಲ್ಲಿ ತೊಡಗುವುದಕ್ಕೆ ಅವಕಾಶವಾಗುತ್ತದೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಆಮೇಲೆ ನಾಲ್ಕನೆಯದಾಗಿ ಈಗ ಟ್ರಿಬ್ಯುನಲ್ ಅಸಿಸ್ಟೆಂಟ್ ಕಮೀಷನರ್ ಇದ್ದಾರೆ; ಅವರಿಗೆ ಅಡ್ಮಿನಿಸ್ಟ್ರೇಟಿವ್ ವರ್ಕ್ ಸಹ ಇದೆ;

ಇದರ ಜೊತೆಗೆ ಬೇರೆ ಬೇರೆ ಕೇಸ್‌ಗಳನ್ನೂ ಅವರು ಡೀಲ್ ಮಾಡಬೇಕಾಗಿದೆ. ಅಸಿಸ್ಟೆಂಟ್ ಕಮೀಷನರ್‌ರವರು ಅಡ್ಮಿನಿಸ್ಟ್ರೇಟಿವ್ ಪರ್ಪಸ್ ದೃಷ್ಟಿಯಿಂದ ಮೊಬೈಲ್ ಕೋರ್ಟ್ ಮುಖಾಂತರ ಹೋಬಳಿಗಳು ಮತ್ತು ಪ್ರಮುಖವಾದ ಹಳ್ಳಿಗಳಿಗೆ ಹೋಗಿ ಅಲ್ಲೇ ಕುಳಿತು ಕೇಸ್‌ಗಳನ್ನು ಡಿಸೈಡ್ ಮಾಡಿ ಅವರಿಗೆ ಭೂಮಾಲಿಕತ್ವದ ಸರ್ಟಿಫಿಕೇಟನ್ನು ಅಲ್ಲೇ ಕೊಡಬೇಕು. ಇಷ್ಟು ಮಾತುಗಳನ್ನು ಹೇಳಿ ಅವಕಾಶವನ್ನು ಕೊಟ್ಟಂತಹ ಮಾನ್ಯ ಸಭಾಪತಿಯವರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ (ಕಂದಾಯಶಾಖೆಯ ಮಂತ್ರಿಗಳು):-** ಮಾನ್ಯ ಸಭಾಪತಿಗಳೇ, ನಾನು ಜಿಲ್ಲಾಧಿಕಾರಿಗಳ ಸಮ್ಮೇಳನದಲ್ಲಿ ಭಾಗವಹಿಸಬೇಕಾದಂತಹ ಅವಶ್ಯಕತೆ ಇದ್ದುದರಿಂದ ನನ್ನ ಸಹೋದ್ಯೋಗಿಗಳಲ್ಲಿ ಯಾರಾದರು ಇರಬೇಕೆಂದು ಅವರನ್ನು ಪ್ರಾರ್ಥನೆ ಮಾಡಿಕೊಂಡಿದ್ದೆನು. ಆ ಒಂದು ಕಾರಣದಿಂದ ನಾನು ಇಲ್ಲಿ ಇರುವುದಕ್ಕೆ ಅವಕಾಶವಾಗಲಿಲ್ಲ ಆದರೆ ಮಾನ್ಯ ಸದಸ್ಯರು ಏನೇನು ಮಾತನಾಡುತ್ತಿದ್ದಾರೆ ಆ ಎಲ್ಲ ವಿವರಗಳೂ ಕೂಡ ನನ್ನ ಹತ್ತಿರ ಇದೆ. ನಾನು ಇರಲಿಲ್ಲ, ಎಂದು ಯಾರಾದರೂ ಅನ್ಯಥಾ ಭಾವನೆ ಮಾಡಬಾರದು ಎಂಬುದಾಗಿ ನಾನು ಅವರನ್ನು ಕೇಳಿಕೊಳ್ಳುತ್ತೇನೆ. ಮಾನ್ಯ ಸದಸ್ಯರು ಮಹತ್ವಪೂರ್ಣವಾಗಿ ಈ ತಿದ್ದುಪಡಿಯ ಮೇಲೆ ಭಾಗವಹಿಸಿದ್ದಾರೆ. ಹಲವಾರು ಸಲಹೆಗಳನ್ನೂ ಕೂಡ ಕೊಟ್ಟಿದ್ದಾರೆ. ಜೊತೆಗೆ ಹಲವಾರು ಶಂಕೆಗಳನ್ನೂ ಕೂಡ ವ್ಯಕ್ತಮಾಡಿದ್ದಾರೆ. ಇದರ ಬಗ್ಗೆ ನಾನು ಒಂದು ಮಾತನ್ನು ಹೇಳುವುದಾದರೆ ಮಾನ್ಯ ಸದಸ್ಯರು ಏನೊಂದು ಶಂಕೆಯನ್ನು ವ್ಯಕ್ತಮಾಡಿದ್ದಾರೆ ಅದಕ್ಕೆ ಆಧಾರವಿಲ್ಲ ಎಂಬುದಾಗಿ ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಶ್ರೀಮಾನ್ ಸುಬ್ಬಯ್ಯನವರು, ಶ್ರೀಮಾನ್ ಕುಲಕರ್ಣಿಯವರು, ಶ್ರೀಮಾನ್ ಭಗವತ್‌ರವರು ನೀವು ಗೇಣಿದಾರರಿಗೆ ಯಾವತ್ತು ಒಡೆತನವನ್ನು ಕೊಡುತ್ತೀರೆಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಸರ್ಕಾರದವರು ಪುನಃ ಭೂಮಿಯನ್ನು ತಾವೇ ತೆಗೆದುಕೊಂಡು ನಿಮ್ಮ ಹತ್ತಿರ ಇಟ್ಟುಕೊಂಡು ನೀವೇ ಅದರ ಒಡೆಯರಾಗಿರಬೇಕೆಂಬ ದೃಷ್ಟಿಯಿಂದ ಈ ಒಂದು ತಿದ್ದುಪಡಿಯನ್ನು ತಂದಿದ್ದಾರೆಂಬ ಮಾತನ್ನು ಹೇಳಿದ್ದಾರೆ, ತಾವೆಲ್ಲಾ ಖಾತಾವರದಿ ಮತ್ತು ರೆಕಾರ್ಡುಗಳನ್ನು ನೋಡಿರಬಹುದು. ಪ್ರತಿಯೊಂದು ಭೂಮಿಯು ಸರ್ಕಾರದ್ದು ಎಂಬುದಾಗಿ ಬರೆದಿರುತ್ತದೆ. ಇದನ್ನು ತಾವು ತಿಳಿದುಕೊಂಡಿರಬಹುದು, ತಿಳಿದುಕೊಂಡಿದ್ದರೆ ಬಹಳ ಸಂತೋಷ ಕರ್ನಾಟಕ ರಾಜ್ಯದಲ್ಲಿರತಕ್ಕಂಥ ಎಲ್ಲ ಭೂಮಿಯೂ ಸರ್ಕಾರದ ವಶಕ್ಕೆ ಸೇರಿರತಕ್ಕಂಥಾದ್ದು.

ಅದೆಲ್ಲಾ ಸರ್ಕಾರಕ್ಕೆ ಸೇರಿದ್ದರೆ ನಿಮ್ಮಿಂದ ಕಂದಾಯವನ್ನು ಏಕೆ ವಸೂಲು ಮಾಡುವುದಕ್ಕೆ ಹೋಗಬೇಕು? ಸರ್ಕಾರದವರು ಮಾಲೀಕರಾಗಲೇ ಬೇಕಾಗುತ್ತದೆ. ಈ ಪ್ರತಿಯೊಂದು ರಾಜ್ಯದಲ್ಲಿರತಕ್ಕಂಥ ಪ್ರತಿಯೊಂದು ಭೂಮಿಯು ಸರ್ಕಾರಕ್ಕೆ ಸೇರಿದ್ದೇ.

**ಶ್ರೀ ಆರ್. ದಯಾನಂದ ಸಾಗರ್:–** ನಿನ್ನ ಸ್ವತ್ತು ನನ್ನ ಸ್ವತ್ತೇ, ನನ್ನ ಸ್ವತ್ತೂ ನನ್ನ ಸ್ವತ್ತೇ, ಎಂಬುದಾಗಿ ಹೇಳುವ ಹಾಗಾಯಿತು.

**ಶ್ರೀ ಬಿ. ಬಸವಲಿಂಗಪ್ಪ:–** ಮಾಲೀಕರು ಮತ್ತು ಗೇಣಿದಾರರು ಈ ಇಬ್ಬರ ನಡುವೆ ಏನೊಂದು ವ್ಯವಹಾರ ಇದೆ ಅದನ್ನು ಪರಿಹಾರ ಮಾಡಬೇಕಾದರೆ ಸರ್ಕಾರದವರಲ್ಲಿ ಆ ಭೂಮಿ ಇರಲೇಬೇಕಾಗುತ್ತದೆ. ಸರ್ಕಾರದ ವಶಕ್ಕೆ ತೆಗೆದುಕೊಂಡರೆ ಯಾವ ತಕರಾರೂ ಇಲ್ಲ. ಕೋರ್ಟಿಗೆ ಯಾರೂ ಹೋಗುವುದಕ್ಕಾಗುವುದಿಲ್ಲ. ಸಾರ್ವಭೌಮತ್ವದ ಪ್ರಶ್ನೆ ಬಂದಾಗ ಭೂಮಿ ಎಲ್ಲ ಸರ್ಕಾರದ್ದೇ ಎನ್ನುತಕ್ಕಂಥದ್ದನ್ನು ಮನ್ನಣೆ ಮಾಡಿಕೊಳ್ಳಬೇಕು ಅರ್ಬನ್ ಲ್ಯಾಂಡ್ ಟ್ಯಾಕ್ಸ್ ವಿಚಾರದಲ್ಲಿ ಒಂದು ಮಾತನ್ನು ಹೇಳಿದ್ದಾರೆ. ಹಳ್ಳಿಗಾಡಿನಲ್ಲಿ ಕಂದಾಯವನ್ನು ವಸೂಲು ಮಾಡಿದ್ದಾರೆ ಆದರೆ ಭೂಮಿಯ ಸಾರ್ವಭೌಮತ್ವವನ್ನು ಅಲ್ಲಿಯ ಭೂಮಾಲೀಕರೇ ಇಟ್ಟುಕೊಂಡಿದ್ದಾರೆಂಬ ಮಾತನ್ನು ಹೇಳಿದ್ದಾರೆ. ಹಾಗೇ ಸಿಟಿ ಏರಿಯಾದಲ್ಲಿ ಅದೇ ರೀತಿಯಲ್ಲಿ ಮಾಲೀಕತ್ವವನ್ನು ತೆಗೆದುಬಿಟ್ಟು ಅವರಿಂದ ಕಂದಾಯವನ್ನು ವಸೂಲಿ ಮಾಡುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಆದರೆ ಅವರು ಕೊಟ್ಟಿಲ್ಲ ಆ ಮಾತು ಬೇರೆ, ಪುನಃ ಇದು ಸರಿಯಲ್ಲ ಎನ್ನುವ ಭಾವನೆ ಸರ್ಕಾರದ ಮುಂದೆ ಇದೆ. ಅರ್ಬನ್ ಲ್ಯಾಂಡಿಗಾಗಿಲೀ ಅಥವಾ ಗ್ರಾಮಾಂತರ ಪ್ರದೇಶದ ಲ್ಯಾಂಡಿಗಾಗಲೀ ಎಲ್ಲ ಭೂಮಿಯ ಮೇಲೂ ಸರ್ಕಾರದ ಸಾರ್ವಭೌಮತ್ವ ಇರಬೇಕೆಂಬುದಾಗಿ ಸ್ಪಷ್ಟವಾಗಿ ನಿಮಗೆಲ್ಲರಿಗೂ ತಿಳಿಸುತ್ತಿದ್ದೇನೆ ಆದ್ದರಿಂದ ಈ ಒಂದು ಆಧಾರದ ಮೇಲೆ ವ್ಯವಹಾರ ಮಾಡಬೇಕೆಂದು ನಿರ್ಣಯವನ್ನು ಮಾಡಿದ್ದೇವೆ. ಶ್ರೀ ಮಾನ್ ಕೃಷ್ಣ ಐಯ್ಯರ್‌ರವರು ಅರ್ಬನ್ ಲ್ಯಾಂಡ್ ಟ್ಯಾಕ್ಸ್ ಹಾಕುವ ಬಗ್ಗೆ ಹೇಳಿದ್ದಾರೆ, ಮಾನ್ಯ ಸದಸ್ಯರು ಹೇಳಿದ ಹಾಗೆ ಈಗಾಗಲೇ ಅದಕ್ಕೆ ಸಂಬಂಧಪಟ್ಟ ಕಾನೂನುಗಳನ್ನು ತಯಾರು ಮಾಡಿದ್ದೇವೆ. ಇದನ್ನು ಈಗಲೇ ಏಕೆ ಮಾಡಬಾರದು ಎಂಬ ಪ್ರಶ್ನೆ ಬರಬಹುದು; ಸಾರ್ವಭೌಮತ್ವದ ಆಧಾರದ ಮೇಲೆ ಅರ್ಬನ್‌ಏರಿಯಾದಲ್ಲಿ ಲ್ಯಾಂಡ್ ರೆವಿನ್ಯೂ ಕಾನೂನು ಜಾರಿಗೆ ತಂದರೆ ಅರ್ಬನ್ ಲ್ಯಾಂಡ್ ಟ್ಯಾಕ್ಸ್

ನಮಗೆ ಬೇಕಾಗಿಲ್ಲ. ಆದ್ದರಿಂದ ಅದನ್ನು ತಡವಾಗಿ ಇಟ್ಟುಕೊಂಡಿದ್ದೇವೆ. ಇಷ್ಟನ್ನು ಹೇಳಿದ ಮೇಲೆ ಮಾನ್ಯ ಸುಬ್ಬಯ್ಯನವರು ಹಾಗೂ ಮಾನ್ಯ ಶ್ರೀ ವೈ. ಎಸ್. ಪಾಟೀಲ್‌ರವರು ಈ ಒಂದುವಿವಾದಕ್ಕೆ ಆಸ್ಪದ ಕೊಡದೆ ನನ್ನ ಮಾತಿಗೆ ಮನ್ನಣೆಯನ್ನು ಕೊಡುತ್ತಾರೆಂದು ನಾನಾದರೂ ತಿಳಿದುಕೊಂಡಿದ್ದೇನೆ.

**ಶ್ರೀ ಎ.ಕೆ. ಸುಬ್ಬಯ್ಯ:–** ಜಿಲ್ಲಾಧಿಕಾರಿಗಳ ಸಮ್ಮೇಳನಕ್ಕೆ ಬೇಗ ಹೋಗಬೇಕು. ಅದಕ್ಕೆ ಸಹಕಾರ ನೀಡಬೇಕೆಂದರೆ ನಮ್ಮ ಸಹಕಾರವನ್ನು ಕೊಡೋಣ. ಆದರೆ ಮನ್ನಣೆ ಮಾಡುವುದಕ್ಕೆ ಸಾಧ್ಯವಿಲ್ಲ. ಕಂದಾಯವನ್ನು ಕೊಡುತ್ತಿದ್ದರೂ ಕೂಡ ಅದರ ಸಾರ್ವಭೌಮತ್ವ ಸರ್ಕಾರಕ್ಕೆ ಇರುತ್ತದೆಂಬುದಾಗಿ ತಾವು ಏನು ಹೇಳುತ್ತಿದ್ದೀರಿ ಅದರಂತೆ ಗೇಣಿದಾರರು ಕಂದಾಯವನ್ನು ಕೊಡುತ್ತಾರೆ, ಅವರನ್ನು ಆ ಭೂಮಿಯ ಒಡೆಯರನ್ನಾಗಿ ಮಾಡಿ ಎಂಬುದಾಗಿ ನಾವು ಹೇಳುತ್ತಿದ್ದೇವೆ.

**ಶ್ರೀ ಬಿ. ಬಸವಲಿಂಗಪ್ಪ:–** ಸಬ್‌ಸಿಡಿ ರೈಟ್ಸ್‌ನ ಹಕ್ಕನ್ನು ಇಟ್ಟುಕೊಂಡಿರತಕ್ಕಂಥ ಜನ ಹಾಗೂ ಗೇಣಿದಾರರ ನಡುವೆ ಇರತಕ್ಕಂಥ ವ್ಯವಹಾರವನ್ನು ತೀರ್ಮಾನ ಮಾಡಬೇಕಾದರೆ ಅಂತಹ ಭೂಮಿಯನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಬೇಕು. ಮೊದಲು ಸರ್ಕಾರದ ವಶಕ್ಕೆ ಆ ಭೂಮಿಯನ್ನು ತೆಗೆದುಕೊಂಡು ನಂತರ ವ್ಯವಹಾರ ಮಾಡಬೇಕಾಗುತ್ತದೆ.

**ಶ್ರೀ ಎ.ಕೆ. ಸುಬ್ಬಯ್ಯ:–** ಸರ್ಕಾರಕ್ಕೆ ಗೇಣಿ ಕೊಡಬೇಕಾಗುತ್ತದೆ.

**ಶ್ರೀ ಬಿ. ಬಸವಲಿಂಗಪ್ಪ:–** ಕೊಡುವುದಿಲ್ಲ.

**ಶ್ರೀ ಎ.ಕೆ. ಸುಬ್ಬಯ್ಯ:–** 15–20 ವರ್ಷದಿಂದ ಅವನು ಕೊಡಬೇಕಾಗುತ್ತದೆ. ಆಮೇಲೆ ಅವರಿಗ ಒಡೆತನ ಬರುತ್ತದೆ.

**ಶ್ರೀ ವೈ ಎಸ್. ಪಾಟೀಲ್:–** ಆತನಿಗೆ ಜಮೀನನ್ನು ಕೊಡದೇ ಆತನಿಂದ ಗೇಣಿಯನ್ನು ವಸೂಲು ಮಾಡುವಂತಹ ಪ್ರಯತ್ನ ಕೂಡ ನಡೆದಿದೆ.

**ಶ್ರೀ ಬಿ. ಬಸವಲಿಂಗಪ್ಪ:–** ವಸೂಲು ಮಾಡುವುದಕ್ಕೆ ಕಾನೂನಿನಲ್ಲಿ ಅವಕಾಶ ಇದೆ. ಭೂ ಮಾಲೀಕರು ಯಾರಾದರೂ ಅರ್ಜಿ ಹಾಕಿದರೆ ವಸೂಲು ಮಾಡುವುದಕ್ಕೆ ಎಲ್ಲಾ ಅವಕಾಶಗಳು ಇವೆ ಈ ರೀತಿಯ ಅವಕಾಶಗಳು

ಇದ್ದರೂ ಕೂಡ ಪುನಃ ಪುನಃ ನನ್ನನ್ನು ಏಕೆ ಕೇಳುತ್ತೀರಿ? ಭೂ ಮಾಲೀಕರಿಗೆ ಪರಿಹಾರ ಧನ ಕೊಡುತ್ತೇವೆ. ಸರ್ಕಾರಕ್ಕೆ ಕಳೆದ 20 ವರ್ಷಗಳಿಂದ ಏನೊಂದು ಅರಿಯರ್ಸ್ ಲ್ಯಾಂಡ್ ರೆವಿನ್ಯೂ ಕೊಡಬೇಕಾಗಿತ್ತು: ಅವುಗಳನ್ನು ಕಂತುಗಳ ರೂಪದಲ್ಲಿ ವಸೂಲಿ ಮಾಡಿ ಇವರಿಗೆ ಪರಿಹಾರ ಧನವನ್ನು ಕೊಡುತ್ತೇವೆ.

**SRI A. K. SUBBIAH:-** Land rent should be paid to the Government: The member the land lests in the Government, the owner has got right only for compensat or.

**ಶ್ರೀ ಬಿ. ಬಸವಲಿಂಗಪ್ಪ:–** ತಾವು ಈಗ ಹೇಳುತ್ತಿರತಕ್ಕಂಥ ಪರಿಹಾರದ ಬಗೆ ಅರಿಯರ್ಸ್ ಲ್ಯಾಂಡ್ ರೆವಿನ್ಯೂ ಅನ್ನು ವಸೂಲಿ ಮಾಡಿ ಇವರಿಗೆ ಕೊಡತಕ್ಕಂಥ ಅವಕಾಶ ಇದೆ. ತಾವು ಯಾರಾದರೂ ತಹಸೀಲ್ದಾರ್‌ರವರಿಗೆ ಅರ್ಜಿ ಕೊಟ್ಟರೆ ಅವರಿಗೆ ವಸೂಲಿ ಮಾಡಿ ಕೊಡತಕ್ಕಂಥಾದ್ದು ಇದೆ.

**ಶ್ರೀ ಎ.ಕೆ. ಸುಬ್ಬಯ್ಯ:–** ಭೂಕಂದಾಯವನ್ನು ಸರ್ಕಾರಕ್ಕೆ ಪಾವತಿಸಬೇಕು ಮತ್ತು ಭೂಮಿಯ ಹಕ್ಕು ಸರ್ಕಾರದ್ದಾಗಿರುತ್ತದೆ. ಆದರೆ ಸರ್ಕಾರವು ಭೂ ಒಡೆಯರಿಗೆ ಅದನ್ನು ಬಳಸಿಕೊಳ್ಳುವ ಹಕ್ಕು ಮಾತ್ರ ಕೊಟ್ಟಿರುತ್ತದೆ.

**ಶ್ರೀ ಆರ್.ಎಸ್. ಭಾಗವತ್:–** 1974 ರ ನಂತರ ಮಾಲೀಕರು ಪರಿಹಾರಕೊಡಲಾಗಿದೆ ಆದರೆ ಬಾಡಿಗೆಯೇ ಇಲ್ಲ

**ಶ್ರೀ ಬಿ.ಬವಲಿಂಗಪ್ಪ:–** 1961ರ ಭೂ ಸುಧಾರಣ ಕಾಯ್ದೆಯ ಸಿಕ್ಷನ್ 42 ಏನನ್ನು ಹೇಳುತ್ತದೆಂದರೆ

42 ಬಾಡಿಗೆ ವಾಪಸ್ ಪಡೆಯುವ ನಿಯಮಗಳು:– 1) ಈ ಕಾನೂನಿನಲ್ಲಿ ಹಾಗೂ ಒಪ್ಪಂದದಲ್ಲಿ ಕಾಲಕ್ಕೆ ತಕ್ಕಂತಹ ಸ್ಪಷ್ಟತೆ ಇಲ್ಲ ಆದರೆ ನ್ಯಾಯಾಂಗ ಸುಳ್ಳನ್ನು ಹೇಳಬಹುದು ಇನ್ನೇನು ಹೆಚ್ಚಿನ ಅವಶ್ಯಕವಾದ ಮಾಹಿತಿಗಳು ಇರುವುದಿಲ್ಲ.

ಆಮೇಲೆ ಮಾನ್ಯ ಸುಬ್ಬಯ್ಯನವರು ಅವಧಿ ಜಾಸ್ತಿ ಮಾಡಿದ್ದು ಸರಿಯಲ್ಲವೆಂದು ಹೇಳಿದ್ದಾರೆ. ಇದರಿಂದ ಬೇಕಾದಷ್ಟು ಲಿಟಿಗೇಷನ್‌ಗಳಿಗೆ ಅವಕಾಶವಾಗುತ್ತದೆಂದು ಹೇಳಿದ್ದಾರೆ. ಇದಕ್ಕೆ ನಾನು ಅವರಿಗೆ ಸಮಜಾಯಿಷಿ

ಕೊಡಬೇಕು. ಇನಾಂ ಅಬಾಲಿಷನ್ ಆಕ್ಟ್ ಪ್ರಕಾರ 40 ಸಾವಿರ ಟೆನೆನ್ಸಿ ಕೇಸ್‌ಗಳಿವೆ. ಅವು ಇನ್ನೂ ಫೈನಲ್ ಆಗಿಲ್ಲ. ಈ ಕೇಸ್‌ಗಳನ್ನು ಸಹ ಭೂನ್ಯಾಯ ಮಂಡಲಿಯವರೇ ತೀರ್ಮಾನ ಮಾಡಬೇಕೆಂದು ಇದರಲ್ಲಿ ಅವಕಾಶ ಮಾಡಿಕೊಟ್ಟಿದ್ದೇವೆ. ಇಂತಹ ಜಮೀನುಗಳಲ್ಲಿ ವ್ಯವಸಾಯ ಮಾಡುತ್ತಿದ್ದ ಗೇಣಿದಾರರು ಇನ್ನೂ ಅರ್ಜಿ ಹಾಕಿಲ್ಲ. ಇಂತಹವರಿಗೆ ಅರ್ಜಿ ಹಾಕಿಕೊಳ್ಳಲು ಇಲ್ಲಿ ಅವಕಾಶ ಮಾಡಿಕೊಡಲಾಗಿದೆ. ಸೆಕ್ಷನ್ 38ರ ಪ್ರಕಾರ ಕೃಷಿ ಕಾರ್ಮಿಕರಿಗೆ ಡ್ವೆಲಿಂಗ್ ಹೌಸಸನ್ನು ಕೊಡಬೇಕೆಂದು ಇಲ್ಲಿ ತೀರ್ಮಾನ ಮಾಡಿದ್ದೇವೆ. ಇಂತಹವರು 27 ಲಕ್ಷ ಜನರಿದ್ದಾರೆ. ಈ ಜನರಿಗೆ ಈ ಒಂದು ಅನುಕೂಲ ಮಾಡಿಕೊಡುವುದು ನ್ಯಾಯವೋ ಅಥವಾ ಅಲ್ಲವೊ ಎಂಬುದನ್ನು ಹೇಳಲಿ?

**ಶ್ರೀ ಎ. ಕೆ. ಸುಬ್ಬಯ್ಯ:–** ಅವಧಿ ವಿಸ್ತರಣೆ ಮಾಡುವುದನ್ನು ಈ ಎರಡಕ್ಕೆ ಮಾತ್ರ ಲಿಮಿಟ್ ಮಾಡಿ ಎಂದು ನಾನು ಹೇಳುವುದು?

**ಶ್ರೀ ಬಿ. ಬಸವಲಿಂಗಪ್ಪ:–** ಗೇಣಿದಾರರರಿಗೆ ಅರ್ಜಿಗಳನ್ನು ಹಾಕಿಕೊಳ್ಳಲು ಸಾಕಷ್ಟು ಕಾಲಾವಕಾಶ ಕೊಟ್ಟಿಲ್ಲವೆಂದು ಹೈಕೋರ್ಟಿನವರು ಕೆಲವು ಕೇಸುಗಳನ್ನು ವಜಾ ಮಾಡಿದ್ದಾರೆ. ಇಂತಹ ಸಾವಿರಾರು ಅರ್ಜಿಗಳಿವೆ. ಅಂತಹವರಿಗೆ ಸಾಕಷ್ಟು ಸಮಯ ಕೊಡಬೇಕಾಗುತ್ತದೆ. ಹಲವಾರು ಸಂದರ್ಭಗಳಲ್ಲಿ ಕೆಲವು ಭೂ ಮಾಲೀಕರು ತಮ್ಮಲ್ಲಿ ಕೆಲಸ ಮಾಡುತ್ತಿದ್ದ ಗೇಣಿದಾರರಿಗೆ ಅರ್ಜಿಗಳನ್ನು ಹಾಕಿಕೊಳ್ಳಲು ಇವೊತ್ತಿನವರೆಗೂ ಅವಕಾಶ ಮಾಡಿಕೊಟ್ಟಿಲ್ಲ. ಅವರನ್ನು ಹೆದರಿಕೆಯಲ್ಲಿಯೇ ಇಟ್ಟಿದ್ದಾರೆ. ಇಂತಹ ನೂರಾರು ಕೇಸ್‌ಗಳಿರುವುದು ನಮ್ಮ ಗಮನಕ್ಕೆ ಬಂದಿದೆ. ಇಂತಹವರಿಗೂ ಅರ್ಜಿ ಹಾಕಿಕೊಳ್ಳಲು ನಾವು ಕಾಲಾವಕಾಶ ಕೊಡಬೇಕೋ ಅಥವಾ ಬೇಡವೋ ಎಂಬುದನ್ನು ತಾವೇ ಹೇಳಿ?

**ಶ್ರೀ ಎ.ಕೆ. ಸುಬ್ಬಯ್ಯ:–** ತಾವು ಆ ರೀತಿ ಹೇಳಿದರೆ ನಾವು ಸರ್ಕಾರದ ಮೇಲೆ ದೊಡ್ಡ ಆರೋಪ ಮಾಡಬೇಕಾಗುತ್ತದೆ. ಈ ಭೂ ಮಾಲೀಕರೇನೂ ಸರ್ಕಾರಕ್ಕಿಂತ ದೊಡ್ಡವರೇನಲ್ಲ. ಆದರೂ ಅವರು ಗೇಣಿದಾರರಿಗೆ ಅರ್ಜಿ ಹಾಕಲು ಅವಕಾಶ ಮಾಡಿಕೊಟ್ಟಿಲ್ಲವೆಂದು ತಾವು ಹೇಳುವುದಾದರೆ, ನೀವೇ ಭೂ ಮಾಲೀಕರಿಗೆ ರಕ್ಷಣೆ ಕೊಟ್ಟಿದೀರಿ ಎಂದು ಹೇಳಬೇಕಾಗುತ್ತದೆ. ಅನೇಕ ಸಲ ಅರ್ಜಿ ಹಾಕಿಕೊಳ್ಳುವುದಕ್ಕೆ ಸಮಯವನ್ನು ವಿಸ್ತರಣೆ ಮಾಡಲಾಗಿದೆ. ಮತ್ತೆ ವಿಸ್ತರಣೆ ಮಾಡುವುದು ಎಂದರೆ, ಇದು ಎಲ್ಲಿಯವರೆಗೆ ಮುಂದುವರೆಯುತ್ತದೆ? ಇದನ್ನೆಲ್ಲಾ ನಾವು ಸಮರ್ಥನೆ ಮಾಡುವುದಕ್ಕಾಗುವುದಿಲ್ಲ. ಬೇಕಾದರೆ ಇನಾಂ

ಜಮೀನುಗಳ ಬಗ್ಗೆ ಅರ್ಜಿ ಹಾಕಿಕೊಳ್ಳಲು ಮತ್ತು ಹೌಸ್ ಸೈಟ್‌ನವರಿಗೆ ಅರ್ಜಿ ಹಾಕಿಕೊಳ್ಳಲು ಸಮಯ ಕೊಡಿ. ಜೊತೆಗೆ ಹೈಕೋರ್ಟಿನವರು ಟೆಕ್ನಿಕಲ್ ಗ್ರೌಂಡ್ಸ್ ಮೇಲೆ ಕೆಲವು ಕೇಸ್‌ಗಳನ್ನು ಏನು ತಳ್ಳಿ ಹಾಕಿದ್ದಾರೆ, ಅಂತಹ ಕೇಸ್‌ಗಳಿಗೆ ಮಾತ್ರ ಇದನ್ನು ವಿಸ್ತರಣೆ ಮಾಡಿ. ಆದರೆ ಹೊಸದಾಗಿ ಅರ್ಜಿ ಹಾಕಿಕೊಳ್ಳುವವರಿಗೂ ಸಹ 3 ತಿಂಗಳ ಸಮಯ ಕೊಡುವುದು ನ್ಯಾಯವಲ್ಲ, ಇದು ತುಂಬಾ ಅನ್ಯಾಯವೆಂದು ಹೇಳಬೇಕಾಗುತ್ತದೆ.

**ಶ್ರೀ ಬಿ. ಬಸವಲಿಂಗಪ್ಪ:–** ವಿಲೇಜ್ ಆಫಿಸಸ್ ಅಬಾಲಿಷನ್ ಆಕ್ಟ್ ಪ್ರಕಾರ ಯಾರು ಯಾರು ಸುಪೀರಿಯರ್ ಲ್ಯಾಂಡ್ ಹೋಲ್ಡರ್ಸ್ ಇದ್ದರು. ಅಂತಹವರ ಜಮೀನುಗಳನ್ನು ಸಹ ಈ ಆಕ್ಟ್ ಕೆಳಗೆ ತರಬೇಕೆಂದುಕೊಂಡು ಇಲ್ಲಿ ತಿದ್ದುಪಡಿ ಮಾಡಲಾಗಿದೆ. ಆದಕಾರಣ ಈ ಜಮಿಾನುಗಳಲ್ಲಿ ವ್ಯವಸಾಯ ಮಾಡುತ್ತಿದ್ದ ಗೇಣಿದಾರರಿಗೂ ಅರ್ಜಿ ಹಾಕಿಕೊಳ್ಳಲು ಅವಧಿಯನ್ನು ಜಾಸ್ತಿ ಮಾಡಬೇಕಾಗುತ್ತದೆ.

**ಶ್ರೀ ವೈ. ಎಸ್. ಪಾಟೀಲ್:–** ವಿಲೇಜ್ ಆಫೀಸಸ್ ಅಬಾಲಿಷನ್ ಆಕ್ಟ್ ಪ್ರಕಾರ ಕುಲಕರ್ಣಿಗಳು, ಕರಣಿಕರು, ಶಾನುಭೋಗರು, ಇಂತಹವರ ಬಳಿ ಇದ್ದಂಥ ಜಮೀನುಗಳು ಈಗಾಗಲೇ ಹೊರಟು ಹೋಗಿವೆ, ಅವರ ಹತ್ತಿರ ಇಂದು ಜಮೀನು ಇಲ್ಲ. ಆದಕಾರಣ ಅವಧಿ ವಿಸ್ತರಣೆ ಮಾಡುವ ಪ್ರಶ್ನೆ ಎಲ್ಲಿ ಬರುತ್ತದೆ?

**ಶ್ರೀ ಬಿ. ಬಸವಲಿಂಗಪ್ಪ:–** ತಾವು ಎಲ್ಲವನ್ನೂ ಕಳೆದುಕೊಂಡು ಹೆಸರು ಮಾತ್ರ ಇಟ್ಟುಕೊಂಡಿದ್ದೀರಿ. ಈ ಒಂದು ಸನ್ನಿವೇಶದಲ್ಲಿ ಅವಧಿ ವಿಸ್ತರಣೆ ಮಾಡುವುದು ಅವಶ್ಯಕವೆಂದು ತಿಳಿದು ಮಾಡಿದ್ದೇವೆ. ಅನ್ಯತ ಭಾವನೆಯಿಂದ ಮಾಡಿಲ್ಲ. ಹೈಕೋರ್ಟಿನ ಮುಂದೆ ಹೋದಂಥ ಕೇಸ್‌ಗಳ ಬಗ್ಗೆ ಹಾಗೂ ಇಲ್ಲಿಯವರೆಗೆ ಅರ್ಜಿ ಹಾಕಿಕೊಳ್ಳಲು ಭೂಮಾಲೀಕರು ಏನು ಪ್ರತಿಬಂಧಕವನ್ನು ಹಾಕಿದ್ದರೋ, ಅಂತಹ ಗೇಣಿದಾರರಿಗೆ ಅರ್ಜಿ ಹಾಕಿಕೊಳ್ಳಲು ಇಲ್ಲಿ ಅವಧಿಯನ್ನು ವಿಸ್ತರಣೆ ಮಾಡಲಾಗಿದೆ. ಒಟ್ಟಿನಲ್ಲಿ ನಿರ್ಗತಿಕರು ಹಾಗೂ ಬಡವರಿಗೆ ಸಹಾಯ ಮಾಡುವ ದೃಷ್ಟಿಯಿಂದ ಈ ರೀತಿ ಮಾಡಲಾಗಿದೆ. 38ನೇ ಸೆಕ್ಷನ್ ಪ್ರಕಾರ ಕೃಷಿ ಕಾರ್ಮಿಕರು ಕೃಷಿ ಭೂಮಿಯಲ್ಲಿ ಕಟ್ಟಿರತಕ್ಕಂಥ ಮನೆ ಹಾಗೂ ಆ ಮನೆಯ ಸುತ್ತ ಮುತ್ತ ಇರತಕ್ಕಂಥ ಜಾಗವನ್ನು ಅಂದರೆ 5 ಸೆ.ಮೀ ಮೀರದಂತೆ ಜಾಗವನ್ನು ಅವರಿಗೇ ಕೊಡಬೇಕೆಂದು ಇಲ್ಲಿ ತಿದ್ದುಪಡಿಯನ್ನು ತಂದಿದ್ದೇವೆ. ಇದನ್ನು ಮಾನ್ಯ

ಸುಬ್ಬಯ್ಯನವರು ಸಹ ಒಪ್ಪುತ್ತಾರೆಂದು ನಾನು ತಿಳಿದಿದ್ದೇನೆ. ಲ್ಯಾಂಡ್ ಅಂದರೆ ಏನು ಎಂಬ ಬಗ್ಗೆ ಅವರು ವ್ಯಾಖ್ಯಾನ ಮಾಡಿದ್ದಾರೆ. All land where he is cultivating ಅಂದರೆ ಅದರಲ್ಲಿ ಫಾರಂ ಹೌಸ್ ಸಹ ಬರುವುದಿಲ್ಲವೇ ಎಂದು ನಾನು ಕೇಳುತ್ತೇನೆ? ಯಾರು ಜಮೀನುಗಳಲ್ಲಿ ಮನೆ ಕಟ್ಟಿಕೊಂಡಿರುತ್ತಾರೆ, ಅಂತಹವರಿಗೆ ಮಾತ್ರ ಇದು ಅನ್ವಯವಾಗುತ್ತದೆ. ಆದರೆ ನಾನ್ ಅಗ್ರಿಕಲ್ಚರಲ್ ಲ್ಯಾಂಡ್‌ನಲ್ಲಿ ಯಾರಾದರು ಮನೆ ಕಟ್ಟಿಕೊಂಡಿದ್ದರೆ, ಅಂತಹವರಿಗೆ ಇದು ಅನ್ವಯವಾಗುವುದಿಲ್ಲ. ಆದಕಾರಣ ಮಾನ್ಯ ಸುಬ್ಬಯ್ಯನವರು ಇದಕ್ಕೆ ಬೇರೆ ರೀತಿಯ ಅರ್ಥ ಮಾಡುವುದು ಸರಿಯಲ್ಲ. ಇಲ್ಲಿ ನಾವು ತಂದಿರುವ ಕೆಲವು ತಿದ್ದುಪಡಿಗಳ ಬಗ್ಗೆ ಎಕ್ಸ್‌ಪ್ಲನೇಟರಿ ನೋಟ್‌ನಲ್ಲಿ ಏನೂ ಹೇಳಿಲ್ಲವೆಂದು ಮಾನ್ಯ ಸುಬ್ಬಯ್ಯನವರು ಹೇಳಿದ್ದಾರೆ. ನಾನು ಮೊದಲೇ ಸೂಚನೆ ಮಾಡಿದಂಥ ತಿದ್ದುಪಡಿಗಳ ಬಗ್ಗೆ ಎಕ್ಸ್‌ಪ್ಲನೇಟರಿನೋಟಿನಲ್ಲಿ ಹೇಳಲಾಗಿದೆ. ಆದರೆ ಅನಂತರ 10–15 ತಿದ್ದುಪಡಿಗಳನ್ನು ಜಾಸ್ತಿ ಮಾಡಲಾಯಿತು. ಈ ಹೊಸ ತಿದ್ದುಪಡಿಗಳ ಬಗ್ಗೆ ಮಾತ್ರ ಹೇಳಿಲ್ಲ. ಒಂದು ಸಲ ತಿದ್ದುಪಡಿ ಮಾಡಿದ ಮೇಲೆ ಅದನ್ನು ಬದಲಾವಣೆ ಮಾಡಬಾರದೆಂದು ತಾವು ಕಟ್ಟಾಜ್ಞೆ ಮಾಡುವುದಾದರೆ, ಮಾನ್ಯ ಸದಸ್ಯರು ಕೊಟ್ಟ ಅಭಿಪ್ರಾಯಗಳಿಗೆ ನಾವು ಮನ್ನಣೆ ಕೊಡುವುದಕ್ಕೇ ಸಾಧ್ಯವಾಗುವುದಿಲ್ಲ. ಇಲ್ಲಿ ಕೆಳಮನೆಯಲ್ಲಿ ಕೆಲವು ಮಾನ್ಯ ಸದಸ್ಯರು ಕೊಟ್ಟ ಅಭಿಪ್ರಾಯಗಳ ಆಧಾರದ ಮೇಲೆ ಹೊಸದಾಗಿ ಕೆಲವು ತಿದ್ದುಪಡಿಗಳನ್ನು ಇಲ್ಲಿ ಸೂಚಿಸಲಾಗಿದೆ. ಆದಕಾರಣ ದಯಮಾಡಿ ಇದಕ್ಕೆ ಒಪ್ಪಿಗೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ಭೂ ನ್ಯಾಯಮಂಡಲಿಗಳಲ್ಲಿ ವಾದ ಮಾಡಲು ಲಾಯರ್‌ಗಳಿಗೆ ಅವಕಾಶ ಮಾಡಿಕೊಡಿ ಎಂದು ಮಾನ್ಯ ಗುಂಡಯ್ಯ ಶೆಟ್ಟರು ಕೇಳಿದ್ದಾರೆ.

**ಶ್ರೀ ಗುಂಡಯ್ಯ ಶೆಟ್ಟಿ**:– ಆರ್ಗ್ಯುಮೆಂಟಿಗೆ ಅವಕಾಶ ಮಾಡಿಕೊಡಿ ಎಂದು ಕೇಳಿದ್ದೇನೆ.

**ಶ್ರೀ ಬಿ. ಬಸವಲಿಂಗಪ್ಪ**:– ಲಾಯರ್‌ಗಳು ಈಗಿರತಕ್ಕಂಥ ಕೋರ್ಟುಗಳಿಗೆ ಹೋಗಿ ಕೆಲಸ ಮಾಡಿದರೆ, ಕಸವತ್ತು ಮಾಡಿದರೆ ಸಾಕು ಎಂದು ಕಾಣುತ್ತದೆ. ಇಂತಹ ಬಡವರ ಕೋರ್ಟುಗಳಲ್ಲಿ ಅವರು ಇರುವುದು ಬೇಡ ಎಂದು ಹೇಳುತ್ತೇನೆ. ಏನಾದರು ಲಾಯರ್‌ಗಳಿಗೆ ಅಲ್ಲಿ ವಾದ ಮಾಡಲು ಅವಕಾಶ

ಮಾಡಿಕೊಟ್ಟರೆ ಅವರು ಗೇಣಿದಾರರನ್ನು ಕೆಡಿಸಿಬಿಡುತ್ತಾರೆ. ಈಗ 7 ಲಕ್ಷ ಚಿಲ್ಲರೆ ಬಂದಂಥ ಕೇಸ್‌ಗಳ ಪೈಕಿ 3 ಲಕ್ಷ 60 ಸಾವಿರದಷ್ಟು ಕೇಸ್‌ಗಳು ಫೈನಲ್ ಆಗಿವೆ. ಹೈಕೋರ್ಟಿನ ಮುಂದೆ 10–15 ಸಾವಿರದಷ್ಟು ಕೇಸ್‌ಗಳು ಹೋಗಿರಬಹುದು. ಅಂದರೆ ಇಲ್ಲಿ ಮೂರುವರೆ ಲಕ್ಷದಷ್ಟು ಅರ್ಜಿಗಳನ್ನು ನ್ಯಾಯದಿಂದ ಧರ್ಮದಿಂದ ತೀರ್ಮಾನ ಮಾಡಿದ್ದಾರೆಂದು ಅರ್ಥವಾಗುವುದಿಲ್ಲವೇ? ಇಂತಹ ಕಡೆಗಳಲ್ಲಿ ಲಾಯರ್‌ಗಳು ಏತಕ್ಕೆ ಬೇಕು? ಅವರೇನಾದರು ಇಲ್ಲಿಗೆ ಬಂದರೆ ಕೇಸ್‌ಗಳು ಜಾಗ್ರತೆ ತೀರ್ಮಾನವಾಗುವುದಿಲ್ಲ. ಕೌಂಟರ್ ಅಫಿಡವಿಟ್ ಹಾಕಿ ಕೇಸ್‌ಗಳನ್ನು ವಿನಾಕಾರಣ ಮುಂದುವರಿಸುತ್ತಾರೆ. ನಂತರ ಅವು ಯಾವಾಗ ತೀರ್ಮಾನವಾಗುತ್ತದೆಂದು ಹೇಳುವುದಕ್ಕಾಗುವುದಿಲ್ಲ ಆದಕಾರಣ ಈ ಲಾಯರ್‌ಗಳ ಸಹವಾಸ ಈ ಪೀಪಲ್ಸ್ ಕೋರ್ಟಿಗೆ ಬೇಡ ಎಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ. ನಾನು ಸಹ ಲಾಯರ್ ಆಗಿದ್ದೇನೆ. ನನ್ನ ಒಂದು ಅನುಭವದಿಂದ ಈ ಮಾತನ್ನು ಹೇಳುತ್ತಿದ್ದೇನೆ. ಈ ಪೀಪಲ್ಸ್ ಕೋರ್ಟುಗಳಿಗೆ ಲಾಯರ್ಸ್ ಕುಲದ ಸಹವಾಸವೇ ಬೇಡ ಎಂದು ಹೇಳುತ್ತೇನೆ.

ಇನ್ನು ಮಾನ್ಯ ಭಾಗವತ್ ಅವರು ರೆವ್ಯೂ ಕೋರ್ಟು ಬೇಡ ಎಂದು ಹೇಳಿದ್ದಾರೆ. ಆದರೆ ಇದಕ್ಕೆ ಅವಕಾಶ ಇರುವುದು ಸರಿ ಎಂದು ಮಾನ್ಯ ಸುಬ್ಬಯ್ಯನವರು ಹೇಳಿದ್ದಾರೆ. ಇಲ್ಲಿ ನಾವು ಎಲ್ಲ ಟೆನೆನ್ಸಿ ಕೇಸ್‌ಗಳಿಗೂ ಇದನ್ನು ಅನ್ವಯ ಮಾಡುತ್ತಿಲ್ಲ. ಮತ್ತು ಎಲ್ಲ ಗೇಣಿದಾರರ ಅರ್ಜಿಗಳನ್ನು ಪುನರ್ ಪರಿಶೀಲನೆ ಮಾಡುತ್ತಿಲ್ಲ. ಎಂತಹ ಕೇಸ್‌ಗಳಲ್ಲಿ ರೆವ್ಯೂ ಮಾಡಲು ಅವಕಾಶ ಮಾಡಿಕೊಡಲಾಗಿದೆ. ಎಂದರೆ, ಯಾರು ಯಾರಿಗೆ ಹೆಚ್ಚುವರಿ ಜಮೀನು ಇರುತ್ತದೆ, ಅಂತಹವರು ಈ ಒಂದು ಕಾಯಿದೆಯನ್ನು ಉಲ್ಲಂಘನೆ ಮಾಡಿ, ಇದಕ್ಕೆ ತದ್ವಿರುದ್ಧವಾಗಿ ನಡೆದುಕೊಂಡು, ಸರ್ಕಾರಕ್ಕೆ ಮೋಸ ಮಾಡಬೇಕು ಎಂದುಕೊಂಡು, ತಮ್ಮಲ್ಲಿರುವ ಹೆಚ್ಚುವರಿ ಜಮೀನೆಲ್ಲವನ್ನೂ ಸಹ ತಮ್ಮ ಸಂಬಂಧಿಗಳ ಹೆಸರಿನಲ್ಲಿ ಏನಾದರೂ ಇಟ್ಟುಕೊಂಡಿದ್ದರೆ, ಅಂತಹ ಜಮೀನುಗಳ ವಿವರಗಳನ್ನು ಪುನರ್‌ಪರಿಶೀಲನೆ ಮಾಡಿ, ಹೆಚ್ಚುವರಿ ಜಮೀನನ್ನು ಅವರಿಂದ ಕಿತ್ತುಕೊಳ್ಳುವ ಸಲುವಾಗಿ ಇಲ್ಲಿ ರೆವ್ಯೂಮಾಡಲು ಅವಕಾಶ ಮಾಡಿಕೊಡಲಾಗಿದೆ. ಅಷ್ಟೇ ಹೊರತು ಬೇರೆ ಉದ್ದೇಶದಿಂದ ಇದನ್ನು ಮಾಡಿಲ್ಲ. ಇಂತಹ ಕೇಸ್‌ಗಳು ಉತ್ತರ ಭಾಗದಲ್ಲಿ ಇವೆ. ಆದರೆ ದಕ್ಷಿಣ ಭಾಗದಲ್ಲಿ ಇಲ್ಲ. ಮಾನ್ಯ ಭಾಗವತ್ ಅವರ ಜೊತೆಗೆ, ಮಾನ್ಯ ಕರಿಯಪ್ಪಗೌಡರು, ಮಾನ್ಯ ನಜೀರ್‌ಸಾಬ್ ಅವರು ಸಹ ಇದಕ್ಕೆ ಅವಕಾಶ ಕೊಡಬಾರದೆಂದು ವಾದ ಮಾಡಿದ್ದಾರೆ. ಆದರೆ ಅವರ ವಾದ ಸರಿಯಲ್ಲ. ಏಕೆಂದರೆ ಇದು ಎಲ್ಲರಿಗೂ ಅನ್ವಯವಾಗುವುದಿಲ್ಲ. ಮುಖ್ಯವಾಗಿ

ಇದು ಗುಂಡ್ಲುಪೇಟೆ ತಾಲ್ಲೂಕ್ಕಿಗಾಗಲೀ ಹುಣಸೂರು ತಾಲ್ಲೂಕ್ಕಿಗಾಗಲೀ ಅನ್ವಯವಾಗುವುದಿಲ್ಲ. ಈ ಭಾಗದಲ್ಲಿ ಒಬ್ಬರು 54 ಎಕರೆಯವರೆಗೆ ಜಮೀನನ್ನು ಇಟ್ಟುಕೊಳ್ಳಲು ಅವಕಾಶವಿದೆ. ಇದರ ಜೊತೆಗೆ ವಯಸ್ಕರಾದಂಥ ಮಕ್ಕಳು ಅವರಿಗೆ ಏನಾದರು ಇದ್ದರೆ....

**ಶ್ರೀ ಅಬ್ದುಲ್ ನಜೀರ್ ಸಾಬ್:-** ಇಲ್ಲಿ ಸುವೋಮೋಟೋ ಎಂಬ ಪದವನ್ನು ಉಪಯೋಗ ಮಾಡಿದ್ದೀರಿ. ಇದರಿಂದ ಜನರಿಗೆ ಅನ್ಯಾಯವಾಗಬಹುದೆಂಬ ಕಾರಣದಿಂದ ನಾನು ಹೇಳಿದ್ದು. ಇಲ್ಲಿ ತಮ್ಮ ಉದ್ದೇಶ ಸರಿ ಇರಬಹುದು; ಆದರೆ....

**ಶ್ರೀ ಬಿ. ಬಸವಲಿಂಗಪ್ಪ:-** ಇದು ತಮಗೇನು ಅನ್ವಯವಾಗುವುದಿಲ್ಲ.

ಈಗ ಒಂದು ಮಿತಿ ಅಂದರೆ ಸೀಲಿಂಗ್ ಲಿಮಿಟ್‌ನಲ್ಲಿ ವಯಸ್ಕರ ಮಕ್ಕಳು ಏನು ಇದ್ದಾರೆ ಅವರಿಗೆ ಎಷ್ಟು ಕೊಡಬೇಕು ಅವರಿಗೆ ಅಷ್ಟು ಕೊಟ್ಟುಬಿಟ್ಟು ಯಾರು ಯಾರು ಆಳುಗಳು ಇದ್ದಾರೆ ಅವರ ಹೆಸರಿನಲ್ಲಿಯೂ ಭೂಮಾಲೀಕರು ಜಮೀನುಗಳನ್ನು ಇಟ್ಟುಕೊಂಡಿದ್ದಾರೆ. ಇದರ ಬಗ್ಗೆ ಜನರು ನಮ್ಮನ್ನು ನೋಡಿ ಅಪಹಾಸ್ಯ ಮಾಡುವ ಹಾಗೆ ಆಗಿದೆ ಆದ್ದರಿಂದ ಇದನ್ನು ಬಗೆಹರಿಸುವ ಸಲುವಾಗಿ ಮತ್ತೆ ತಿದ್ದುಪಡಿ ಮಸೂದೆಯನ್ನು ತರಬೇಕಾಯಿತು.

**SRI A. K. SUBBIAH:-** Suo-moto means that pertains to the order passed under Sec. 67 of the Act.

**ಶ್ರೀ ಬಿ. ಬಸವಲಿಂಗಪ್ಪ:-** ಮಾನ್ಯ ಸುಬ್ಬಯ್ಯನವರು ಅದಕ್ಕೆ ಉತ್ತರ ಕೊಟ್ಟಿದ್ದಾರೆ. 67ನೇ ಸೆಕ್ಷನ್‌ಗೆ ಮಾತ್ರ ಇದು ಅನ್ವಯಿಸುತ್ತದೆ. ನೆಗೋಷಿಯಬಲ್ ಮತ್ತು ನಾನ್ ನೆಗೋಷಿಯಬಲ್ ಎಂದು ಮಾಡಿದ್ದೀರಿ ನಮಗೆ ಹಣವನ್ನು ಕೊಡಿಸಿ ಎಂದು ಮಾನ್ಯ ಭಾಗವತ್‌ರವರು ಹೇಳಿದ್ದಾರೆ. ಯಾರು ಯಾರು ಜಮೀನನ್ನು ತೆಗೆದುಕೊಂಡಿದ್ದಾರೆ, ಯಾವ ಯಾವ ಗೇಣಿದಾರರು ಇದ್ದಾರೆ ಅವರು ಏನು ಹಣವನ್ನು ಕೊಡುತ್ತಾರೆ ಅದನ್ನು ನಾವು ಭೂಮಾಲೀಕರಿಗೆ ಕೊಡುತ್ತೇವೆ. ತಾವು ಬೇಕಾದರೆ ಇದನ್ನು ಕೂಡ ಸರ್ಕಾರದವರೇ ಕೊಡಿ ಎಂದು ಮಾಡಬೇಕಾದರೆ ಮಾಲೀಕರಿಗೆ ಸರ್ಕಾರದಿಂದ ಕೊಡುವುದಕ್ಕೆ ಸಾದ್ಯವೇ ಎಂದು ನೋಡೋಣ? ಆದರೆ ಈಗ ಗೇಣಿದಾರನಿಂದ ವಸೂಲು

ಮಾಡಿದ್ದನ್ನು ನೀವು ಮಾಡುವುದು ಸರಿಯಲ್ಲವೆಂದು ಹೇಳಿದರೆ ಇದರ ಬಗ್ಗೆ ನಾವೆಲ್ಲರೂ ಸೇರಿ ಒಂದು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ.

**ಶ್ರೀ ವೈ.ಎಸ್. ಪಾಟೀಲ್**:- ಕೆಲವು ಸಂದರ್ಭಗಳಲ್ಲಿ ಗೇಣಿದಾರರು ಕೊಟ್ಟಿದ್ದರೂ ಅದನ್ನು ಮಾಲೀಕರಿಗೆ ಕೊಡುತ್ತಿಲ್ಲ?

**ಶ್ರೀ ಬಿ. ಬಸವಲಿಂಗಪ್ಪ:-** ಗೇಣಿದಾರ ಕೊಡಬೇಕು ಅಥವಾ ಸರ್ಕಾರ ಕೊಡಬೇಕು ಯಾರಾದರೂ ಒಟ್ಟಿನಲ್ಲಿ ಮಾಲೀಕನಿಗೆ ಹಣ ಕೊಡಬೇಕಾಗುತ್ತದೆ. ಈಗಾಗಲೇ ಎಷ್ಟು ಗೇಣಿದಾರರಿಂದ ಬರಬೇಕೋ ಅಷ್ಟು ಬಂದಿಲ್ಲ. ವಸೂಲು ಮಾಡುವುದಕ್ಕೆ ಆಗಿಲ್ಲ. ಕೆಲವರು ಏನು ಭಾವಿಸಿದ್ದಾರೆಂದರೆ ಯಾವುದಾದರೂ ಎಲೆಕ್ಷನ್ ಬಂದರೆ ಆ ಸಂದರ್ಭದಲ್ಲಿ ಇದನ್ನು ಮನ್ನಾ ಮಾಡುತ್ತಾರೆಂದು ನೆನೆಸಿದ್ದಾರೆ. ಈ ಮೂರು ಲಕ್ಷದ 50 ಸಾವಿರ ಗೇಣಿದಾರರಲ್ಲಿ 26 ಸಾವಿರ ಗೇಣಿದಾರರು ಹಣವನ್ನು ಕೊಟ್ಟು ಮಾಲೀಕರಾಗಿದ್ದಾರೆ. ಇನ್ನು ಉಳಿದವರು ಕೊಟ್ಟಿಲ್ಲ, ಯಾರು ಯಾರು ಗೇಣಿದಾರರಾಗಿದ್ದಾರೆ ಅವರಿಗೆ ಹೇಳಿ, ಬೇಗ ಹಣವನ್ನು ಕೊಟ್ಟು ಮಾಲೀಕರಾಗಿ ಎಂದು.

**ಶ್ರೀ ಆರ್.ಎಸ್. ಭಾಗವತ್:-** ನೆಗೋಷಿಯಬಲ್ ಇದ್ದುದ್ದನ್ನು ತೆಗೆದು ನಾನ್ ನೆಗೋಷಿಯಬಲ್ ಎಂದು ತಿದ್ದುಪಡಿ ಮಾಡುವುದಕ್ಕೆ ರಿಸರ್ವ್ ಬ್ಯಾಂಕಿನವರು ಅಬ್ಜೆಕ್ಷನ್ ಮಾಡುತ್ತಾ ಇದ್ದಾರೆಂದು ಹೇಳಿದ್ದೀರಿ ಅದು ಏತಕ್ಕೆ ಎಂದು ದಯಮಾಡಿ ಹೇಳಬೇಕು?

**ಶ್ರೀ ಬಿ. ಬಸವಲಿಂಗಪ್ಪ:-** ನಾವು ಮೊದಲು ಸರ್ಕಾರದವರು ನೆಗೋಷಿಯಬಲ್ ಬಾಂಡ್ ಕೊಡಬೇಕೆಂದು ಇದ್ದೆವು. ಆದರೆ..

**SRI R.S. BHAGVAT:-** After all it is received by the Government.

**SRI B. BASAVALINGAPPA:-** Negotiable bond is as good as legal tender.Legal tender is only permitted by the Reserve Bank of India, They are not permitting the State. ಇದಕ್ಕೆ ಪರವಾನಗಿ ಕೊಡಿಸುತ್ತಾ ಇರುವುದರಿಂದ ತೊಂದರೆಯಾಗುತ್ತದೆಂದು ಟ್ರಾನ್ಸ್‌ಫರಬಲ್ ಬಾಂಡನ್ನು ನಾನ್ ಟ್ರಾನ್ಸ್‌ಫರಬಲ್ ಎಂದು ಮಾಡಿದ್ದಾಗಿದೆ.

ಕೇವಲ ಮಾಲೀಕರನ್ನು ಸಮಾಧಾನ ಮಾಡುವ ಉದ್ದೇಶದಿಂದ ಈ ರೀತಿ ಸರ್ಕಾರ ಒಂದು ದೃಢ ನಿಲುವು ತೆಗೆದುಕೊಂಡಿದ್ದೇವೆ.

**ಶ್ರೀ ವೈ.ಎಸ್. ಪಾಟೀಲ್:–** ಇದು ನಾನ್ ಟ್ರಾನ್ಸ್‌ಫರ್‌ಬಲ್ ಆದದ್ದು ಕಡೆಗೆ ನಾನ್ ಪೇಯಬಲ್ ಆಗಕೂಡದು?

**ಶ್ರೀ ಆರ್. ದಯಾನಂದಸಾಗರ್:–** ಮಾಲೀಕರಿಗೆ ಮಾರ್ಕೆಟ್ ವ್ಯಾಲ್ಯೂ ನಿಗದಿ ಮಾಡಿ ಅವರಿಗೆ ಬ್ಯಾಂಕಿನಲ್ಲಿ ಕೊಡುವ ರೀತಿ ಬಡ್ಡಿಯನ್ನು ಕೊಡುತ್ತಾ ಹೋದರೆ ತೊಂದರೆಯಾಗುವುದಿಲ್ಲ. ಅವರಿಗೆ ಮೊತ್ತವನ್ನು ಯಾವಾಗ ಬೇಕಾದರೂ ಕೊಡಿ?

**ಶ್ರೀ ವೈ. ಎಸ್. ಪಾಟೀಲ್:–** ಮಾಲೀಕರ ಜಮೀನೆಲ್ಲಾ ಸರ್ಕಾರದ್ದು ಹಾಗೂ ದೇವರದು ಎಂದು ಹೇಳಿ ಎಲ್ಲರೂ ಸುಮ್ಮನೆ ಇರುತ್ತಾರೆ?

**ಶ್ರೀ ಆರ್. ದಯಾನಂದಸಾಗರ್:–** ನೀವು ಅವರಿಂದ ಜಮೀನನ್ನು ತೆಗೆದುಕೊಂಡು ಅವರು ಹೇಳಿದ್ದನ್ನು ಒಪ್ಪುವುದಿಲ್ಲವೆಂದರೆ ಹೇಗೆ?... There must be some reason for this. ನಿಮಗೆ ತಮಾಷೆ ಆಗಿದೆ. ಬಡ ರೈತರು ಬದುಕಲಿ. ಅವರಿಂದ ಎಲ್ಲವನ್ನು ಕಿತ್ತುಕೊಂಡು ನಿಮಗೆ ಓಟು ತೆಗೆದುಕೊಂಡು ಮಜಾ ಮಾಡುವ ಕೆಲಸ ಮಾಡಿಕೊಂಡಿದ್ದೀರಿ?

**ಶ್ರೀ ಡಿ.ಬಿ. ಚಂದ್ರೇಗೌಡ:–** ಅವರು ಮಜಾ ಮಾಡಿದ್ದಾರೆ ನಾವು ಮಜಾ ಮಾಡುತ್ತೇವೆ.

**ಶ್ರೀ ಬಿ. ಬಸವಲಿಂಗಪ್ಪ:–** ಯಾರಿಗೆ ಎಷ್ಟು ಹಣ ಕೊಡಬೇಕು ಎಂದು ಇದೆ. ಆದರೆ ಕೆಲವು ಕಡೆ ಅಧಿಕಾರಿಗಳು 2 ಸಾವಿರ ರೂಪಾಯಿ ಕೊಡುವ ಕಡೆ 14–15 ಸಾವಿರ ರೂಪಾಯಿ ಕೊಡುವುದು ಆಗಿದೆ. ಇದರಿಂದ ಗೇಣಿದಾರರಿಗೆ ಬಹಳ ಹೊರೆಯಾಗುತ್ತದೆ, ಆದ್ದರಿಂದ ನಾವು ಜಾಸ್ತಿ ಮಾಡುವುದಕ್ಕೆ ಹೋಗುವುದಿಲ್ಲ.

**ಶ್ರೀ ಎನ್.ಎನ್. ಕಲ್ಲಣ್ಣನವರ್:–** ಹಿಂದೆ ಆರುನೂರು ಚಿಲ್ಲರೆ ಮಹಾರಾಜರು ಹೋದರು. ಈಗ ಅವರ ಬದಲಿಗೆ ಚೋಟಾ ಮಹಾರಾಜರು ಜಾಸ್ತಿಯಾಗಿದ್ದಾರೆಯೇ?

**ಶ್ರೀ ಬಿ. ಬಸವಲಿಂಗಪ್ಪ**:- ಇನ್ನು ನಮ್ಮ ಬಸವರಾಜೇಶ್ವರಿಯವರು ತುಂಗಾಭದ್ರಾ ಡ್ಯಾಮ್ ಕೆಳಗೆ ಎರಡು ಬೆಳೆ ಬೆಳೆಯುತ್ತಿದ್ದುದನ್ನು ಒಂದು ಬೆಳೆ ಬೆಳೆಯುವ ವ್ಯವಸಾಯಕ್ಕೆ ಮಾಡಿರುವುದನ್ನು ಸ್ವಾಗತ ಮಾಡಿದ್ದಾರೆ ಇದು ಒಳ್ಳೆಯದು ಎಂದು ಹೇಳಿದ್ದಾರೆ ಎಂದು ಹೇಳಿದ್ದಾರೆ ಅದಕ್ಕೆ ನನ್ನ ಧನ್ಯವಾದಗಳು.

**ಶ್ರೀ ಎ.ಕೆ. ಸುಬ್ಬಯ್ಯ**:- ಕಬ್ಬು ಬೆಳೆಯುವಂತಹ 'ಎ' ಕ್ಲಾಸ್ ಇದ್ದದ್ದನ್ನು ಒಂದೇ ಬೆಳೆ ಭತ್ತ ಬೆಳೆಸುವುದಕ್ಕೆ ಅವಕಾಶ ಕೊಡಬೇಕು ಎಂದು ಹೇಳಿದ್ದಾರೆ.

**ಶ್ರೀ ಬಿ. ಬಸವಲಿಂಗಪ್ಪ**:- ಒಳ್ಳೆಯ ನೀರಾವರಿ ಪ್ರದೇಶದಲ್ಲಿದ್ದ ಜಮೀನನ್ನು ಅವರು ಗೇಣಿದಾರರಿಗೆ ಬಿಟ್ಟು ಕೊಟ್ಟಿದ್ದಾರೆ. ಅವರಿಗೆ ಇಂತಹ ಕ್ರಾಂತಿಕಾರವಾದ ಹಾಗೂ ಬಡವರ ಹಿತರಕ್ಷಣೆಯ ಹಿತದೃಷ್ಟಿಯಿಂದ ಇದಕ್ಕೆ ಅವರು ಬೆಂಬಲ ಕೊಟ್ಟಿದ್ದಾರೆ. ಇದು ಅವರ ಲಕ್ಷ್ಮಣ. ನಾನು ಅವರಿಗೆ ವಂದನೆಗಳನ್ನರ್ಪಿಸಬೇಕಾಗಿದೆ.

**ಶ್ರೀ ಬಿ.ಕೆ. ಗುಡದಿನ್ನಿ**:- ಸ್ವಾಮಿ, ಶ್ರೀಮತಿ ಬಸವರಾಜೆಶ್ವರಿ ಅವರಿಂದ ಎಷ್ಟು ಎಕರೆ ಜಮೀನು ತಮಗೆ ಬಂದಿದೆ?

**ಶ್ರೀ ಬಿ. ಬಸವಲಿಂಗಪ್ಪ**:- ಇಷ್ಟು ಹೇಳಿ, ಮಾನ್ಯ ಸದಸ್ಯರು ಈ ತಿದ್ದುಪಡಿಯನ್ನು ಸರ್ವಾನುಮತದಿಂದ ಒಪ್ಪಿಕೊಳ್ಳಬೇಕು ಎಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ,

## 5. ಭೂ ಹೀನರಿಗೆ ಸರ್ಕಾರದಿಂದ ಭೂಮಿ (19ನೇ ಜುಲೈ 1980)

**ಶ್ರೀ ಬಿ. ಬಸವಲಿಂಗಪ್ಪ (ಯಲಹಂಕ)**:- ಮಾನ್ಯ ಅಧ್ಯಕ್ಷರೇ, ನನಗೆ ಮಾತನಾಡಬೇಕೆಂಬ ಚಟ ಇರಲಿಲ್ಲ. ನಿನ್ನೆ ಕೆಲವು ಮಾನ್ಯ ಸದಸ್ಯರು ಮಾತನಾಡಿದರು. ಅವರು ಮಾತನಾಡಿದ ಮೇಲೆ ನನಗೂ ಸಹ ಮಾತನಾಡೋಣ ಎಂದು ಅನಿಸಿತು. ಶ್ರೀಮಾನ್ ಬಂಗಾರಪ್ಪನವರು ರೆವಿನ್ಯೂ ಇಲಾಖೆ ಮತ್ತು ವ್ಯವಸಾಯ ಇಲಾಖೆ ಎರಡು ಖಾತೆಯನ್ನೂ ವಹಿಸಿಕೊಂಡಿರತಕ್ಕದ್ದು ಬಹಳ ವಿಶೇಷವಾಗಿರತಕ್ಕ ವಿಷಯವಾಗಿದೆ. ಈ ಸಂದರ್ಭದಲ್ಲಿ ನಾನು ಶ್ರೀಮಾನ್ ಗುಂಡೂರಾವ್ ಅವರಿಗೆ ಅಭಿನಂದನೆಯನ್ನು ಸಲ್ಲಿಸಬೇಕಾಗಿದೆ. ಏತಕ್ಕೆಂದರೆ ರಾಜ್ಯದಲ್ಲಾಗಲೀ ಕೇಂದ್ರದಲ್ಲಾಗಲೀ ರೈತರಿಗೆ ಅನುಕೂಲವಾಗಬೇಕು ಎಂದರೆ

ವ್ಯವಸಾಯ ಮತ್ತು ರೆವಿನ್ಯೂ ಖಾತೆ ಒಬ್ಬ ಮಂತ್ರಿಗಳಲ್ಲೇ ಇರಬೇಕು. ರೆವಿನ್ಯೂ ಖಾತೆ ಏನು ಕೆಲಸ ಮಾಡುತ್ತಿದೆ ಅದು ವ್ಯವಸಾಯ ಇಲಾಖೆಗೆ ಸಂಬಂಧಪಟ್ಟಿದ್ದು. ಆದ್ದರಿಂದ ರೆವಿನ್ಯೂ ಇಲಾಖೆಯ ಕೆಲಸವನ್ನು ಮಾಡಿ ಅದರ ಒಂದು ಫಲಿತಾಂಶದಿಂದ ವ್ಯವಸಾಯ ಇಲಾಖೆಯಲ್ಲಿ ರೈತರಿಗೆ ಸಂಬಂಧಪಟ್ಟ ಹಾಗೆ ಏನು ಕೆಲಸವನ್ನು ಮಾಡಬೇಕೋ ಅದನ್ನು ಮಾಡಲಿಕ್ಕೆ ಸಾಧ್ಯವಾಗುತ್ತದೆ. ಈಗ ಉದಾಹರಣೆಗೆ ಹೇಳುವುದಾದರೆ ಸರ್ಕಾರದವರು ಭೂಹೀನರಿಗೆ ಜಮೀನು ಕೊಡುತ್ತಾರೆ. ಹೀಗೆ ಒಬ್ಬ ರೈತನಿಗೆ 4 ಎಕರೆ ಜಮೀನು ಕೊಟ್ಟರೆ ಅದನ್ನು ಅವನು ಉಳುವುದಕ್ಕೆ ಆಗುವುದಿಲ್ಲ. ಆದ್ದರಿಂದ ಅವನಿಗೆ ಎತ್ತು ಕೊಡಬೇಕು, ಮತ್ತು ಅವನು ಆ ಭೂಮಿಯನ್ನು ಅಬಾದು ಮಾಡುವುದಕ್ಕೆ ಬೇಕಾದ ಸೌಲಭ್ಯವನ್ನು ಒದಗಿಸಬೇಕು, ಹಣ ಸಹಾಯವನ್ನು ಒದಗಿಸಬೇಕು. ಆ ರೀತಿ ಮಾಡಿದರೆ ಅವನು ಆ ಜಮೀನನ್ನು ಅಬಾದು ಮಾಡಿಕೊಂಡು ಬೆಳೆಯನ್ನು ಬೆಳೆದು ಸಂಸಾರವನ್ನು ಸಾಗಿಸಿಕೊಂಡು ಹೋಗುವುದಕ್ಕೆ ಪ್ರಯತ್ನ ಮಾಡುತ್ತಾನೆ. ಮತ್ತು ಆ ಜಮೀನಿನಲ್ಲಿ ಉತ್ತಮವಾದ ಬೆಳೆಯನ್ನೂ ಬೆಳೆಯುವುದಕ್ಕೆ ಪ್ರಯತ್ನ ಮಾಡುತ್ತಾನೆ. ರೆವಿನ್ಯೂ ಇಲಾಖೆ ಏನು ಕೆಲಸ ಮಾಡುತ್ತದೆ ಅದರಿಂದ ವ್ಯವಸಾಯ ಇಲಾಖೆಗೆ ಬಹಳ ಸಹಾಯವಾಗುತ್ತದೆ ಎಂದು ಅನಿಸುತ್ತದೆ. ಈಗ ನಾನು ಮಾನ್ಯ ರೆವಿನ್ಯೂ ಮಂತ್ರಿಗಳಾದ ಶ್ರೀಮಾನ್ ಬಂಗಾರಪ್ಪನವರ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಹೇಳುತ್ತೇನೆ. ಶ್ರೀಮಾನ್ ಬಂಗಾರಪ್ಪನವರು ಭೂಮಿಯ ವಿಚಾರದಲ್ಲಿ ನಂಬಿಕೆ ಇರತಕ್ಕವರು. ಮತ್ತು ನಮ್ಮ ಅಪಾರ ಸ್ನೇಹಿತರೂ ಹಾಗೂ ದೇಶದಲ್ಲಿ ಮಹಾನ್ ವ್ಯಕ್ತಿ ಎನಿಸಿಕೊಂಡಿದ್ದ ಶ್ರೀಮಾನ್ ಗೋಪಾಲಗೌಡರ ಶಿಷ್ಯರು. ಶ್ರೀಮಾನ್ ಗೋಪಾಲಗೌಡರು ಭೂ ಚಳುವಳಿಯನ್ನು ಪ್ರಾರಂಭ ಮಾಡಿದಾಗ ನಾವೆಲ್ಲರೂ ಕಿವಿಯನ್ನು ನಿಮಿರಿಸಿ ಕೇಳುತ್ತಿದ್ದೆವು ಕಣ್ಣನ್ನು ತೆರೆದು ನೋಡುತ್ತಿದ್ದೆವು. ಶ್ರೀಮಾನ್ ಗೋಪಾಲಗೌಡರು ಮತ್ತು ಅವರ ಶಿಷ್ಯರು ಭೂ ಸುಧಾರಣೆಯ ಬಗ್ಗೆ ಚಳುವಳಿ ಮಾಡಿದಾಗ ಶಿವಮೊಗ್ಗದ ಜನರು ಒಂದು ದೊಡ್ಡ ಚಳುವಳಿ ಮಾಡಿದರು. ಆಗ ನಮ್ಮ ದೇಶಕ್ಕೆ ಕರ್ನಾಟಕ ರಾಜ್ಯಕ್ಕೆ ಒಂದು ಅರಿವು ಆಗಿದೆ. ಆ ಒಂದು ಕಾರಣ ಇರಬೇಕೋ ಏನೋ ಶ್ರೀಮಾನ್ ಬಂಗಾರಪ್ಪನವರು ಈಗ ರೆವಿನ್ಯೂ ಮಂತ್ರಿಗಳಾಗಿದ್ದಾರೆ. ಭೂಸುಧಾರಣೆ ಕಾಯಿದೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ಕೊಡಬೇಕು ಎಂದು ಆಗಿದೆ. ಇದನ್ನು ಇವರು ಮಾಡುತ್ತಾರೆ. ಎಂದು ಅಂದುಕೊಂಡಿದ್ದೆ. ಇದನ್ನು ಈಗ 6 ತಿಂಗಳಿಂದ ನಾನು ಸೂಕ್ಷ್ಮವಾಗಿ ನೋಡುತ್ತಿದ್ದೇನೆ. ಹಿಂದೆ ನಾವು

ಈ ಭೂಸುಧಾರಣೆ ಕಾಯಿದೆಯನ್ನು ಜಾರಿಗೆ ತಂದಿದ್ದೆವು. ಅದನ್ನು ಇವರು ಮುಂದುವರಿಸಿಕೊಂಡು ಹೋಗುತ್ತಾರೆ ಎಂದುಕೊಂಡಿದ್ದೆ. ಆದರೆ ಇವರು ಭೂಸುಧಾರಣೆ ಕಾಯಿದೆಯನ್ನು ಜಾರಿಗೆ ಕೊಟ್ಟಿಲ್ಲ ಎಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ. ರಾಜ್ಯಪಾಲರ ಭಾಷಣದ ಮೇಲೆ ನಾನು ಮಾತನಾಡುವಾಗ ಇದರ ಬಗ್ಗೆ ಹೇಳಿದ್ದೇನೆ. ಆಗ ಇವರು ಹೇಳಿದರು, ಭೂಸುಧಾರಣಾ ಕಾಯಿದೆಯನ್ನು ಜಾರಿಗೆ ಕೊಡುವುದಕ್ಕೆ ನಾವು ಇನ್ನೂ ಪ್ರಾರಂಭ ಮಾಡಿಲ್ಲ, ನಾವು ಈಗ ತಾನೆ ಅಧಿಕಾರಕ್ಕೆ ಬಂದಿದ್ದೇವೆ ಎಂದು ಹೇಳಿದರು. ಈಗಾಗಲೇ ಇವರು ಅಧಿಕಾರಕ್ಕೆ ಬಂದು 6 ತಿಂಗಳಾಯಿತು. ಯಾವುದೂ ಮಾಡಿಲ್ಲ. ಈ 6 ತಿಂಗಳ ಕಾಲದಲ್ಲಿ ಕೆಲವು ಜಿಲ್ಲೆಗಳಲ್ಲಿ ಲ್ಯಾಂಡ್ ಟ್ರಿಬ್ಯುನಲ್ ರಚನೆ ಮಾಡಿದ್ದಾರೆ. ಇನ್ನೂ ಕೆಲವು ಜಿಲ್ಲೆಗಳಲ್ಲಿ ಟ್ರಿಬ್ಯುನಲ್‌ಗಳನ್ನು ರಚನೆ ಮಾಡಿಲ್ಲ. ಯಾವಾಗ ಅವುಗಳನ್ನು ರಚನೆ ಮಾಡುತ್ತೀರೋ ಮಾಡುಕೊಂಡು ಹೋಗಿ ಈಗಾಗಲೇ ಯಾವ ಜಿಲ್ಲೆಗಳಲ್ಲಿ ಲ್ಯಾಂಡ್ ಟ್ರಿಬ್ಯುನಲ್‌ಗಳನ್ನು ರಚನೆ ಮಾಡಿ ಅವುಗಳಿಗೆ ಸದಸ್ಯರನ್ನೇನು ನಾಮಕರಣ ಮಾಡಿದ್ದಾರೆ ಅವರುಗಳಲ್ಲಿ ಶ್ರದ್ಧಾಭಕ್ತಿ ಇರತಕ್ಕವರನ್ನು ಒಬ್ಬರನ್ನಾದರೂ ಹಾಕಿದ್ದಾರೆಯೇ ಎಂದು ಪ್ರಶ್ನೆಯನ್ನು ಹಾಕಿದರೆ ಶ್ರೀಮಾನ್ ಬಂಗಾರಪ್ಪನವರೇ ಹೇಳಿದ್ದಾರೆ, ಶ್ರದ್ಧಾಭಕ್ತಿ ಇರತಕ್ಕವರು ಒಬ್ಬರೂ ಇಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀಮಾನ್ ಗುಂಡೂರಾವ್ ಅವರು ಹೇಳಿದ್ದಾರೆ ಲ್ಯಾಂಡ್ ಟ್ರಿಬ್ಯುನಲ್ ಮಾಡತಕ್ಕ ಅಧಿಕಾರ ನನ್ನದು ಎಂದು. ನಾನು ಶ್ರೀಮಾನ್ ಬಂಗಾರಪ್ಪನವರನ್ನು ಕೇಳಿ ಟ್ರಿಬ್ಯುನಲ್‌ಗಳನ್ನು ರಚನೆ ಮಾಡಿದ್ದೇನೆ, ಅವುಗಳನ್ನು ಸರಿಯಾಗಿ ಮಾಡಿದ್ದೇನೆ ಎಂದು ಅವರು ಹೇಳಿದ್ದಾರೆ. ಇವರಿಬ್ಬರೂ ಮಾಡಿರತಕ್ಕದ್ದು ನನ್ನ ಅನುಭವಕ್ಕೆ ಬಂದಿದೆ ಈ ಟ್ರಿಬ್ಯುನಲ್‌ಗಳು ಏನು ಕೆಲಸ ಮಾಡುವುದಕ್ಕೆ ಪ್ರಾರಂಭ ಮಾಡಿದ್ದಾರೆ. ಆ ಕೆಲಸಕಾರ್ಯಗಳು ಸಮರ್ಪಕವಾಗಿಲ್ಲ. ತೃಪ್ತಿಕರವಾಗಿಲ್ಲ. ಇದರ ಬಗ್ಗೆ ಹಲವಾರು ದೂರುಗಳು ಬಿಜಾಪುರ ಜಿಲ್ಲೆಯಿಂದ ಹಲವಾರು ದೂರುಗಳು ಇನ್ನೂ ಕೆಲವು ಕಡೆಗಳಿಂದ ಬಂದಿದೆ. ಬಾಗಲಕೋಟೆಯಲ್ಲಿ ಕೆಲವರು ಬಡವರು 20–30 ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದ ಜಮೀನನ್ನು ಬೇರೆಯವರಿಗೆ ಕೊಡುವುದಕ್ಕೋಸ್ಕರ ಇಷ್ಟು ಹಣ ಕೊಡಿ ಎಂದು ಟ್ರಿಬ್ಯುನಲ್ ಮೆಂಬರು ಕೇಳಿದ್ದಾರೆ. ಇಂಥಾ ಕೇಸುಗಳು ಬಹಳ ಇವೆ. ಇದರ ಬಗ್ಗೆ ನಾನು ಮಾನ್ಯ ಮಂತ್ರಿಗಳಿಗೆ ಪತ್ರ ಬರೆದು ತಿಳಿಸುತ್ತೇನೆ. ಭೂಸುಧಾರಣೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವ ದೃಷ್ಟಿಯಿಂದ ಶ್ರದ್ಧಾಭಕ್ತಿ ಇರುವ ಸದಸ್ಯರುಗಳನ್ನು ಲ್ಯಾಂಡ್ ಟ್ರಿಬ್ಯುನಲ್‌ಗಳಿಗೆ ನೇಮಕ

ಮಾಡಿ ಅವರು ಒಂದು ನೀತಿಯ ಆಧಾರದ ಮೇಲೆ ಈ ಕಾರ್ಯಕ್ರಮವನ್ನು ಮುಂದುವರಿಸಿಕೊಂಡು ಹೋಗಬೇಕೆಂದು ನಾನು ಪ್ರಾರ್ಥಿಸಿಕೊಳ್ಳುತ್ತೇನೆ. ಸಮಾಜವಾದದಲ್ಲಿ ವಿಶ್ವಾಸ ಇದ್ದು ಇಟ್ಟು ಸಮಾಜವಾದದಲ್ಲಿ ನಂಬಿಕೆ ಇರತಕ್ಕ ಜನ ಅದನ್ನು ಕಾರ್ಯರೂಪಕ್ಕೆ ಬೇಕಾದ ಕಾರ್ಯಕ್ರಮಗಳನ್ನು ರೂಪಿಸುವುದರಲ್ಲಿ ಇವರು ವಿಫಲರಾಗಿದ್ದಾರೆ. ಸಮಾಜವಾದವನ್ನು ಗಂಟೆಗಟ್ಟಲೆ ಮಾತನಾಡಿ ಪುಸ್ತಕ ಬರೆಯುತ್ತಾರೆ. ಸಮಾಜವಾದದ ಬಗ್ಗೆ ಇರುವ ಪುಸ್ತಕಗಳನ್ನು ಓದುತ್ತಾರೆ. ಬಾಯಲ್ಲಿ ಸಮಾಜವಾದವನ್ನು ಹೇಳುತ್ತಾರೆ. ಯಾವುದಾದರೂ ಒಂದು ಕಾರ್ಯಕ್ರಮವನ್ನು ಸಮಾಜದಲ್ಲಿ ಜಾರಿಗೆ ತರಬೇಕಾದರೆ ಅದಕ್ಕೆ ಒಂದು ರೂಪವನ್ನು ಕೊಟ್ಟು ಅದಕ್ಕೆ ಒಂದು ಚಿತ್ರವನ್ನು ನಿರ್ಮಾಣ ಮಾಡಿ ಅದನ್ನು ಕಾರ್ಯಗತ ಮಾಡಬೇಕು ಎಂದಾಗ ಎಲ್ಲಾ ಕಡೆ ಅದರಲ್ಲಿ ಸೋತು ಹೋಗಿದ್ದಾರೆ. ಇವರು ನಿಷ್ಪ್ರಯೋಜಕರು ಎಂದು ನಮಗೆ ಗೊತ್ತಾಗಿದೆ. ಆದರೆ ಶ್ರೀಮಾನ್ ಬಂಗಾರಪ್ಪನವರು ನಿಷ್ಪ್ರಯೋಜಕರಾಗುತ್ತಾರೆ ಎಂದು ನಾನು ಹೇಳುವುದಕ್ಕೆ ತಯಾರು ಇಲ್ಲ.

ಅವರು ಅದಕ್ಕೋಸ್ಕರವಾಗಿ ಕೆಲಸ ಮಾಡಿದ್ದಾರೆ, ಅವರು ಸಮತಾವಾದ ಸಮಾಜದಲ್ಲಿ ನಂಬಿಕೆಯುಳ್ಳವರಾಗಿದ್ದಾರೆ. ಆದರೆ ಇದನ್ನು ಕಾರ್ಯಗತಮಾಡುವಾಗ ನಿಷ್ಠೆಯಿಂದ ಮಾಡಬೇಕು ಎಂದು ಹೇಳುತ್ತೇನೆ. ಈ ಒಂದು ಭೂಸುಧಾರಣೆ ಕಾನೂನನ್ನು ಜಾರಿ ಮಾಡುವಾಗ ತಮಗೆ ಹೇಳಬೇಕಾದರೆ ಮುಕ್ಕಾಲುಭಾಗ ಅಧಿಕಾರಿಗಳಿಗೆ ಶ್ರದ್ಧೆ ಇಲ್ಲ, ಭಕ್ತಿ ಇಲ್ಲ, ಬಡವರಲ್ಲಿ ಕನಿಕರ ಇಲ್ಲ, ಬಡವರ ಗೋಳು ಅವರಿಗೆ ಗೊತ್ತೇ ಇಲ್ಲ ಎಂದು ಹೇಳುತ್ತೇನೆ. ಸಮಾಜದಲ್ಲಿ ಹೀಗೆ ಏತಕ್ಕೆ ಬೆಳೆದುಕೊಂಡು ಬಂದಿದೆ ಎಂದರೆ ಈ ಅಧಿಕಾರಿಗಳಿಗೆ ತಿಂಗಳಿಗೊಮ್ಮೆ ಸಾಕಷ್ಟು ಸಂಬಳ ಸಿಕ್ಕುವುದರಿಂದ ಅವರಿಗೆ ಈ ಬಡವರು ಯಾವರೀತಿ ಜೀವನ ಮಾಡುತ್ತಾರೆ. ಅವರ ಗೋಳು ಹೇಗಿದೆ, ಅವರ ಕಷ್ಟ ಹೇಗಿದೆ ಇವರ ಬಗ್ಗೆ ಗಮನ ಕೊಡುವುದಕ್ಕೆ, ಇವರ ಬಗ್ಗೆ ಮನಸ್ಸು ಮಾಡುವುದಕ್ಕೆ ಹೋಗುವುದಿಲ್ಲ. ಅಧಿಕಾರಿಗಳು ಭೋಗದಿಂದ ಜೀವನ ಮಾಡುತ್ತಾರೆ, ಅದರಿಂದ ಗೊತ್ತಾಗುವುದಿಲ್ಲ. ತಮಗೆ ಒಂದು ಉದಾಹರಣೆ ಹೇಳಬೇಕಾದರೆ ನಾನು ಹಿಂದೆ ಕಂದಾಯ ಮಂತ್ರಿಯಾಗಿದ್ದಾಗ ಎಷ್ಟೋ ಕಡೆಗಳಲ್ಲಿ ಪ್ರವಾಸ ಮಾಡಿದ್ದೇನೆ. ಆವಾಗ ನಾನು ನೋಡಿದ್ದೇನೆ. ಅವರು ಈ ಬಡವರ ಬಗ್ಗೆ ಸಾಕಷ್ಟು ಲಕ್ಷ್ಯ ಕೊಡುತ್ತಾ ಇಲ್ಲ, ತಮ್ಮ ಭೋಗ ಜೀವನದ ಕಡೆಯೇ ಹೆಚ್ಚು ಗಮನ ಕೊಡುತ್ತಾರೆ. ಈ ಬಡವರ ಬಗ್ಗೆ ಅವರು ಏನು

ಕರ್ತವ್ಯ ನಿರ್ವಹಣೆ ಮಾಡಬೇಕೋ ಅದನ್ನು ಸರಿಯಾಗಿ ಮಾಡುತ್ತಾ ಇಲ್ಲ. ನಾನು ಯಾವ ಯಾವ ಭಾಗದಲ್ಲಿ ಇನ್‌ಸ್ಪೆಕ್ಷನ್ ಮಾಡಿದ್ದೇನೋ ಅಲ್ಲೆಲ್ಲಾ ಈ ಭೂಸುಧಾರಣೆ ಹೇಗೆ, ಯಾವರೀತಿಯಾಗಿ ನಡೆದಿದೆ ಎನ್ನುವ ಬಗ್ಗೆ ಪರಿಶೀಲನೆ ಮಾಡಿ, ಮತ್ತು ನಾನು ತನಿಖೆ ಮಾಡತಕ್ಕಂಥಾದ್ದರ ಬಗ್ಗೆ ಬರೆದು ಬಂದಿದ್ದೇನೆ. ಡೆಪ್ಯೂಟಿ ಕಮೀಷನರ್ ಆಫೀಸಿನಲ್ಲಿ ಡಿವಿಷನಲ್ ಕಮೀಷನರ್ ಆಫೀಸಿನಲ್ಲಿ ಎಲ್ಲಾ ಕಡೆಯೂ ರೆಕಾರ್ಡ್ ಆಗಿದೆ. ಅದನ್ನೇನಾದರೂ ತಾವು ನೋಡಿದ್ದೀರಾ? ನಾನೂ ಎಲ್ಲವನ್ನೂ ಪರಿಶೀಲನೆ ಮಾಡಿ ಬರೆದಿದ್ದೇನೆ. ಅಲ್ಲದೆ ನಾನು ಸ್ವತಃ ನೋಡಿರುವುದರಿಂದ ತಮಗೆ ಹೇಳುತ್ತಿದ್ದೇನೆ, ಯಾರು ಡೆಪ್ಯೂಟಿ ಕಮೀಷನರಾಗಿದ್ದಾರೆ ಅವರೆಲ್ಲಾ ಬುದ್ಧಿವಂತರು ಎಂದು ತಾವು ತಿಳಿದುಕೊಳ್ಳಬೇಕು, ಕೆಲವರು ಬುದ್ಧಿವಂತರು ಇದ್ದಾರೆ ಎಲ್ಲರನ್ನೂ ಹೇಳುವುದಿಲ್ಲ, ಅವರು ಇದನ್ನು ಸರಿಯಾಗಿ ಮಾಡದೇ ಹೋದರೆ ನಮ್ಮ ಕರ್ತವ್ಯ ಚ್ಯುತಿಮಾಡಿದಂತಾಗುತ್ತದೆ. ಕೆಲವು ಜನರು ಬುದ್ಧಿವಂತರಾದ ಜನರು ಏನು ಇದ್ದಾರೆ ಅವರು ಸ್ವಂತ ಶ್ರಮವಹಿಸಿ ಬುದ್ಧಿವಂತರಾಗಿದ್ದಾರೆ. ಅಂಥಾವರು ಪ್ರಯತ್ನಮಾಡಿದರೆ ದೇಶದಲ್ಲಿ ನಿಜವಾಗಿಯೂ ಕೂಡ ಕಲ್ಯಾಣವಾಗುತ್ತದೆ. ಅಂಥಾವರು ಈ ಒಂದು ಕಾರ್ಯಕ್ರಮವನ್ನು ಅಲ್ಲಲ್ಲಿ ಜಾರಿಗೆ ತರುತ್ತಿದ್ದಾರೆ, ಕೆಲವು ಡೆಪ್ಯೂಟಿ ಕಮೀಷನರು ಚಿಕ್ಕವರು ಇರಬಹುದು, ಸಾಕಷ್ಟು ಓದಿಲ್ಲದೇ ಇರಬಹುದು, ಸಾಕಷ್ಟು ಅನುಭವ ಇಲ್ಲದೇ ಇರಬಹುದು, ಮತ್ತು ವಿಶೇಷವಾಗಿ ಹೈಕೋರ್ಟಿನಲ್ಲಿರುವ ಜರ್ನಲ್ಸ್‌ನ್ನು ನೋಡಿದರೆ ಅವರು ಯಾವರೀತಿಯಾಗಿ ಕೇಸಸ್‌ಗಳನ್ನು ತೀರ್ಮಾನ ಮಾಡಿದ್ದಾರೆ, ಅದನ್ನು ನೋಡಿಲ್ಲದೇ ಇರಬಹುದು ಅದರಿಂದ ಅವರಿಗೆ ಇದರ ಬಗ್ಗೆ ಸರಿಯಾಗಿ ಗೊತ್ತಿಲ್ಲದೇ ಇರಬಹುದು. ಅವರು ಏತಕ್ಕಾಗಿ ಆ ಜರ್ನಲ್ಸ್‌ನ್ನು ಓದಿ ತಿಳಿದುಕೊಳ್ಳುವುದಿಲ್ಲವೋ ನನಗೆ ಗೊತ್ತಾಗುವುದಿಲ್ಲ. ಆದುದರಿಂದ ತಾವು ಈಗಲಾದರೂ ಕೂಡ ಅವರಿಗೆಲ್ಲರಿಗೂ ಆ ಜರ್ನಲ್ಸ್‌ನ್ನು ಒದಗಿಸಿಕೊಡುವ ಹಾಗೆ ಮಾಡಬೇಕು. ಆದುದರಿಂದ ಈ ಅಧಿಕಾರಿಗಳು ಬಹಳ ಬುದ್ಧಿವಂತರು ಎಂದು ತಾವು ತಿಳಿದುಕೊಳ್ಳಬೇಕು. ಅವರು ಹೀಗೆಯೇ ಇದ್ದರೆ ಇನ್ನುಮುಂದಾದರೂ ಈ ಪದ್ಧತಿಯನ್ನೇ ಮುಂದುವರಿಸುವುದಕ್ಕೆ ಹೋಗಬೇಡಿ ಅವರ ಮೇಲೆ ಸಾಕಷ್ಟು ಒಂದು ಲಗಾಮು ಹಾಕಿಕೊಂಡು ಕೆಲಸ ತೆಗೆದುಕೊಳ್ಳಿ. ತಿಂಗಳಿಗೆ ಇಷ್ಟು ತೀರ್ಮಾನವಾಗಲೇ ಬೇಕು. ಇಂತಿಷ್ಟು ಜನರಿಗೆ ಉಪಕಾರವಾಗಲೇ ಬೇಕು ಅಂತ ಒಂದು ನಿಗದಿ ಮಾಡಿ ಮತ್ತು ಇದರ ಜೊತೆಗೆ ತಾವು ಇಂತಿಷ್ಟು ಕೇಸುಗಳನ್ನು ತೀರ್ಮಾನ ಮಾಡಲೇಬೇಕು ಅಂತ ಒಂದು ನಿರ್ಬಂಧ ಹಾಕಿ

ಅವರಿಗೆ ಕೊಟ್ಟರೆ ಇದರಿಂದ ಅನೇಕ ಬಡಜನರಿಗೆ ಅನುಕೂಲವಾಗುತ್ತದೆ ಎಂದು ನನಗಾದರೂ ಅನಿಸುತ್ತದೆ. ಇದರಲ್ಲಿ ಇನ್ನೊಂದು ಮುಖ್ಯವಾದ ವಿಷಯ ಹೇಳಬೇಕಾದರೆ ಈ ಭೂಸುಧಾರಣೆಯನ್ನು ಜಾರಿಗೆ ಕೊಡುವಾಗ ಅಧಿಕಾರಿಗಳು ಬಹಳ ನ್ಯೂನ್ಯತೆಗಳನ್ನು ಮಾಡಿದ್ದಾರೆ. ಅದರಲ್ಲೂ ಕೂಡ ಅಸಿಸ್ಟೆಂಟ್ ಕಮೀಷನರು ರಾಜಕೀಯ ಮಾಡಿದ್ದಾರೆ, ಕೆಲವು ಅಧಿಕಾರಿಗಳು ಜಮೀನ್ದಾರರೊಂದಿಗೆ ಷಾಮೀಲಾಗಿ ಹಣವಸೂಲ್ಮಾಡಿ ಭೂಸುಧಾರಣೆ ಕಾನೂನನ್ನು ಮೂಲೋತ್ಪಾಟನೆ ಮಾಡಿದ್ದಾರೆ. ಇದಕ್ಕೆ ಸಾಕಷ್ಟು ಸಾಕ್ಷಿ ಇವೆ. ಇವೆಲ್ಲವನ್ನೂ ಕೂಡ ನಾನು ನೋಡಿ. ಅದರಲ್ಲಿ ಏನಾಗಿದೆ ಅನ್ನುವುದನ್ನು ನೋಡಿ ಇನ್‌ಸ್ಪೆಕ್ಷನ್ ಮಾಡಿದ್ದೇನೆ. ಯಾವ ಯಾವ ಅಧಿಕಾರಿಗಳು ಏನೇನು ಮಾಡಿದ್ದಾರೆ ಅನ್ನುವುದನ್ನು ಸ್ಪಷ್ಟವಾಗಿ ರೆಕಾರ್ಡಿನಲ್ಲಿ ಬರೆದಿಟ್ಟಿದ್ದೇನೆ. ಆದುದರಿಂದ ಈ ಅಸಿಸ್ಟೆಂಟ್ ಕಮೀಷನರ್ ಏನು ಇದ್ದಾರೆ ಅವರು ಜವಾಬ್ದಾರಿ ಮನುಷ್ಯರು ಎಂದು ತಿಳಿದುಕೊಂಡರೆ ಅದು ತಪ್ಪು. ನಾನು ಈ ಬಗ್ಗೆ ಎಲ್ಲರನ್ನೂ ಹೇಳುತ್ತಿಲ್ಲಾ, ಕೆಲವರು ಹಾಗೆ ಇದ್ದಾರೆ, ಕೆಲವರು ಈ ರೀತಿಯಾಗಿ ಬೇಜವಾಬ್ದಾರಿಯಿಂದ ವರ್ತನೆ ಮಾಡತಕ್ಕಂಥಾದ್ದನ್ನು ನೋಡಿ ನಾನು ಸಂಕಟಪಟ್ಟಿದ್ದೇನೆ. ಇನ್ನು ಭೂಸುಧಾರಣೆ ಕಾನೂನು ಬಗ್ಗೆ ನಾನು ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ. ಶ್ರೀಮಾನ್ ಎಂ. ಎ. ಎಸ್. ರಾಜನ್‌ರವರು ಲ್ಯಾಂಡ್ ರಿಫಾರಂಸ್ ಅಡ್ವೈಸರ್ ಅಂತ ಮಾಡಿದ್ದೆವು. ಅವರು ಒಂದು ಸಣ್ಣ ಹೊತ್ತಿಗೆಯನ್ನು ಬರೆದಿದ್ದಾರೆ. ಅದರಲ್ಲಿ ಅವರು ಬರೆದಿರುವ ಒಂದೆರಡು ಮಾತುಗಳನ್ನು ತಮ್ಮ ಮುಂದೆ ಓದುತ್ತೇನೆ. ಅದನ್ನು ನಾವು ತಿಳಿದುಕೊಂಡರೆ ದೇಶಕ್ಕೂ ಅನುಕೂಲವಾಗುತ್ತದೆ. ಜನಗಳಿಗೂ ಅನುಕೂಲವಾಗುತ್ತದೆ, ಎಂದು ನಾನು ತಿಳಿದುಕೊಂಡಿದ್ದೇನೆ. ಆ ಪುಸ್ತಕದಲ್ಲಿ ಈ ರೀತಿ ಇದೆ. ಅದನ್ನು ಓದುತ್ತೇನೆ ಅದರಲ್ಲಿ ಏನು ಇದೆ ಎಂದರೆ ಈ ರೀತಿ ಇದೆ.

**ವಿಶ್ವ ಬ್ಯಾಂಕಿನ ದಾಖಲೆಗಳ ಪ್ರಕಾರ:–** ಭೂ ಸುಧಾರಣೆಯ ಸಂಬಂದದ ವಿಧಾರಗಳು, ಒಡೆತನ, ನಿಯಂತ್ರಣ, ಬಳಕೆ, ಹಿಡುವಳಿ ಮುಂತಾದ ವಿಚಾರಗಳ ಜೊತೆ ಉತ್ಪಾದನೆ ಅದರೆ ಅನುಕೂಲಗಳನ್ನು ಪಡೆವನ ಎಲ್ಲಾ ವಿಚಾರಗಳು ಹೇಳಿದೆ, ಅಲ್ಲದೆ ಭೂ ಅಭಿವೃದ್ಧಿ ವಿಚಾರದಲ್ಲಿ, ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಆಯಾಮಗಳು ಸಹ ಸೇರಿಕೊಂಡಿವೆ. ಭೂಹಿಡುವಳಿಗೆ ಸಂಬಂದಿಸಿದಂತೆ ಹವಾಗುಣ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು

ರಾಜಕೀಯ ಅಂಶಗಳು ಸಹ ಮುಖ್ಯವಾಗಿವೆ. ಕೆಲವು ಕಡೆ ಭೂಮಿಯನ್ನು ವಂಶಪಾರಂಪರ್ಯವಾಗಿ ಒಂದದ್ದು ಅದನ್ನು ವಿತರಿಸಲು ಸಹ ಹಾಗಿಲ್ಲ ಉತ್ತರಾಧಿರತ್ವದ ಸಮಸ್ಯೆಯು ಸಹ ಇದೆ. ಹಾಗಾಗಿ ಭೂ ಉಪಯೋಗವು ಬೇರ ಬೇರೆ ರೀತಿಯಾಗಿರುತ್ತದೆ.

ಈ ಭೂಸುಧಾರಣೆ ಕಾನೂನು ನಮ್ಮ ದೇಶಕ್ಕೆ ಬದಲಾದಂಥಾ ಪರಿಸ್ಥಿತಿಗೆ ಬಹಳ ಅನುಕೂಲವಾಗುತ್ತದೆ. ನಮಗೆ ಇದೇ ಬುನಾದಿ. ನಮ್ಮ ಸಮಾಜದಲ್ಲಿ ನಮ್ಮ ಸಣ್ಣ ರೈತರು ಅಂಗೈ ಅಗಲ ಜಮೀನು ಏನು ಇಟ್ಟುಕೊಂಡಿದ್ದಾರೆ ಅದನ್ನೆ ಅವರು ಆರ್ಥಿಕವಾಗಿ ಸಾಮಾಜಿಕವಾಗಿ ಬಳಸಿಕೊಳ್ಳುವುದರಿಂದ ನಾವು ಅವರ ಕಡೆಗೆ ಹೆಚ್ಚು ಗಮನಕೊಡುವುದು ಸೂಕ್ತ. ನಾನು ಅದನ್ನು ಪುಷ್ಟೀಕರಿಸುತ್ತೇನೆ. ಆದುದರಿಂದ ನಾನು ಈ ಸಂದರ್ಭದಲ್ಲಿ ತಮಗೆ ಹೇಳುವುದೇನೆಂದರೆ ಈ ಭೂಸುಧಾರಣೆ ಕಾನೂನನ್ನು ಜಾರಿಗೆ ತರುವಾಗ ತಾವು ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಏನು ವಿಷಯ ಎಂದರೆ ಚಾಚೂ ತಪ್ಪದೆ ಆ ಅಧಿಕಾರಿ ಕೆಲಸ ಮಾಡಬೇಕು ಮತ್ತು ಲ್ಯಾಂಡ್ ಟ್ರಿಬ್ಯೂನಲ್ ಮೆಂಬರ್ಸ್ ಯಾವ ರೀತಿಯಾಗಿ ಇದರಲ್ಲಿ ಕೆಲಸ ಮಾಡುತ್ತಾನೆ ಎನ್ನುವುದನ್ನು ಕಣ್ಣಿನಲ್ಲಿ ಕಣ್ಣಿಟ್ಟು ನೋಡಿ ಕೆಲಸ ಮಾಡಬೇಕಾಗುತ್ತದೆ ಎಂದು ಹೇಳುತ್ತೇನೆ. ಹೋದ ಸಾರಿ ನಾನು ಸರ್ಕಾರದಲ್ಲಿದ್ದಾಗ ಎಷ್ಟು ಅಪ್ಲಿಕೇಷನ್ ಇದ್ದುವು ಅನ್ನುವುದನ್ನು ಅಂಕಿಸಂಖ್ಯೆಗಳೊಡನೆ ಹೇಳುವುದಕ್ಕೆ ಇಷ್ಟಪಡುತ್ತೇನೆ. Total Number of applications field by the tenants is 7,54 259, involving total area of 41, 22, 279 ಇದರಲ್ಲಿ ತೀರ್ಮಾನಮಾಡಿರುವುದು, Disposal of applications involving an area of 4,12,401 acres.

ಇಲ್ಲಿಯವರೆಗೆ ಗೇಣಿದಾರರಿಗೆ 2,54,882 ಎಕರೆ ಜಮೀನು ಹೋಗಿದೆ, ಈ ಭೂಸುಧಾರಣಾ ಕಾನೂನಿನ ಪ್ರಕಾರ ಹೆಚ್ಚುವರಿ ಭೂಮಿ ಇರುವವರು ಡಿಕ್ಲರೇಷನ್ ಕೊಡಬೇಕಾಗಿತ್ತು. ಆದರೆ ಕೆಲವರು ಏನು ಮಾಡಿದ್ದಾರೆಂದರೆ, ಈ ಕಾಯಿದೆಯನ್ನೇ ಮುರಿಯಲು ಹೊರಟ್ಟಿದ್ದಾರೆ. ಕೆಲವರ ಸಹಾಯದಿಂದ ತಮ್ಮಲ್ಲಿರುವ ಹೆಚ್ಚುವರಿ ಜಮೀನನ್ನು ತಮ್ಮಲ್ಲಿಯೇ ಇಟ್ಟುಕೊಂಡಿದ್ದಾರೆ. ಇಂತಹವರ ಬಗ್ಗೆ ಸರ್ಕಾರ ಕ್ರಮ ತೆಗೆದುಕೊಳ್ಳಬೇಕು. ಈ ಹೆಚ್ಚುವರಿ ಜಮೀನಿನ ಬಗ್ಗೆ 1,45,775 ಅಪ್ಲಿಕೇಷನ್‌ಗಳು ಇವೆ. ಅಂದರೆ ಇದರ ಲೆಕ್ಕದಲ್ಲಿ ಬರತಕ್ಕಂಥ ಜಮೀನು 73, 63, 183 ಎಕರೆಗಳು, ಇದರಲ್ಲಿ ಡಿಸ್‌ಪೋಸ್

ಮಾಡಿರುವುದು 73,476 ಅಪ್ಲಿಕೇಷನ್‌ಗಳು. ಒಟ್ಟಿನಲ್ಲಿ ಹೇಳಬೇಕೆಂದರೆ ಹೆಚ್ಚುವರಿ ಜಮೀನು ಇರುವವರೆಲ್ಲಾ ಡಿಕ್ಲರೇಷನ್ ಕೊಟ್ಟಿಲ್ಲ. ನಾನು ಬಿಜಾಪುರ, ರಾಯಚೂರು, ಬೀದರ್, ಗುಲ್ಬರ್ಗ ಜಿಲ್ಲೆಗಳಲ್ಲಿ ಪ್ರವಾಸ ಮಾಡಿದಾಗ ಇದು ನನ್ನ ಗಮನಕ್ಕೆ ಬಂದಿದೆ. ಆದಕಾರಣ ಸರ್ಕಾರದವರು ಈ ಪ್ರಕರಣವನ್ನು ಸೂಕ್ಷ್ಮವಾಗಿ ನೋಡಬೇಕಾಗುತ್ತದೆ. ಅಧಿಕಾರಿಗಳ ಜೊತೆಯಲ್ಲಿ ಷಾಮೀಲಾಗಿ ಜಮೀನಿನ ಮಾಲೀಕರು ತಮ್ಮ ನೆಂಟರಿಷ್ಟರ ಹೆಸರಿನಲ್ಲಿಯೆ ಜಮೀನನ್ನು ಉಳಿಸಿಕೊಂಡಿದ್ದಾರೆ. ಮತ್ತು ಎಷ್ಟೋ ಪ್ರಕರಣಗಳಲ್ಲಿ ಭೂನ್ಯಾಯಮಂಡಲಿಗಳಲ್ಲಿ ಕೇಸನ್ನು ಭೂಮಾಲೀಕರ ಕಡೆಗೇ ತೀರ್ಮಾನ ಮಾಡಿದ್ದಾರೆ. ಬೀದರ್ ಜಿಲ್ಲೆಯ ಬಗ್ಗೆ ಹೇಳಬೇಕೆಂದರೆ I have seen the order. They have written the order in one word, ie., 'No', and in some order 'Yes', This is the Order written by the Officer. They have not written more than this. I have really seen this Officer. He has come to the conclusion there were weae no surplus lands although there were surplus lands.......... ಈ ಕಾರಣದಿಂದಲೇ ಭೂಸುಧಾರಣಾ ಮಸೂದೆಗೆ ಒಂದು ತಿದ್ದುಪಡಿಯನ್ನು ತಂದು ಡಿಕ್ಲರೇಷನ್ ಮಾಡಿಕೊಳ್ಳುವವರಿಗೆ ಮತ್ತೆ ಒಂದು ವರ್ಷದ ಅವಧಿಯನ್ನು ಕೊಟ್ಟಾಗ ಯಾರು ಹೆಚ್ಚುವರಿ ಭೂಮಿಯ ಬಗ್ಗೆ ಡಿಕ್ಲರೇಷನ್ ಕೊಟ್ಟಿದ್ದಾರೆ, ಅದನ್ನು ಪುನಃ ರಿವ್ಯೂ ಮಾಡಬೇಕು ಮತ್ತು ನಿಜವಾದಂಥ ಚಿತ್ರವನ್ನು ಗಣನೆಗೆ ತೆಗೆದುಕೊಂಡು ಭೂಮಾಲೀಕರ ಪರವಾಗಿ ಏನಾದರು ತೀರ್ಮಾನವಾಗಿದ್ದರೆ, ಅದನ್ನು ರದ್ದು ಮಾಡಬಹುದೆಂದು ತಿಳಿಸಿದಾಗ, ಈ ಒಂದು ಕಾನೂನು ಪ್ರಕಾರ ಕೆಲವು ಪ್ರಕರಣಗಳಲ್ಲಿ ಆದಂಥ ತೀರ್ಮಾನವನ್ನು ರದ್ದು ಮಾಡಿದ್ದಾರೆ. ನನ್ನ ಅಭಿಪ್ರಾಯದಲ್ಲಿ ಈ ಅವಧಿಯನ್ನು ಇನ್ನೂ ಒಂದು ವರ್ಷ ಕಾಲ ವಿಸ್ತರಣೆ ಮಾಡುವುದು ಒಳ್ಳೆಯದು. ಏಕೆಂದರೆ, ಇನ್ನೂ ಕೆಲವರು ಡಿಕ್ಲರೇಷನ್ ಕೊಡದೆ ಜಮೀನನ್ನು ತಮ್ಮ ನೆಂಟರ ಹೆಸರಿನಲ್ಲಿ ಇಟ್ಟುಕೊಂಡಿದ್ದಾರೆ. ಇಂತಹವರು ಡಿಕ್ಲರೇಷನ್ ಕೊಡಲು ಅವಧಿಯನ್ನು ಮತ್ತೆ ವಿಸ್ತರಣೆ ಮಾಡುವುದು ಒಳ್ಳೆಯದು. ಈ ವಿಚಾರದಲ್ಲಿ ಮಾನ್ಯ ಮಂತ್ರಿಗಳು ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ, ವಸೀಲಿಬಾಜಿಗೆ ಒಳಗಾಗದೆ.........

**ಶ್ರೀ ಎಸ್. ಬಂಗಾರಪ್ಪ:**– ನನ್ನನ್ನು ನೋಡಿದರೆ ತಮಗೆ ಯಾವ ರೀತಿ ಅನಿಸುತ್ತದೆ ಎಂಬುದನ್ನು ಹೇಳಿ?

**ಶ್ರೀ ಬಿ. ಬಸವಲಿಂಗಪ್ಪ:–** ತಾವು ಯಾರ ಪ್ರಭಾವಕ್ಕೂ ಒಳಗಾಗದಿದ್ದರೆ ಇದರ ಬಗ್ಗೆ ತಾವು ಮತ್ತೆ ತಿದ್ದುಪಡಿ ತಂದು ಮತ್ತೆ ಡಿಕ್ಲರೇಷನ್ ಕೊಡಲು ಪುನಃ ಅವಕಾಶ ಮಾಡಿಕೊಡಬೇಕಾಗಿತ್ತು. ಆದರೆ ತಾವು ಸುಮ್ಮನಿದ್ದೀರಿ.

**ಶ್ರೀ ಎಸ್. ಬಂಗಾರಪ್ಪ:–** ನಾನು ಸುಮ್ಮನಿದ್ದೇನೆಂದರೆ, ವಸೀಲಿಬಾಬಿಗೆ ಒಳಗಾಗಿದ್ದೇನೆಂದು ಅರ್ಥವೇ?

**ಶ್ರೀ ಬಿ. ಬಸವಲಿಂಗಪ್ಪ:–** ನಾವು ಈ ಭೂಸುಧಾರಣಾ ಕಾನೂನನ್ನು ಒಂದು ಉದಾತ್ತ ತತ್ವಗಳನ್ನು ಆಧಾರವಾಗಿ ಇಟ್ಟುಕೊಂಡು ಮತ್ತು ಒಂದು ಒಳ್ಳೆಯ ಧ್ಯೇಯಧೋರಣೆ ಇಟ್ಟುಕೊಂಡು ತಂದಿದ್ದೇವೆ. ಆದಕಾರಣ ಈಗ ಯಾರು ಯಾರನ್ನು ಭೂಸುಧಾರಣಾ ಮಂಡಲಿಗಳಲ್ಲಿ ಸದಸ್ಯರನ್ನಾಗಿ ನೇಮಕಮಾಡಿದ್ದೀರಿ, ಅವರು ಸರಿಯಾಗಿ ಕೆಲಸ ಮಾಡುತ್ತಿದ್ದಾರೆಯೇ ಎಂಬುದನ್ನು ತಾವು ನೋಡಿಕೊಳ್ಳಿ. ಯಾರಾದರೂ ಕಾನೂನಿಗೆ ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದಾರೆಂದು ತಿಳಿದುಬಂದರೆ. ಅವರು ಯಾವ ಪಕ್ಷದವರೇ ಆಗಿರಲಿ, ಮೊದಲು ಕಿತ್ತು ಹಾಕಿ, ಮತ್ತು ಈ ಕೆಲಸ ಮಾಡಲು ಒಳ್ಳೆಯ ಅನುಭವ ಹೊಂದಿರುವವರು ಯಾವ ಪಕ್ಷದಲ್ಲೇ ಇರಲಿ, ಅಂತಹವರನ್ನು ನೋಡಿ ಅಲ್ಲಿಗೆ ಹಾಕಿ ಎಂದು ಹೇಳುತ್ತೇನೆ.

**ಶ್ರೀ ಆರ್. ಗುಂಡೂರಾವ್:–** ನೀವು ಈ ಕಡೆಗೆ ಬನ್ನಿ. ನಿಮಗೇ ಈ ಕೆಲಸವನ್ನು ವಹಿಸಿಸುತ್ತೇನೆ.

**SRI S. BANGARAPPA:-** An offer has already been made by the Hon'ble Chief Minister. It is for the Hon'ble Member Sri Basavalingappa to accept the offer and complete the contract. I do not come in the way.

**ಶ್ರೀ ಆರ್. ಗುಂಡೂರಾವ್:–** ಇಷ್ಟು ಹೊತ್ತು ನಾನು ಅವರ ಮಾತನ್ನು ಕೇಳಿದೆ. ಯಾರು ಯಾರು ಏನೇನು ಮಾಡಿದ್ದಾರೆ, ದಗಲ್‌ಬಾಜಿಕೆಲಸ ಏನೇನು ಆಗಿದೆ ಎಂಬುದೆಲ್ಲಾ ಅವರಿಗೆ ಗೊತ್ತು. ಎಲ್ಲ ವಿಚಾರಗಳನ್ನು ಅವರು ತಿಳಿದುಕೊಂಡಿದ್ದಾರೆ. ಅದರ ಪ್ರಕಾರ ಇನ್ನೂ ಸ್ವಲ್ಪ ಕೆಲಸ ಏನಾದರೂ ಉಳಿದುಕೊಂಡಿದ್ದರೆ, ಅದನ್ನೆಲ್ಲಾ ಈ ಕಡೆಗೆ ಬಂದು ಪೂರ್ತಿ ಮಾಡಿ ಎಂದು ನಾನು ಹೇಳಿದ್ದು.

**ಶ್ರೀ ಎಸ್. ಬಂಗಾರಪ್ಪ:–** ಈಗ ಮಾನ್ಯ ಮುಖ್ಯಮಂತ್ರಿಗಳು ಹೇಳಿದಂತೆ. ಅವರು ಈ ಕಡೆಗೆ ಬಂದು ಈ ಇಲಾಖೆಗೆ ಸಂಬಂಧಪಟ್ಟಂತೆ ಉಳಿದಿರುವಂತಹ ಕೆಲಸಗಳನ್ನು ಮುಗಿಸಲು ಒಪ್ಪಿಗೆ ಕೊಟ್ಟರೆ, ಮತ್ತು ಅವರು ಆ ಒಂದು ಜವಾಬ್ದಾರಿಯನ್ನು ವಹಿಸಿಕೊಳ್ಳುವುದಾದರೆ, ಅದಕ್ಕೆ ನಾನು ಅಡ್ಡಿ ಬರುವುದಿಲ್ಲವೆಂದು ಹೇಳುತ್ತೇನೆ.

**SRI . A. LAKSHMI SAGAR:-** There is no time to loss for Mr. Basavalingappa to accept the offer made.

**ಶ್ರೀ ಬಿ. ಬಸವಲಿಂಗಪ್ಪ:–** ಈ ಭೂ ಹಂಚಿಕೆಯ ಕೆಲಸ ಸ್ಥಗಿತವಾಗಿದೆ. ಯಾರು ಯಾರು ಬಡವರಿದ್ದಾರೆ. ಅಂತಹವರ ಬಗ್ಗೆ ಆದಷ್ಟು ನಿಗಾ ಕೊಡಬೇಕಾಗುತ್ತದೆ. ಯಾರು ಯಾರು ಬಡವರಾಗಿರುತ್ತಾರೆ, ಅಂತಹವರೇನಾದರು ಒಂದು ಎಕರೆ ಇಲ್ಲವೇ ಎರಡು ಎಕರೆ ಸರ್ಕಾರದ ಜಮೀನನ್ನು ಬಗರ್ ಹುಕುಂ ಸಾಗುವಳಿ ಮಾಡಿದ್ದಾರೆ, ಅಂತಹ ಜಮೀನನ್ನು ಅವರಿಗೇ ಖಾಯಂ ಮಾಡಬೇಕೆಂದು 1977ನೇ ಇಸವಿಯಲ್ಲಿ ಪ್ರಯತ್ನ ಮಾಡಿದರೂ ಸಹ ಆ ಒಂದು ಕೆಲವು ಕಾರಣಗಳಿಂದ ಆಗಲಿಲ್ಲ. ಈ ಬಗರ್ ಹುಕುಂ ಸಾಗುವಳಿಯನ್ನು ಕೇವಲ ಬಡವರು ಮಾತ್ರ ಮಾಡುತ್ತಿಲ್ಲ. ಕಾಫಿ–ಪ್ಲಾಂಟೇಷನ್ ಇರುವವರು ಮತ್ತು ಒಳ್ಳೆಯ ಸ್ಥಿತಿವಂತರು ಸಹ ಬಗರ್–ಹುಕುಂ ಸಾಗುವಳಿ ಮಾಡುತ್ತಿದ್ದಾರೆ. ಇಂತಹವರು ಚಿಕ್ಕಮಂಗಳೂರು ಹಾಸನ ಹಾಗೂ ಕೂರ್ಗು ಜಿಲ್ಲೆಗಳಲ್ಲಿದ್ದಾರೆ. ಸುಮಾರು 20 ಸಾವಿರ ಎಕರೆಗಳಷ್ಟು ಸರ್ಕಾರದ ಜಮೀನನ್ನು ಈ ರೀತಿ ಕೆಲವರು ಬಗರ್–ಹುಕುಂ ಸಾಗುವಳಿ ಮಾಡುತ್ತಿದ್ದಾರೆಂದು ನನಗೆ ತಿಳಿದುಬಂದಿದೆ. ಪುನಃ ಈ ಬಗ್ಗೆ ಎರಡನೇ ವರದಿಯನ್ನು ಕೊಟ್ಟಿದ್ದಾರೆ. ಸರ್ವೆ ಡಿಪಾರ್ಟ್‌ಮೆಂಟ್‌ನವರು ಇದನ್ನು ಅಳತೆ ಮಾಡಿ ಎಷ್ಟು ಎಕರೆಯಷ್ಟು ಪ್ರದೇಶಗಳಲ್ಲಿ ಬಗರ್ ಹುಕುಂ ಸಾಗುವಳಿ ಮಾಡಿದ್ದಾರೆ ಎಂಬ ಬಗ್ಗೆ ವಿವರವನ್ನು ಕೊಟ್ಟಿದ್ದಾರೆ. ಅಲ್ಲಿ ಯಾರ್‍ಯಾರು ಬಗರ್‌ಹುಕುಂ ಸಾಗುವಳಿ ಮಾಡಿದ್ದಾರೆಯೋ ಅಂತಹವರ ಬಗ್ಗೆ ಏನು ಮಾಡಬೇಕೆಂಬುದನ್ನು ಸರ್ಕಾರದವರು ಯೋಚನೆ ಮಾಡಬೇಕು. ಈ ಬಗ್ಗೆ ಮಾನ್ಯ ಗುಂಡೂರಾಯರು ಏನು ಮಾಡುತ್ತಾರೆಯೋ ಗೊತ್ತಿಲ್ಲ.

**ಶ್ರೀ ಆರ್. ಗುಂಡೂರಾವ್:–** ಆ ಕೆಲಸವನ್ನು ಯಾರ ಕೈಯಲ್ಲೂ ಮುಂದುವರಿಸುವುದಕ್ಕೆ ಆಗಲಿಲ್ಲ ಎಂಬುದು ನಮಗೂ ನಿಮಗೂ ಗೊತ್ತಲ್ಲ.

**ಶ್ರೀ ಬಿ. ಬಸವಲಿಂಗಪ್ಪ:–** ಅದಕ್ಕೆ ಏನಾದರೂ ಒಂದು ವ್ಯವಸ್ಥೆ ಮಾಡಿ ಅದನ್ನು ಕೊನೆಗೊಳಿಸುವುದಕ್ಕೆ ಪ್ರಯತ್ನ ಮಾಡಬೇಕು. ಬಗರ್ ಹುಕುಂ ಸಾಗುವಳಿ ಜಮೀನನ್ನು ದೊಡ್ಡ ದೊಡ್ಡ ಜಮೀನುದಾರರಿಗೆ ಕೊಡುವುದಕ್ಕಾಗುವುದಿಲ್ಲ. ಚಿಕ್ಕವರು ಯಾರಿದ್ದಾರೆ. 2–3 ಎಕರೆ ಹೊಂದಿರತಕ್ಕಂಥವರು ಅವರಿಗೆ ಅದನ್ನು ಕೊಡುವುದು ಒಳ್ಳೆಯದು. ನಾವು ಹಿಂದೆ 2–3 ಎಕರೆ ಭೂಮಿ ಯಾರಿಗೆ ಇದೆ ಅಂತಹವರಿಗೆ ಕೊಟ್ಟಿದ್ದೇವೆ. ಆದರೆ ಬಹಳಷ್ಟು ಜಮೀನು ಇದ್ದರೂ ಕೂಡ ಬಲವಂತರಾದವರು ಕೆಲವರು ಏನು ಮಾಡಿದ್ದಾರೆ ಎಂದರೆ ಅತಿಕ್ರಮ ಪ್ರವೇಶ ಮಾಡಿ ಕಾಫಿ ಪ್ಲಾಂಟೇಷನ್ ಮಾಡಿದ್ದಾರೆ, ಅವರನ್ನು ಅಲ್ಲಿಂದ ಹೊರಗೆ ಓಡಿಸತಕ್ಕಂಥಾದ್ದು ಅವಶ್ಯವಿದೆ ಸರ್ಕಾರದವರು ದೊಡ್ಡ ಮನಸ್ಸು ಮಾಡಿ ಈ ಕೆಲಸವನ್ನು ಕೂಡಲೇ ಮಾಡಬೇಕು ಎಂದು ಹೇಳುತ್ತೇನೆ. ಮಾನ್ಯ ಗುಂಡೂರಾಯರು ಈ ದಿಕ್ಕಿನಲ್ಲಿ ಮುಂದೆ ಮುಂದೆ ಹೋಗಿ ಯಾರ್ಯಾರು ಬಗರ್ ಹುಕುಂ ಸಾಗುವಳಿ ಮಾಡಿದ್ದಾರೆ ಅಂತಹವರೆಲ್ಲರನ್ನೂ ಹೊರಗೆ ಹಾಕಿ ಈ ರೀತಿ ಆಗುವುದನ್ನು ಅಂತ್ಯಗೊಳಿಸುವುದಕ್ಕೆ ಏನಾದರೂ ಒಂದು ತೀರ್ಮಾನವನ್ನು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ನಾನು ಹಿಂದೆ ರೆವಿನ್ಯೂ ಖಾತೆಯನ್ನು ವಹಿಸಿಕೊಂಡಿದ್ದಾಗ ಇಲಾಖೆಗೆ ಸಂಬಂಧಪಟ್ಟಂತೆ ಹಲವಾರು ಯೋಜನೆಗಳನ್ನು ಪ್ರಾರಂಭ ಮಾಡಿದ್ದೆ. ಅದೆಲ್ಲವನ್ನೂ ಮಾನ್ಯ ಬಂಗಾರಪ್ಪನವರು ಮಾಡಬೇಕು ಎಂದು ಹೇಳುತ್ತೇನೆ. ಮಾನ್ಯ ಗಂಗಾಧರ್‌ರವರು ಆಗಲೇ ಮಾತನಾಡುತ್ತಾ ಈ ಜಮಾಬಂದಿ ವಿಷಯವಾಗಿ ಹೇಳಿದ್ದಾರೆ. ಅದನ್ನು ನಾವು ಹಿಂದೆ ಬಹಳ ಕಷ್ಟಪಟ್ಟು ತಯಾರು ಮಾಡಿದ್ದೇವೆ. ಈ ಬಗ್ಗೆ ಅಧಿಕಾರಿಗಳು ಯಾವರೀತಿ ಡೆವೆಲಪ್‌ಮೆಂಟ್ ಆಕ್ಟಿವಿಟೀಸ್ ತೆಗೆದುಕೊಳ್ಳಬೇಕು, ಪ್ರತಿ ತಿಂಗಳಲ್ಲಿ ಅದನ್ನು ಹೇಗೆ ಮಾಡಬೇಕು. ರೆವೆನ್ಯೂ ಡಾಕ್ಯೂಮೆಂಟ್ ಯಾವರೀತಿ ಇಡಬೇಕು, ಅಧಿಕಾರಿಗಳು ಯಾವ ರೀತಿ ಕೆಲಸ ಮಾಡಬೇಕು– ಎಂಬ ಬಗ್ಗೆ ಜಮಾಬಂದಿ ತಯಾರು ಮಾಡಿ ಕೆಲಸ ಪ್ರಾರಂಭ ಮಾಡಿದ್ದೇವೆ. ಮಾನ್ಯ ಬಂಗಾರಪ್ಪನವರು ಅದನ್ನು ಕಟ್ಟು ನಿಟ್ಟಾಗಿ ಜಾರಿಗೆ ಕೊಡುವುದಕ್ಕೆ ಸಾಹಸ ಮಾಡಿ ಪ್ರಯತ್ನ ಮಾಡಬೇಕು ಎಂದು ಹೇಳುತ್ತೇನೆ. ಇಷ್ಟು ಹೇಳಬೇಕಾಗಿತ್ತು, ನಾನು ಹೇಳಿದ್ದೇನೆ.

## 6. ರೈತ ಚಳವಳಿ (30ನೇ ಜುಲೈ 1980)

**ಶ್ರೀ ಬಿ. ಬಸವಲಿಂಗಪ್ಪ (ಯಲಹಂಕ):**– ಮಾನ್ಯ ಅಧ್ಯಕ್ಷರೇ, ನಿನ್ನೆಯಿಂದ ಧರಣಿ ಮುಷ್ಕರವನ್ನು ವಿರೋಧ ಪಕ್ಷದ ಸದಸ್ಯರಾದ ನಾವು ನಡೆಸಿದ್ದೇವೆ. ನಾವು ಧರಣಿ ಮುಷ್ಕರವನ್ನು ಮಾಡಲೇಬೇಕೆಂದು, ನಮ್ಮ ಉದ್ದೇಶವೇನೂ ಇರಲಿಲ್ಲ. ಆದರೆ 21–7–1980ನೇ ತಾರೀಖಿನಿಂದ...

**ಅಧ್ಯಕ್ಷರು:**– ವಿಷ ಘಳಿಗೆ ಹಾಗೆ ಇತ್ತು....

**ಶ್ರೀ ಬಿ. ಬಸವಲಿಂಗಪ್ಪ:**– ಸ್ವಾಮಿ, 21–7–1980 ರಿಂದ ಕರ್ನಾಟಕದಲ್ಲಿ ರೈತರ ಚಳುವಳಿ ಪ್ರಾರಂಭವಾಯಿತು. ಈ ಚಳುವಳಿಯ ಪರಿಣಾಮ ಏನಾಯಿತು ಎಂಬುದರ ಬಗ್ಗೆ ನಾನು ವಿಷದವಾಗಿ ಹೇಳತಕ್ಕಂಥದ್ದು ಅನಾವಶ್ಯಕ. ರೈತರು ಮತ್ತು ಬಳಕೆದಾರರು ರಾಜ್ಯದ ಮುಂದೆ ಏನು ಬೇಡಿಕೆಗಳನ್ನು ಇಟ್ಟಿದ್ದಾರೆ, ಅವರ ಸಂಕಷ್ಟಗಳನ್ನೇನು ಸರ್ಕಾರದ ಮುಂದಿಟ್ಟಿದ್ದಾರೆ–ಅವೆಲ್ಲವೂ ಕೂಡ ಇಲ್ಲಿ ಎಲ್ಲರಿಗೂ ಮನವರಿಕೆ ಆಗಿರತಕ್ಕ ಬೇಡಿಕೆಗಳಾಗಿವೆ. ಭೂ ಮಾಲೀಕರು ಮತ್ತು ರೈತರು ಅವರ ಕಷ್ಟಕಾರ್ಪಣ್ಯಗಳನ್ನು ಅನೇಕಸಾರಿ ಅಧಿಕಾರಿಗಳ ಮುಂದೆ ನಿವೇದನೆ ಮಾಡಿಕೊಂಡಿದ್ದಾಗ್ಯೂ ಸಹ ಅವರು ಈ ಬಗ್ಗೆ ಏನೂ ಮಾಡದಿದ್ದಾಗ ನಿರಾಶೆ ಹೊಂದಿದಂಥ ಅವರು ಬೇರೆ ಗತ್ಯಂತರವಿಲ್ಲದೆ ಈ ಅವಕಾಶವನ್ನು ಉಪಯೋಗಿಸಿಕೊಂಡು ಚಳುವಳಿಯನ್ನು ಪ್ರಾರಂಭ ಮಾಡಿದ್ದಾರೆ. ರೈತರ ಈ ಒಂದು ಚಳುವಳಿ ಎಲ್ಲರ ಕಣ್ಣುಗಳನ್ನು ತೆರೆಸಿದೆ. ಸರ್ಕಾರದವರ ಗಮನವನ್ನು ಸೆಳೆದಿದೆ ಮತ್ತು ವಿರೋಧಪಕ್ಷದವರ ಗಮನವನ್ನು ಸಹ ಸೆಳೆದಿದೆ. ಈ ಚಳುವಳಿಯ ಹಿನ್ನೆಲೆಯಲ್ಲಿ ರೈತರಿದ್ದಾರೆ. ಬಳಕೆದಾರರಿದ್ದಾರೆ, ಕಾರ್ಮಿಕ ವರ್ಗದವರಿದ್ದಾರೆ ಮತ್ತು ಬಡವರಿದ್ದಾರೆ. ಏಕಾಏಕಿ ಇಂಥ ಜನ ಬೇಸತ್ತು ಚಳುವಳಿಯನ್ನು ಪ್ರಾರಂಭ ಮಾಡಿದ್ದಾರೆ ನನಗೆ ಬಹಳ ಸಂತೋಷವಾಯಿತು. ಸರ್ಕಾರದ ಕಡೆಯಿಂದ ಮಾತನಾಡತಕ್ಕ ಮಾನ್ಯ ಸದಸ್ಯರು ಇದಕ್ಕೆ ಯಾರಿಂದಲೂ ರಾಜಕಾರಣ ಬಂದಿಲ್ಲ ಎನ್ನತಕ್ಕದ್ದನ್ನು ಒಪ್ಪಿಕೊಂಡಿದ್ದಾರೆ. ಆದುದರಿಂದ ಇದರಲ್ಲಿ ರಾಜಕಾರಣವೇನೂ ಇಲ್ಲ. ದಿನೇ ದಿನೇ ಜನ ಬೇಸತ್ತು ಯಾವ ರೀತಿಯಲ್ಲಿ ವರ್ತನೆ ಮಾಡಿದ್ದಾರೆ ಎಂಬುದು ಸರ್ಕಾರಕ್ಕೂ ಸಹ ಇವತ್ತು ಮನವರಿಕೆಯಾಗಿದೆ. ಆದುದರಿಂದ ಸರ್ಕಾರದವರು ಈಗಲಾದರೂ ಅವರ ಬೇಡಿಕೆಗಳನ್ನು ಶೀಘ್ರವಾಗಿ ಈಡೇರಿಸುವುದಕ್ಕೆ ಪ್ರಯತ್ನ ಮಾಡಬೇಕು. ಈ

ಬೇಡಿಕೆಗಳು ಬಹಳ ದಿವಸಗಳಿಂದಲೂ ಇದ್ದವು ಅವು ಸರ್ಕಾರದವರ ಗಮನಕ್ಕೆ ಬಂದಿದ್ದರೂ ಸಹ ಅವುಗಳನ್ನು ಹಿಂದಿನ ಸರ್ಕಾರದವರು ಬಗೆಹರಿಸಿದರೋ ಬಿಟ್ಟರೋ ಎನ್ನುವುದರ ಬಗ್ಗೆ ನಾನು ಇಲ್ಲಿ ಹೇಳುವುದಕ್ಕೆ ಹೋಗುವುದಿಲ್ಲ. ಒಂದು ವೇಳೆ ಅವು ಹಿಂದಿನ ಸರ್ಕಾರದವರ ಗಮನಕ್ಕೆ ಬಂದಿದ್ದರೂ ಸಹ ಬಗೆಹರಿಸದೇ ಇರಬಹುದು, ಬಗೆಹರಿಸಿಲ್ಲವೆಂದೇ ಇಟ್ಟುಕೊಳ್ಳೋಣ, ಈಗ ನೀವು ಅಧಿಕಾರಕ್ಕೆ ಬಂದಿದ್ದೀರಿ, ಈಗ ನೀವಾದರೂ ಅದನ್ನು ಕಿವಿಗೆ ಹಾಕಿಕೊಂಡು ಅವುಗಳನ್ನು ಬೇಗ ಪರಿಹಾರ ಮಾಡುವುದಕ್ಕೆ ಪ್ರಯತ್ನ ಮಾಡುವುದು ಬಹಳ ಅವಶ್ಯವೆಂದು ನಾನು ಒತ್ತಾಯ ಪೂರ್ವಕವಾಗಿ ಹೇಳುತ್ತಿದ್ದೇನೆ. ಈಗ ನಿಮ್ಮ ಸರ್ಕಾರವಿದೆ, ನೀವು ಜವಾಬ್ದಾರಿ ಸ್ಥಾನದಲ್ಲಿದ್ದೀರಿ, ಜನಗಳ ಬೇಡಿಕೆಯನ್ನು ಕೇಳಿಬಿಟ್ಟು ಅವರಿಗೆ ಪರಿಹಾರವನ್ನು ಒದಗಿಸಿಕೊಡತಕ್ಕ ಸ್ಥಾನದಲ್ಲಿದ್ದೀರಿ. ಆದುದರಿಂದ ನೀವು ಆ ಕೆಲಸವನ್ನು ಮಾಡಬೇಕು. ಹಿಂದಿನವರು ಯಾರೋ ಇದ್ದರೆ. ಅವರ ಬಗ್ಗೆ ದೋಷಾರೋಪಣೆಗಳನ್ನು ಮಾಡುತ್ತಾ, ಅವರು ಭರವಸೆ ಕೊಟ್ಟದ್ದರು, ಅವರು ಮಾಡಲಿಲ್ಲ, ಎಂದು ಸರ್ಕಾರ ಮೈಮರೆತು ಕುಳಿತುಕೊಳ್ಳತಕ್ಕ ಪ್ರಶ್ನೆ ಇಲ್ಲವೆಂದು ನಾನು ತಮ್ಮ ಮುಖಾಂತರ ಸರ್ಕಾರದವರ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ನಾವು ಅಲ್ಲಿ ಅಧಿವೇಶನ ಸೇರಿರುವಾಗ ಅಲ್ಲಿ ರೈತರು ಚಳುವಳಿ ಮಾಡಿದ್ದಾರೆ. ಅವರ ಕಷ್ಟಕಾರ್ಪಣ್ಯಗಳೇನು ಎಂಬುದನ್ನು ತಿಳಿದು ಅದನ್ನು ಪರಿಹಾರ ಮಾಡುವುದಕ್ಕೆ ತಮ್ಮ ಗಮನವನ್ನು ಸೆಳೆಯುವುದಕ್ಕೆ ನಾವು ಪ್ರಯತ್ನ ಮಾಡಲೇಬೇಕಾಗುತ್ತದೆ. ಅದು ಒಂದು ಕರ್ತವ್ಯದ ದೃಷ್ಟಿಯಿಂದ ಮತ್ತು ಜವಾಬ್ದಾರಿಯ ದೃಷ್ಟಿಯಿಂದ ತಮ್ಮ ಗಮನಕ್ಕೆ ತರಲೇಬೇಕೆಂದು ಹೇಳಿ ನಾವು ಪಣ ತೊಟ್ಟಿದ್ದೇವೆ ಮತ್ತು ಸಂಕಲ್ಪ ಮಾಡಿದ್ದೇವೆ. ಅದಕ್ಕಾಗಿ ನಿನ್ನೆ ಇವತ್ತು ಧರಣಿ ಮುಷ್ಕರವನ್ನು ಹೂಡಿದ್ದೇವೆ. ನಾವು ಅವರ ಪರವಾಗಿ ಕೆಲವು ಬೇಡಿಕೆಗಳನ್ನು ತಮ್ಮ ಮುಂದಿಟ್ಟಿದ್ದೇವೆ. ನಾವು ಯಾರೂ ಅಲ್ಲಿಗೆ ಹೋಗಿ ಕೇಳಿಕೊಂಡು ಬಂದಿಲ್ಲ, ಆದರೆ ನಮ್ಮ ಕಡೆಯ ಕೆಲವು ಮಾನ್ಯ ಸದಸ್ಯರುಗಳು ಮಾತ್ರ ಅಲ್ಲಿಗೆ ಹೋಗಿ ಅವರ ಕಷ್ಟಕಾರ್ಪಣ್ಯಗಳು ಏನು ಎಂಬುದನ್ನು ಕೇಳಿಕೊಂಡು ಬಂದಿದ್ದಾರೆ. ಅವರ ಕಷ್ಟಗಳೇನು ಎಂಬುದು ಪತ್ರಿಕೆಗಳಲ್ಲಿಯೂ ಸಹ ಪ್ರಕಟವಾಗಿದೆ. ಅದು ತಮಗೂ ಕೂಡ ಮನವರಿಕೆಯಾಗಿದೆ, ಮತ್ತೆ ಕೆಲವರಿಗೆ ಬಹಳ ವರ್ಷಗಳಿಂದ ಜವಾಬ್ದಾರಿ ಸ್ಥಾನದಲ್ಲಿದ್ದುದರಿಂದ, ಅವರ ಕಷ್ಟವೇನೆಂಬುದು ಈಗಾಗಲೇ ಮನವರಿಕೆಯಾಗಿದೆ, ಅದಕ್ಕೋಸ್ಕರವೇ ಅದಕ್ಕೆ ಸರ್ಕಾರದವರು ಶೀಘ್ರವಾಗಿ ಒಂದು ಪರಿಹಾರವನ್ನು ಕಂಡುಹಿಡಿಯಬೇಕೆನ್ನುವ ದೃಷ್ಟಿಯಿಂದ

ಸರ್ಕಾರದವರ ಗಮನವನ್ನು ಸೆಳೆಯುವುದಕ್ಕಾಗಿ ಧರಣಿ ಮುಷ್ಕರವನ್ನು ನಾವು ಮಾಡಿದ್ದೇವೆ. ಮತ್ತೆ ನಿನ್ನೆ ದಿವಸ ಮಾಡಿರತಕ್ಕ ಮುಷ್ಕರವನ್ನು ಪುನಃ ಮುಂದುವರಿಸಿಕೊಂಡು ಹೋಗುತ್ತೇವೆಂದು ಸಹ ಹೇಳಿದ್ದೇವೆ, ಆದರೆ ಇವತ್ತು ನಾವು ಏತಕ್ಕೆ ನಮ್ಮ ನಮ್ಮ ಸ್ಥಾನಗಳಲ್ಲಿ ಕುಳಿತುಕೊಂಡಿದ್ದೇವೆ ಎಂದರೆ, ಮಾನ್ಯ ಅಧ್ಯಕ್ಷರು ನಮ್ಮೆಲ್ಲರನ್ನೂ ಕರೆಸಿದ್ದರು. ಮಾನ್ಯ ಮುಖ್ಯಮಂತ್ರಿಯವರನ್ನು ಮತ್ತು ಅವರ ಸಹೋದ್ಯೋಗಿಗಳನ್ನು ಕರೆಸಿ ಮಾತುಕತೆ ನಡೆಸಿದರು. ಆಗ ನಾವು ಕೆಲವಾರು ಬೇಡಿಕೆಗಳನ್ನು ರೈತರ ಪರವಾಗಿ, ಬಳಕೆದಾರರ ಮತ್ತು ಬಡವರ ಪರವಾಗಿ ಇಟ್ಟಿದ್ದೇವೆ, ಅದಕ್ಕೆ ಮಾನ್ಯ ಮುಖ್ಯಮಂತ್ರಿಯವರು ಸಹ ಒಪ್ಪಿದ್ದಾರೆ. ಆ ರೀತಿ ಆದ ಒಪ್ಪಂದದ ಮೇಲೆ ನಾವು ಪುನಃ ಧರಣಿ ಮುಷ್ಕರವನ್ನು ಮುಂದುವರಿಸತಕ್ಕಂಥದ್ದು ಸರಿಯಲ್ಲವೆಂದು ನಮಗೆ ಮನವರಿಕೆಯಾದುದರಿಂದ ನಾವು ಎಲ್ಲಾ ಮಾನ್ಯ ಸದಸ್ಯರುಗಳೂ ಒಂದು ನಿರ್ಣಯಕ್ಕೆ ಬಂದು, ನಮ್ಮ ಈ ಒಂದು ಬೇಡಿಕೆಗಳೇನಿವೆ ಅದನ್ನು ಈ ಸದನದಲ್ಲಿ ಪ್ರಕಟಣೆ ಮಾಡಬೇಕು, ಅದಕ್ಕೆ ಮಾನ್ಯ ಮುಖ್ಯಮಂತ್ರಿಯವರು ಉತ್ತರ ಕೊಡಬೇಕೆಂದು ಹೇಳಿ ಒಂದು ಒಪ್ಪಂದಕ್ಕೆ ಬಂದಿದ್ದೇವೆ. ಆ ಒಪ್ಪಂದದ ಫಲವಾಗಿ ನಮ್ಮ ಸ್ನೇಹಿತರೆಲ್ಲಾ ವಾಪಸ್ಸು ಬಂದು ನಮ್ಮ ನಮ್ಮ ಸೀಟ್‌ಗಳಲ್ಲಿ ಕುಳಿತುಕೊಂಡು ಈ ಒಂದು ನಡವಳಿಕೆಯಲ್ಲಿ ಸಹಕಾರ ಕೊಡಬೇಕೆಂದು ನಿರ್ಧಾರ ಮಾಡಿದ್ದೇವೆ. ಅಂದರೆ ನಾವು ಪೂರ್ತಿಯಾಗಿ ಧರಣಿ ಮುಷ್ಕರವನ್ನು ಬಿಟ್ಟುಬಿಟ್ಟಿದ್ದೇವೆ ಎಂದು ಯಾರೂ ಆ ಭಾವನೆಯಿಂದ ತಪ್ಪಾಗಿ ತಿಳಿದುಕೊಳ್ಳಬಾರದು.

ಇಷ್ಟು ಹೇಳಿ, ನಾವೇನು ಬೇಡಿಕೆಗಳ ಬಗ್ಗೆ ಒಂದು ಒಪ್ಪಂದ ಮಾಡಿಕೊಂಡಿದ್ದೇವೆ ಆ ಬೇಡಿಕೆಗಳನ್ನು ಈ ಸದನದ ಮುಂದಿಡುವುದಕ್ಕೆ ನಾನು ಇಷ್ಟಪಡುತ್ತೇನೆ.

1) ನರಗುಂದ ಮತ್ತು ನೆಲಗುಂಡದಲ್ಲಿ ಗುಂಡೇಟಿನಿಂದ ಸಾವಿಗೀಡಾಗಿರುವ ಬಗ್ಗೆ 21–7–1980ರಲ್ಲಿ ನ್ಯಾಯಾಂಗ ತನಿಖೆಗೆ ಆದೇಶಿಸಿದೆ. ಅದರ ಬಗ್ಗೆ ಏನಾಗಿದೆ?

2) ಅದರ ಬಗ್ಗೆ ಅತಿ ಶೀಘ್ರದಲ್ಲಿ ಕ್ರಮ ಕೈಗೊಳ್ಳಬೇಕು .

3) ಇದಲ್ಲದೆ, ಸದನ ಸಮಿತಿಗಳನ್ನು ರೈತರು ಮತ್ತು ಬೆಲೆ ಏರಿಕೆ ವಿರುದ್ಧ ಹೋರಾಡುವವರ ಬೇಡಿಕೆಗಳನ್ನು ಪರಿಶೀಲಿಸಲು ಸಮಿತಿಯು ಮಧ್ಯಂತರ ತೀರ್ಪನ್ನು ನೀಡಿದ್ದು ಅದಕ್ಕೆ ಶಾಶ್ವತ ಪರಿಹಾರ ನೀಡಲು ಹೇಳಿದೆ.

4) ಪೋಲಿಸರು ಸತತವಾಗಿ ಕಳೆದ ಒಂದುವಾರದಿಂದ ಮಾಡುತ್ತಿರುವ ಪ್ರಕ್ರಿಯೆ ನಿಲ್ಲಿಸಬೇಕು.

5) ಬಂದಿಸಿರುವ ರೈತರು ಮತ್ತು ಮಲಪ್ರಭ ಯೋಜನೆಯ ಮುಗ್ದರು ಮತ್ತು ಅದರ ಪದಾಧಿಕಾರಿಗಳನ್ನು ಬಿಡುಗಡೆ ಮಾಡಬೇಕು.

6) ಸದಸ್ಯರು ಎರಡು ಸದನಗಳಲ್ಲು ಈ ವಿಚಾರವಾಗಿ ಮಾತನಾಡಿದ್ದರು ಯಾವುದೇ ಉಪಯೋಗವಾಗಿಲ್ಲ.

7) ವಿಚಾರಣಾ ಆಯುಕ್ತರು ಆಹಾರ ಮತ್ತು ನಾಗರೀಕ ಪೂರೈಕೆಗೆ ಒತ್ತುಕೊಡದಿದ್ದರೆ ಸಂಪೂರ್ಣವಾಗಿ ತೆಗೆಯಬೇಕು.

ಈ ಒಂದು ಬೇಡಿಕೆಗಳನ್ನು ನಾವೇನು ಇಲ್ಲಿ ಇಟ್ಟಿದ್ದೇವೆ, ಇವುಗಳನ್ನು ಸರ್ಕಾರದವರು ಬಹು ಮಂದಿ ಒಪ್ಪಿದ್ದಾರೆ. ಈಗ ನಮ್ಮ ಮುಖಂಡರುಗಳು ಮಾತನಾಡುವವರಿದ್ದಾರೆ. ಅವರುಗಳು ಮಾತನಾಡಿದ ಬಳಿಕ ಮಾನ್ಯ ಮುಖ್ಯ ಮಂತ್ರಿಯವರು ಇದಕ್ಕೆ ಉತ್ತರ ಕೊಡಬೇಕೆಂದು ಹೇಳಿ, ಮಾನ್ಯ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಅರಣ್ಯ ಮತ್ತು ಪಶುಸಂಗೋಪನೆ

## ಹುಲಿಗಳ ಸಂರಕ್ಷಣೆ (15ನೇ ಜೂನ್ 1990)

## ನಾಗರಹೊಳೆ ರಾಷ್ಟ್ರೀಯ ಅಭಯಾರಣ್ಯದಲ್ಲಿ ಹುಲಿಗಳ ಸಾವಿನ ಬಗ್ಗೆ

**ಡಾ. ಸಿದ್ದಲಿಂಗಯ್ಯ (ನಾಮನಿರ್ದೇಶನ ಹೊಂದಿದವರು):–** ಮಾನ್ಯ ಅರಣ್ಯ ಮತ್ತು ಪಶುಸಂಗೋಪನಾ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೇ?

ಅ) ಇತ್ತೀಚೆಗೆ ನಾಗರಹೊಳೆ ರಾಷ್ಟ್ರೀಯ ಅಭಯಾರಣ್ಯದಲ್ಲಿ ಐದು ಹುಲಿಗಳು ಕೊಲ್ಲಲ್ಪಟ್ಟಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಆ) ಹಾಗಿದ್ದಲ್ಲಿ, ಈ ಹುಲಿಗಳ ಹತ್ಯೆಗೆ ಕಾರಣರಾದ ತಪ್ಪಿತಸ್ಥರ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ?

**ಶ್ರೀ ಬಿ. ಬಸವಲಿಂಗಪ್ಪ (ಅರಣ್ಯ ಮತ್ತು ಪಶುಸಂಗೋಪನೆ ಸಚಿವರು):–**

ಅ) ನಾಗರಹೊಳೆ ಅಭಯಾರಣ್ಯದಲ್ಲಿ ದಿನಾಂಕ 6–3–90 ರಿಂದ 4–5–1990ರಲ್ಲಿ ಐದು ಹುಲಿಗಳು ಸತ್ತು ಹೋಗಿದ್ದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಆ) ಈ ಮೇಲಿನ ಐದು ಹುಲಿಗಳ ಪೈಕಿ ಒಂದು ಹುಲಿಯು ದಿನಾಂಕ 22–3–90 ರಂದು ಸಂತಾಪುರದಲ್ಲಿ ಸಂಶೋಧನೆ ಯೋಜನೆಯಡಿ ಎಲೆಕ್ಟ್ರಾನಿಕ್ ಕಾಲರಿಂಗ್ ಹಾಕಲಾಗಿದ್ದು. ಅದರ ಪ್ರಯುಕ್ತ ಸತ್ತಿರುತ್ತದೆ. ಉಳಿದ ನಾಲ್ಕು ಹುಲಿಗಳು ಮೇಲಿನ ಯೋಜನೆಯ ಕಾರ್ಯಕ್ರಮದ ಅಡಿ ಹಿಡಿದಿರುವುದಿಲ್ಲ.

ಈ ಕೂಡಲೇ ರೇಡಿಯೋ ಕಾಲರಿಂಗ್ ಮಾಡಿಸುವುದನ್ನು ನಿಲ್ಲಿಸಲಾಗುವುದು. ಇದಲ್ಲದೇ ಈ ಹುಲಿಗಳ ಸಾವಿಗೆ ಕಾರಣವನ್ನು ಸಮರ್ಥ ತಜ್ಞರ ಕಡೆಯ ತನಿಖೆ ಮಾಡಿಸಿ, ತಪ್ಪಿತಸ್ಥರ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು.

**ಡಾ. ಸಿದ್ದಲಿಂಗಯ್ಯ:–** ಸಚಿವರು ದಿಟ್ಟತನದ ಉತ್ತರ ಕೊಟ್ಟಿದ್ದಾರೆ. ಸಂತೋಷ ಕೆಲವು ವಿವರಗಳನ್ನು ಕೇಳುತ್ತೇನೆ ಅವರು ದಯವಿಟ್ಟು ಕೊಡಬೇಕು.

ಈಗ ಐದು ಹುಲಿಗಳ ಸಾವಾಗಿದೆ. ಎರಡು ವರ್ಷಗಳ ಹಿಂದೆ ಮೊಲ ಕೊಂದರು ಎಂದು ಒಬ್ಬ ಅಧಿಕಾರಿಯನ್ನು ರಾತ್ರೋರಾತ್ರಿ ಬಂಧನ ಮಾಡಿದ್ದರು. ಈಗ ಹುಲಿ ಕೊಂದಿದ್ದರೂ ಏಕೆ ದಸ್ತಗಿರಿ ಮಾಡಲಿಲ್ಲ? ಆಮೇಲೆ ಹುಲಿ ತಜ್ಞರೆಂದು ಕರೆದುಕೊಳ್ಳುವವರು ನಿಜವಾಗಿಯೇ ಪ್ರಾಣಿ ತಜ್ಞರೇ? ಅವರಿಗೆ ಈ ವಿಷಯದಲ್ಲಿ ಪರಿಣಿತಿ ಇದೆಯೇ? ಆಮೇಲೆ ಸಂಶೋಧನೆ ನಡೆಯುತ್ತಿತ್ತು ಎಂದಿದ್ದೀರಿ ಯಾವ ದೇಶದಿಂದ ಅದಕ್ಕೆ ಎಷ್ಟು ಹಣ ಬರುತ್ತಿತ್ತು? ಅನಂತರ ನಾಲ್ಕು ಹುಲಿಗಳು ಸತ್ತಿಲ್ಲ ಎಂದು ಉತ್ತರ ಬಂದಿದೆ ನನಗೆ ಅನುಮಾನ ಇದೆ. ಎರಡು ತಿಂಗಳಲ್ಲಿ 4 ಹುಲಿಗಳು ಸಾಯಬೇಕಾಗಿದ್ದರೆ ಅದಕ್ಕೆ ಕಾರಣ ಇಲ್ಲ. ಇದುವರೆಗೂ ಎಷ್ಟು ಹುಲಿಗಳು ಕಚ್ಚಾಡಿ ಸಾಯುವುದಾದರೆ ಇದುವರೆಗೂ ಎಷ್ಟು ಹುಲಿಗಳು ಕಚ್ಚಾಡಿ ಸತ್ತಿವೆ ಎಂದು ಅಂಕಿಅಂಶ ಕೊಡಬೇಕು.

**ಶ್ರೀ ಬಿ. ಬಸವಲಿಂಗಪ್ಪ (ಅರಣ್ಯ ಸಚಿವರು):–** ಸ್ವಾರಸ್ಯವಾದ ಪ್ರಶ್ನೆ ಕೇಳಿದ್ದಾರೆ ಇದಕ್ಕೆ ಸರ್ಕಾರ ಪೂರ್ಣವಾಗಿ ಉತ್ತರಕೊಟ್ಟಿದೆ. ಡೆಕನ್ ಹೆರಾಲ್ಡ್‌ನಲ್ಲಿ ವಿವರವಾಗಿ ಹೇಳಿಕೆ ಕೊಟ್ಟಿದ್ದೇನೆ. ಇಲ್ಲೂ ಕೊಡುತ್ತೇನೆ. ಇನ್ನು ಮುಂದೆ ಹುಲಿ ಮೇಲೆ ಪ್ರಯೋಗ ಮಾಡಬಾರದೆಂಬುದು ಸರ್ಕಾರದ ಸ್ಪಷ್ಟ ನಿಲುವು ಕಾರಣವೇನೆಂದರೆ ಕಾಡು ಪ್ರಾಣಿಗಳು ಮನುಷ್ಯರ ವಶಕ್ಕೆ ಬಂದರೆ ಅವು ಸ್ವತಂತ್ರ ಪ್ರಾಣಿಗಳಲ್ಲ. ಸರ್ಕಸ್ ಪ್ರಾಣಿಗಳಾಗಿಬಿಡುತ್ತವೆ.

ಹುಲಿಗಳ ಮೇಲೆ ಪ್ರಯೋಗ ಮಾಡಲಿಕ್ಕಾಗಿ ಹಿಂದಿನ ಸರ್ಕಾರದವರು, ಜನತಾ ಪಾರ್ಟಿಯ ಸರ್ಕಾರ ಇದ್ದಾಗ 1985ನೇ ಇಸವಿಯಲ್ಲಿ ಕಾರಂತರ ಮಗನಾದ ಶ್ರೀ ಉಲ್ಲಾಸ ಕಾರಂತರಿಗೆ ಪರವಾನಿಗೆಯನ್ನು ಕೊಟ್ಟರು. ಅಲ್ಲಿಂದ ಇಲ್ಲಿಯವರೆವಿಗೂ ಪ್ರಯೋಗವನ್ನು ಮಾಡಿಕೊಂಡು ಬಂದಿದ್ದಾರೆ ಒಂದೇ ತಿಂಗಳಲ್ಲಿ ಈಗ 1990ನೇ ಇಸವಿಗೆ 6–3–90 ರಿಂದ 4–5–90ರೊಳಗಾಗಿ ಇಷ್ಟು ಹುಲಿಗಳು ಸತ್ತು ಹೋಗಿವೆ. ಇದರ ಹಿಂದೆ ಹುಲಿಯ ಸಾವು ಇಲ್ಲವೇ? ಮುಂದೆ ಈ ರೀತಿ ಆಗಲಿಕ್ಕೆ ನಾವು ಬಿಡುವುದಿಲ್ಲ. ಸಾವು ಆಗಿಬಿಟ್ಟಿದೆ. ನನಗೆ ವರ್ತಮಾನ ಬಹಳ ತಡವಾಗಿ ತಿಳಿಯಿತು. ಇದರ ಬಗ್ಗೆ ಬೇರೆ ಕ್ರಮವನ್ನು ತೆಗೆದುಕೊಳ್ಳುವ ಬಗ್ಗೆ ಯೋಚನೆಯನ್ನು ಮಾಡುತ್ತಿದ್ದೇನೆ. ಈಗ ಒಂದು ವಿಷಯವನ್ನು ತಮಗೆ ಹೇಳುತ್ತಿದ್ದೇನೆ, ಈ ಕಾಡು ಪ್ರಾಣಿಗಳು ಲೈಫ್ ಸ್ಟೈಲ್‌ನ್ನು ಬದಲಾವಣೆ ಮಾಡಿಕೊಂಡು ಪ್ರಯೋಗದ ಒಳಗಡೆ ಅವು ಬರಲಿಕ್ಕೆ ಇಷ್ಟಪಟ್ಟಿದ್ದರೆ ಅದರ ಬಗ್ಗೆ ನಾವು ಯೋಚನೆ ಮಾಡಬೇಕಾಗುತ್ತದೆ. Whether they have changed life style in the forest area. I dont' think that

they have changed. I am a naturalist I believe in the nature.... ಇದರ ಬಗ್ಗೆ ಮಾನ್ಯ ಸದಸ್ಯರು ಏನು ಆತಂಕವನ್ನು ವ್ಯಕ್ತಪಡಿಸಿದ್ದಾರೆ, ನಾನು ಕೂಡಾ ಸಂಪೂರ್ಣವಾಗಿ ಅವರ ಜೊತೆಗೆ ಸೇರಿದ್ದೇನೆ. ಅವರ ಅಭಿಪ್ರಾಯಕ್ಕೂ ನನ್ನ ಅಭಿಪ್ರಾಯಕ್ಕೂ ವ್ಯತ್ಯಾಸವೇನೂ ಇಲ್ಲ. ಕ್ರಮ ತೆಗೆದುಕೊಳ್ಳುವುದರ ಬಗ್ಗೆ ಅಸೆಂಬ್ಲಿಯಲ್ಲಿಯೂ ಹೇಳಿದ್ದೇನೆ, ಇಲ್ಲಿಯೂ ಕೂಡಾ ಈಗಲೂ ಅದನ್ನೇ ಹೇಳುತ್ತೇನೆ, ಅವರಿಗೆ ಕೊಟ್ಟಿರತಕ್ಕಂಥ ಪರವಾನಿಗೆಯನ್ನು ರದ್ದು ಮಾಡಿದ್ದೇವೆ ಮತ್ತು ಎಷ್ಟು ಹುಲಿಗಳನ್ನು ಅವರು ಸಾಯಿಸುವುದಕ್ಕೆ ಕಾರಣರಾಗಿದ್ದಾರೆ, ಅದರ ಬಗ್ಗೆ ಕಂದಾಯದ ರೂಪದಲ್ಲಿ ನಿಗದಿ ಮಾಡಿರತಕ್ಕಂಥ ಮೊಬಲಗು ಏನು ಇದೆ ಪ್ರತಿ ಹುಲಿಯ ಮೇಲೆ ಆ ಮೊಬಲಗನ್ನು ವಸೂಲು ಮಾಡಲಿಕ್ಕೆ ಕ್ರಮ ತೆಗೆದುಕೊಳ್ಳುತ್ತೇನೆ ಎಂದು ಕೆಳಮನೆಯಲ್ಲಿಯೂ ಹೇಳಿದ್ದೇನೆ. ಈಗಲೂ ಇಲ್ಲಿಯೂ ಕೂಡಾ ಹೇಳುತ್ತಿದ್ದೇನೆ ಇದರಿಂದ ತಾವು ತೃಪ್ತಿಯಾಗಬಹುದು ಎಂದು ನನಗನ್ನಿಸುತ್ತದೆ ಇಂಥ ಒಂದು ಪ್ರಯೋಗಕ್ಕೆ ನಾವು ಅವರಿಗೆ ಪರವಾನಿಗೆಯನ್ನು ಕೊಡತಕ್ಕಂಥ ವಿಚಾರವನ್ನು ಮಾಡುವುದಿಲ್ಲ.

**ಶ್ರೀ ರಾಮಚಂದ್ರಗೌಡ:**– ಮಾನ್ಯ ಉಪಸಭಾಪತಿಗಳೇ, ತಾವು ಉತ್ತರದಲ್ಲಿ ಮಾನ್ಯ ಸಚಿವರು ಏನು ಹೇಳಿದ್ದಾರೆ ಎಂದರೆ "ಸಂಶೋಧನೆಯ ಯೋಜನೆಯ ಅಡಿಯಲ್ಲಿ ಎಲೆಕ್ಟ್ರಾನಿಕ್ ಕಾಲರ್ಸ್ ಹಾಕಿಕೊಂಡ ಪ್ರಯುಕ್ತ ಸತ್ತಿರುತ್ತವೆ" ಎಂದು ಹೇಳಿದ್ದಾರೆ. ಪೋಸ್ಟ್ ಮಾರ್ಟಂ ಮಾಡಿದಂಥ ಹುಲಿ ಅದು ಸತ್ತ ಮೇಲೆ ಯಾವ ಸ್ಥಿತಿಯಲ್ಲಿತ್ತು? ಹೇಗೆ ಇತ್ತು ಎಂದು ತಮಗೆ ಗೊತ್ತಿದೆಯೇ ಸ್ವಾಮಿ? ಅದು ಯಾವ ಪರಿಸ್ಥಿತಿಯಲ್ಲಿತ್ತು ಎಂದು ಪೋಸ್ಟ್ ಮಾರ್ಟಂ ಮಾಡಿದಂಥವರು ಏನಾದರೂ ಹೇಳಿದ್ದಾರೆಯೇ? ಅದರ ಪ್ರಯುಕ್ತವಾಗಿ ಹುಲಿ ಹೇಗೆ ಸತ್ತಿತು ಎಂದು ಏನಾದರೂ ಇದಕ್ಕೆ ಆಧಾರವಿದೆಯೇ?

**ಶ್ರೀ ಬಿ. ಬಸವಲಿಂಗಪ್ಪ:**- ಅದಕ್ಕೆ ಆಧಾರ ಸ್ಪಷ್ಟವಾಗಿದೆ. ಅರಣ್ಯ ಅಧಿಕಾರಿಗಳು ಆ ರೀತಿ ಹೇಳಿದ್ದಾರೆ. ಆ ರೀತಿ ಸತ್ತಿದೆ ಎಂದು ಹೇಳಿದ್ದಾರೆ. ಅದರ ಬಗ್ಗೆ ಪ್ರಯೋಗ ಮಾಡಿದ್ದೇವೆ. ಆ ವಿವರದಿಂದ ಸತ್ತಂಥ ಹುಲಿಗಳನ್ನು ಪರೀಕ್ಷೆ ಮಾಡಿದ್ದಾರೆ. ನನ್ನ ಹತ್ತಿರ ಇರತಕ್ಕಂಥ ಒಂದು ಸರ್ಟಿಫಿಕೇಟ್ ಪ್ರಕಾರ ಸತ್ತು ಕೊಳೆತು ನಾರಿದ ಮೇಲೆ ಅವರು ಪರೀಕ್ಷೆಯನ್ನು ಮಾಡಿದ್ದಾರೆ. ಅದಕ್ಕೆ ಸರ್ಟಿಫಿಕೇಟನ್ನು ಕೊಟ್ಟಿದ್ದಾರೆ. ಅದನ್ನು ಕೂಡಾ ತನಿಖೆ ಮಾಡುತ್ತೇನೆ ಎಂದು ಹೇಳಿದ್ದೇನೆ. ಅದನ್ನು ಮಾಡಿಸುತ್ತೇನೆ.

**ಶ್ರೀ ರಾಮಚಂದ್ರಗೌಡ:–** ನನಗೆ ಇದರ ಬಗ್ಗೆ ಒಂದು ಮಾಹಿತಿ ಸಿಕ್ಕಿದೆ. 7–1–90ರಲ್ಲಿ ಕಾಲರ್ಸ್ ಮಾಡಿದಂಥ ಒಂದು ಹುಲಿ ಹಳೆಯ ಗಂಡು ಹುಲಿ, ಅದಕ್ಕೆ ಹಲ್ಲು ಮುರಿದು ಹೋಗಿತ್ತು, ಗುಂಡಿನೇಟು ಬಿದ್ದಿತ್ತು, 17 ಇಂಚಿನ ಗಾಯ ಅದರ ಮೇಲೆ ಆಗಿತ್ತು. ಇನ್ನೊಂದು ಹುಲಿ ಅದಕ್ಕೆ ವಯಸ್ಸಾದ್ದರಿಂದ ಸತ್ತಿದೆ. ಕಾಲರ್ಸ್ ಮಾಡಿದಾಗ ಒಂದು ಸಣ್ಣ ವೋಲ್ಟೇಜ್ ಬ್ಯಾಟರಿಯಿಂದ ಸತ್ತಿದೆ, ಆ ಪ್ರಯುಕ್ತ ಸತ್ತಿದೆ ಎಂದು ವರದಿ ಬಂದಿರುವುದಾದರೆ ಅದು ಸತ್ಯಕ್ಕೆ ದೂರವಾದ ಮಾತು ಎಂದು ಹೇಳುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ:–** ಅದು ಸತ್ಯಕ್ಕೆ ದೂರವಾಗಿದ್ದರೆ ದೂರವಾಗಿರಲಿ. ನಾನು ಅದು ಸತ್ತಿದ್ದು ನೋಡಿಲ್ಲ. ಹುಟ್ಟಿದ್ದು ನೋಡಿಲ್ಲ. ಈಗ ಅವರು ಅಧಿಕಾರಿಗಳು ಏನು ಹೇಳಿದ್ದಾರೆ, ಅದನ್ನೇ ಹೇಳಬೇಕು.

**SRI RAMACHANDARA GOWDA:-** There are photographical evidence. I have got that

**ಶ್ರೀ ಬಿ. ಬಸವಲಿಂಗಪ್ಪ:–** ಸತ್ತಿದ್ದು ಸತ್ತು ಹೋಯಿತಲ್ಲಾ.

**ಶ್ರೀ ರಾಮಚಂದ್ರಗೌಡ:–** ಸತ್ತಿದ್ದು ಸತ್ತು ಹೋಯಿತು ಎಂದು ಹೇಳಿದರೆ ಇಲ್ಲಿ ತಾವು ಏನು ಉತ್ತರವನ್ನು ಕೊಟ್ಟಿದ್ದೀರಿ ಎಂದು ಹೇಳುತ್ತೇನೆ.

ತಾವು ಏನು ಉತ್ತರ ಕೊಟ್ಟಿದ್ದೀರಿ "ಸಂಶೋಧನೆ ಯೋಜನೆ ಅಡಿಯಲ್ಲಿ ಕಾಲರ್ ಹಾಕಲಾಗಿತ್ತು, ಅದರ ಪ್ರಯುಕ್ತ ಸತ್ತಿದೆ" ಎಂದು ಉತ್ತರಕೊಟ್ಟಿದ್ದೀರಿ. ನಾನು ಸತ್ತಿಲ್ಲ ಎಂದು ಹೇಳುತ್ತೇನೆ. ಸತ್ಯಕ್ಕೆ ದೂರವಾದ ಮಾತನ್ನು ಈ ಸಭೆಯಲ್ಲಿ ಹೇಳುತ್ತಿದ್ದೀರಿ ಎಂದು ನಾನು ಹೇಳುತ್ತೇನೆ. ಅದನ್ನು ಓನ್ ಮಾಡುತ್ತೀರಾ? I want to know that.

**ಶ್ರೀ ಬಿ. ಬಸವಲಿಂಗಪ್ಪ:–** ಹಾಕಿದ್ದಂತಹ ಎಲೆಕ್ಟ್ರಿಕಲ್ ಇನ್‌ಸ್ಟ್ರುಮೆಂಟ್‌ನಿಂದ ಸತ್ತಿದೆ ಎಂದು ಹೇಳುತ್ತಿದ್ದೇನೆ. ಮೂರು ಸಾರಿ ಕೇಳಿದ್ದೀರಿ. ನಾನು ಉತ್ತರ ಕೊಟ್ಟಿದ್ದೇನೆ.

**ಶ್ರೀ ರಾಮಚಂದ್ರಗೌಡ:–** ನೀವು ಉತ್ತರ ಕೊಟ್ಟಿದ್ದೀರಿ. ಇದಕ್ಕಾಗಿ ಸತ್ತಿಲ್ಲ ಎಂದು ನಾನು ಹೇಳುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ**:– ಪ್ರಿಂಟ್ ಮಾಡಿಯೇ ಕೊಟ್ಟಿದ್ದೇನೆ.

**ಶ್ರೀ ರಾಮಚಂದ್ರಗೌಡ**:– ಈಗ ಸಂಶೋಧನೆ ಮಾಡಲಿಕ್ಕೆ ಕೇಂದ್ರ ಸರ್ಕರದವರು ಅನುಮತಿಯನ್ನು 1985ರಲ್ಲಿ ಕೊಟ್ಟಿದ್ದು ನಿಜವೇ?

**ಶ್ರೀ ಬಿ. ಬಸವಲಿಂಗಪ್ಪ**:– ಯಾರು ಕೊಟ್ಟಿದ್ದರೋ, ಬಿಟ್ಟಿದ್ದರೋ ನಮ್ಮ ಸರ್ಕಾರದಲ್ಲಿ ಕೊಟ್ಟಿದ್ದರೆ ನಾನು ಈಗಾಗಲೇ ಹೇಳಿದ್ದೇನೆ. ಕೊಟ್ಟದ್ದು ಸರಿಯಲ್ಲ ಎಂದು ಅದನ್ನು ವಜಾ ಮಾಡುತ್ತೇನೆ ಎಂದು ಹೇಳುತ್ತೇನೆ. ಮುಂದೆ ಇನ್ನು ಏನು ಆಗಬೇಕು ನಿಮಗೆ?

**ಶ್ರೀ ರಾಮಚಂದ್ರಗೌಡ**:– ನಾವು ಆಧುನಿಕ ಯುಗದಲ್ಲಿದ್ದೇವೆ ಸಂಶೋಧನೆ ಮಾಡಬೇಕಾದಾಗ ಕಾಡು ಪ್ರಾಣಿಗಳಾಗಬಹುದು ಅಥವಾ ಮನುಷ್ಯರಿಗೆ ಆಗಬಹುದು ಅಥವಾ ಯಾವುದೇ ಆಗಬಹುದು ಮಾಡುವಾಗ ಸನ್ಮಾನ್ಯ ರಾಜೀವ್‌ಗಾಂಧಿಯವರು ಎಲೆಕ್ಟ್ರಾನಿಕ್ ಏಜ್‌ನಲ್ಲಿ ಹೋಗುತ್ತಿದ್ದೇವೆ 20ನೇ ಶತಮಾನಕ್ಕೆ ಹೋಗುತ್ತಿದ್ದೇವೆ ಎಂದು ಹೇಳುತ್ತಿರುವ ಈ ಸಂದರ್ಭದಲ್ಲಿ ಒಂದು ಸಣ್ಣಬ್ಯಾಟರಿ ಇಟ್ಟು ಸಂಶೋಧನೆ ಮಾಡಲು ಹೋಗುವಂತಾದ್ದರಲ್ಲಿ ತಪ್ಪು ಏನಿದೆ ಎಂದು ನನಗೆ ಅರ್ಥ ಆಗುವುದಿಲ್ಲ. ಅದಕ್ಕೆ ಯಾವ ಅಡಚಣೆ ಆಗಿದೆ ಎಂದು ನನಗೆ ಅರ್ಥವಾಗಲಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ**:– ಮಾನ್ಯ ಸದಸ್ಯರು ಕೇಳತಕ್ಕ ಪ್ರಶ್ನೆ ಅವರಿಗೆ ಅರ್ಥ ಆಗಿದೆ ಎಂದು ನನಗೆ ಅರ್ಥವಾಗುತ್ತಿಲ್ಲ. ನಾನು ಆಗಲೇ ಹೇಳಿದೆ. ಉತ್ತರ ಹೇಳುವಾಗ ಕಾಡು ಪ್ರಾಣಿಗಳ ಹೆಸರು ಹೇಳಬೇಕಾದರೆ ಕಾಡಿನಲ್ಲಿ ತಿರುಗಾಡಲಿಕ್ಕೆ ಅವಕ್ಕೆ ಸ್ವಾತಂತ್ರ ಇರಬೇಕು. ಜೀವನ ಮಾಡಲಿಕ್ಕೆ ಸ್ವಾತಂತ್ರ ಇರಬೇಕು. ಅವು ಕಾಲಾಂತರದಲ್ಲಿ ಜೀವನ ಮಾಡುತ್ತಿದ್ದವು. ಈಗಲೂ ಜೀವನ ಮಾಡುತ್ತಿವೆ. ಮನುಷ್ಯರು ಯಾರೂ ಸ್ವಾತಂತ್ರ ಹರಣಕ್ಕೆ ಪ್ರಯತ್ನ ಮಾಡಬಾರದು. ಸ್ವಾತಂತ್ರ ಹರಣ ಮಾಡಿದರೆ ಸರ್ಕಸ್ ಹುಲಿಗಳಾಗುತ್ತವೆ. ಅದಕ್ಕೋಸ್ಕರ ನಾನೂ ಶ್ರೀಮಾನ್ ಘೋರ್ಪಡೆಯವರು ಈ ಒಂದು ವಿಷಯದಲ್ಲಿ ಒಪ್ಪಿಕೊಂಡಿದ್ದೇವೆ.

**ಶ್ರೀ ಎಂ.ಸಿ. ನಾಣಯ್ಯ**:– ಬೇರೆ ಎಲ್ಲಾ ವಿಷಯದಲ್ಲಿ ವಿರುದ್ಧವೇ?

**ಶ್ರೀ ಬಿ. ಬಸವಲಿಂಗಪ್ಪ**:– ಮಾನ್ಯ ಸದಸ್ಯರು ಹೇಳಿದ ಪ್ರಶ್ನೆ, ಅವರ ಸಂಶಯ ನನಗೆ ಅರ್ಥ ಆಗುವುದಿಲ್ಲ.

**ಶ್ರೀ ಕೆ.ಎಸ್. ಮಹಮದ್ ಮಸೂದ್:**– ಮಾನ್ಯ ಸದಸ್ಯರು ಹೇಳುತ್ತಾರೆ. ಹುಲಿ ಎಲೆಕ್ಟ್ರಾನಿಕ್ ಉಪಕರಣದಿಂದ ಸತ್ತಿಲ್ಲ ಎಂದು. ಆದರೆ ಮಾನ್ಯ ಸಚಿವರು ಸತ್ತಿದೆ ಎಂದು ಹೇಳುತ್ತಿದ್ದಾರೆ. ಆದ್ದರಿಂದ ಇದಕ್ಕೆ ಸ್ಪಷ್ಟವಾದ ಉತ್ತರ ಕೊಡಬೇಕು.

**ಶ್ರೀ ರಾಮಚಂದ್ರ ಗೌಡ:**– ಮಾನ್ಯ ಸಚಿವರಿಗೆ ಅರ್ಥ ಆಗಿದೆ.

**ಶ್ರೀ ಬಿ. ಬಸವಲಿಂಗಪ್ಪ:**– ಇದರ ಪ್ರಯೋಗ ಮಾಡಬೇಕಾದರೆ ಟ್ರಾಂಕ್ವಿಲೈಸರ್ ಗನ್ ಇರುತ್ತದೆ, ಅಂದರೆ ಬಂದೂಕ. ಅದಕ್ಕೆ ವಿಷ ಹಾಕಿರುತ್ತಾರೆ. ಜಾಸ್ತಿ ವಿಷ ಹಾಕಿ ಹೊಡೆದರೆ ಸತ್ತು ಹೋಗುತ್ತದೆ. ಅದಕ್ಕೆ ಎಷ್ಟು ವಿಷ ಬೇಕೋ ಅಷ್ಟು ವಿಷ ಹಾಕಿ ಹೊಡೆದರೆ 2–3 ನಿಮಿಷದಲ್ಲಿ ಮೂರ್ಛೆ ಹೋಗುತ್ತದೆ. ಆಗ ಇವರು ಹೋಗಿ ಅದನ್ನು ಕಟ್ಟುವುದೋ ಅಥವಾ ಇನ್ನಾವುದೋ ಮಾಡುತ್ತಾರೆ. ಅದನ್ನು ಕಟ್ಟಿಕೊಂಡು ಹೋಗುವುದು ಕೂಡ ಮಾಡುತ್ತಾರೆ. ಇದು ಕ್ರೂರ ಪ್ರಯತ್ನ. ಪ್ರಾಣಿಗಳ ವಿರುದ್ಧ ಆಗಿರತಕ್ಕ ಕ್ರೂರ ಪ್ರಯತ್ನ. ವನ್ಯ ಜಾತಿಯ ವಿರುದ್ಧ ಆಗಿರತಕ್ಕ ಕ್ರೂರ ಪ್ರಯತ್ನ. ಇದಕ್ಕೆ ನಾನು ಅಲೋ ಮಾಡುವುದಿಲ್ಲ.

**ಶ್ರೀ ಡಿ.ಬಿ. ಕಲ್ಮಣಕರ್:**– ಸರ್ ಗೌರವಾನ್ವಿತ ಸದಸ್ಯರಾದ ರಾಮಚಂದ್ರೇಗೌಡ ಅವರು ಹೇಳಿರುವ ಅಂಶಗಳು ಸತ್ಯ ಮತ್ತು ಹುಲಿಯು ವಯಸ್ಸಾಗಿ ಸತ್ತಿರುತ್ತದೆ, ಅಲ್ಲದೆ ಹುಲಿ ಸಾವಿಗೆ ಕೊಟ್ಟಿರುವ ಮನರುತ್ತೆ ವಿದ್ಯುನ್ಮಾನ ಸಂಶೋಧನೆ ಯೋಜನೆಯ ಸತ್ಯಕ್ಕೆ ದೂರವಾಗಿದೆ. ಹಾಗಾಗಿ ಸರ್ಕಾರವು ಖುದ್ದು ಪರಿಶೀಲಿಸಿ ನಿಜವಾದ ಕಾರಣವನ್ನು ಕಂಡು ಹಿಡಿಯಬೇಕು.

ಹುಲಿಯ ಇಲಾಖೆಯಿಂದ ಕೊಟ್ಟಿರುವ ಸಲ್ಲಿಸಿರುವ ಕಾರಣಕ್ಕೆ ಸತ್ತಿಲ್ಲ ಇದೇನಾದರು ಸತ್ಯವೆನಿಸಿದರೆ ಸರ್ಕಾರವು ಕ್ರಮ ಕೈಗೊಳ್ಳುವುದೆಂದು? ಹಾಗಾಗಿ ಇತರೆ ಹುಲಿಗಳು ಸತ್ತಿಲ್ಲ ಹಾಗಾಗಿ ಅವುಗಳ ಸಾವಿಗೆ ಕಾರಣವೇನು ಮತ್ತು ಪರಿಣಿತ ಸಮಿತಿಯು ಪರೀಕ್ಷಿಸಿರುವುದೇನು?

**ಶ್ರೀ ಬಿ. ಬಸವಲಿಂಗಪ್ಪ:**– ಈಗ ಎಕ್ಸ್‌ಪರ್ಟ್ ಮ್ಯಾನ್‌ನಿಂದ ಅವು ಯಾವ ಕಾರಣದಿಂದ ಸತ್ತವು ಎಂದು ಪರೀಕ್ಷೆ ಮಾಡಿಸುತ್ತಾರೆ ಎಂದು ನಾನು ತಿಳಿದಿದ್ದೇನೆ; ಆದರೆ ಮನುಷ್ಯನ ಪ್ರಯೋಗ, ಹಿಂಸೆಯಿಂದ ಇವು ಸತ್ತಿದ್ದೇ ಹೊರತಾಗಿ ಬೇರೆ ಕಾರಣ ಯಾವುದೂ ಇಲ್ಲ. ಅವರು ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲಿಕ್ಕೆ

ಉತ್ತರ ಕೊಡುತ್ತಾರೆ. ಅದನ್ನು ನಾನು ಒಪ್ಪಿಕೊಳ್ಳುವುದಕ್ಕೆ ಆಗುವುದೇ ಇಲ್ಲ. ಕಾರಣವೇನೆಂದರೆ, ನನ್ನ ಅನುಭವಕ್ಕೆ ವಿರುದ್ಧವಾಗಿರತಕ್ಕಂಥಾದ್ದು ಇವೆಲ್ಲಾ ಎಕ್ಸ್‌ಪ್ಲನೇಷನ್ಸ್.

**ಶ್ರೀ ರಾಮಚಂದ್ರಗೌಡ:–** ಒಪ್ಪಿಕೊಳ್ಳುವುದಿಲ್ಲ ಎನ್ನುವುದು ಬಹಳ ದೊಡ್ಡ ವಿಚಾರವಲ್ಲ. ಸಭಾಪತಿಯವರೇ, He cannot take it as a personal thing. There are evidences. ನಾನು ಒಪ್ಪಿಕೊಳ್ಳುವುದಿಲ್ಲ ಅಂದರೆ ಏನರ್ಥ?

**SRI D.B. KALMANKAR:-** Whether it has died or not, it is not important. Reasons are important here, We have to take action if the reasons are not correct.

**ಶ್ರೀ ವಿ.ಹೆಚ್. ಗೌಡ:–** ಮಾನ್ಯ ಸಭಾಪತಿಯವರೆ, ಇದನ್ನು ಅರ್ಧ ಗಂಟೆ ಡಿಸ್ಕಷನ್‌ಗೆ ಇಡಿ.

**ಶ್ರೀ ಬಿ. ಬಸವಲಿಂಗಪ್ಪ:–** ಒಂದು ಗಂಟೆ.....

**ಶ್ರೀ ವಿ.ಹೆಚ್. ಗೌಡ:–** ಒಂದು ಗಂಟೆ ಮಾಡಿ.

**ಉಪ–ಸಭಾಪತಿಯವರು:–** ಇನ್ನೂ ಪ್ರಶ್ನೆಗಳಿವೆ. ಮತ್ತೆ ಸಪ್ಲಿಮೆಂಟರಿ ಜಾಸ್ತಿಯಾದ ಹಾಗೆ ಪೂರ್ತಿ ಅಜೆಂಡ ಮಾಡಲಿಕ್ಕೆ ಆಗುವುದಿಲ್ಲ. ಮುಂದೆ ಇದರ ಬಗ್ಗೆ ಕೊಶ್ಚನ್ಸ್.....

**ಶ್ರೀ ಎಂ.ಸಿ. ನಾಣಯ್ಯ:–** ಮಾನ್ಯ ಸಭಾಪತಿಯವರೆ, ಮಂತ್ರಿವರ್ಯರ ಈ ನಿಲುವಿನ ಬಗ್ಗೆ ಇದು ಒಂದರ ಬಗ್ಗೆ ಮಾತ್ರ ನಾನು ನಿಮ್ಮ ಜೊತೆಯಲ್ಲಿದ್ದೇನೆ.

**ಶ್ರೀ ಬಿ. ಬಸವಲಿಂಗಪ್ಪ:–** ವಂದನೆಗಳು.

**ಶ್ರೀ ಎಂ.ಸಿ. ನಾಣಯ್ಯ:–** ಮಾನ್ಯ ಸಭಾಪತಿಯವರೆ, ನಾನೂ ಕೂಡ ಆ ಭಾಗದಿಂದ ಬರತಕ್ಕವನು. ಪ್ರಯೋಗವನ್ನು ಸಂಪೂರ್ಣವಾಗಿ ನಿಲ್ಲಿಸಬೇಕು ಎಂದು ಹೇಳುವುದನ್ನು ನಾನು ಒಪ್ಪುವುದಿಲ್ಲ. ಆದರೆ ಇವತ್ತು ಈ ಹುಲಿಗಳ ಹಿಂಡು ಕೇವಲ 44 ಮಾತ್ರ ಇದೆ.

**ಶ್ರೀ ಬಿ. ಬಸವಲಿಂಗಪ್ಪ**:- ನಮ್ಮ ಪ್ರಕಾರ 21 ಅದರಲ್ಲಿ 5 ಹೋಗಿವೆ.

**ಶ್ರೀ ಕೆ.ಹೆಚ್. ರಂಗನಾಥ್**:- ಯಾವಾಗ ಸ್ವಾಮಿ, ಹುಲಿಗಳನ್ನು ಎಣಿಸಿದ್ದು? ಎಣಿಸಿದವರು ಯಾರು?

**ಡಾ|| ಎಂ.ಪಿ. ನಾಡಗೌಡ**:- ಸತ್ತ ಮೇಲೆ ಎಣಿಸಿದ್ದು.

**ಶ್ರೀ ಕೆ.ಹೆಚ್. ರಂಗನಾಥ್**:- ಕಂಡವರು ಯಾರು ಏನೋ ಹೇಳುತ್ತಾರೆ, ನಾವು ಕೇಳುತ್ತೇವೆ. ಒಂದು ಲಕ್ಷ ಮೀನಿನ ಮರಿಗಳನ್ನು ಬಿಟ್ಟುಬಿಟ್ಟಿದ್ದೇವೆ ಎಂದು ಹೇಳುತ್ತಾರೆ. ನಾನು ಒಪ್ಪುತ್ತೇವೆ ಅಷ್ಟೆ.

**ಶ್ರೀ ಎಂ.ಸಿ. ನಾಣಯ್ಯ**:- ಮಾನ್ಯ ಸಭಾಪತಿಯವರೆ. ಈಗ ಹುಲಿಗಳ ಹಿಂಡು ಎಷ್ಟು ಇದೆ ಎಂದು ಲೆಕ್ಕ ಹಾಕುವುದಕ್ಕೆ ಒಂದು ವೈಜ್ಞಾನಿಕ ವಿಧಾನವಿದೆ ಅದನ್ನು ಪಗ್‌ಮಾರ್ಕ್ ಮೇಲೆ ಲೆಕ್ಕ ಇಡುತ್ತೇವೆ. ಮೇಲ್ ಟೈಗರ್ ಎಷ್ಟಿದೆ ಮತ್ತು ಫಿಮೇಲ್ ಟೈಗರ್ ಎಷ್ಟಿದೆ ಎನ್ನುವುದನ್ನು ಪಗ್‌ಮಾರ್ಕ್ ಮೇಲೆ ಕಂಡುಹಿಡಿದಿದ್ದಾರೆ. ಮುಂಚೆ 44 ಹುಲಿಗಳು ಇತ್ತು.

**ಶ್ರೀ ಬಿ. ಬಸವಲಿಂಗಪ್ಪ**:- 21 ಇದೆ. ಅದರಲ್ಲಿ ಮೈನಸ್ 5 ಆಗಿದೆ.

**ಶ್ರೀ ಎಂ.ಸಿ. ನಾಣಯ್ಯ**:- ಈಗ ಸಚಿವರೇ ಹೇಳುತ್ತಿದ್ದಾರೆ. 21 ಇದೆ ಅದರಲ್ಲಿ ಮೈನಸ್ 5 ಆಗಿದೆ ಎಂದು ಈಗ ಬರೀ 16 ಉಳಿದುಕೊಂಡಿದೆ. ಕೇವಲ 16 ಹುಲಿಗಳು ಇರತಕ್ಕ ಅಭಯಾರಣ್ಯದಲ್ಲಿ ಪ್ರಯೋಗವನ್ನು ಮಾಡಲಿಕ್ಕೆ ನಾವು ನಿಷೇಧವನ್ನು ಹಾಕಲೇಬೇಕು. ಆದುದರಿಂದ ಎಲ್ಲಾದರೂ ಈ ಪ್ರಯೋಗವನ್ನು ಮಾಡಬೇಕಾಗಿದ್ದರೆ ಹುಲಿಗಳ ಹಿಂಡು 100-150 ಆಗಲಿ. ಹಾಗೆ ಆದ ಮೇಲೆ ಬಹುಶಃ ಈ ಪ್ರಯೋಗವನ್ನು ಮಾಡುವುದರ ಬಗ್ಗೆ ಆ ಸಂದರ್ಭದಲ್ಲಿ ತೀರ್ಮಾನ ಮಾಡೋಣ. ಮಂತ್ರಿಗಳು ಇದನ್ನು ನಾನು ನಿಲ್ಲಿಸುತ್ತೇನೆ ಎಂದು ಸ್ಪಷ್ಟವಾಗಿ ಹೇಳಬೇಕು. ಆದರೆ ತಮ್ಮ ಹೇಳಿಕೆಯಲ್ಲಿ ಈ ರೀತಿ ಹೇಳಿದ್ದೀರಿ;

"Till such time it is authoritatively known about the wild life style of tigers.....

ಅಂದರೆ ನಿಮ್ಮ ಮನಸ್ಸಿನಲ್ಲೂ ಕೂಡ ಗೊಂದಲ ಇದೆ. ಅಥಾರಿಟಿ ಎಂದು ನಮಗೆ ಗೊತ್ತಾಗುವವರೆಗೆ ಇದನ್ನು ನಾನು ನಿಲ್ಲಿಸುತ್ತೇನೆ ಎಂದರೆ, ಒಂದು ವೇಳೆ

ಅಥಾರಿಟಿ ಎಂದು ಗೊತ್ತಾದ ಮೇಲೆ ಪುನಃ ಇದನ್ನು ಶುರುಮಾಡುತ್ತೀರೇನು? ಆದ್ದರಿಂದ ತಾವು ದಯವಿಟ್ಟು ಇದರ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕು. ಕೇವಲ ಹದಿನಾರೇ ಹುಲಿಗಳು ಇರುವುದರಿಂದ ಅವರು ಏತಕ್ಕೋಸ್ಕರ ಇದನ್ನು ಮಾಡುತ್ತಾ ಇದ್ದಾರೆ? To find out the Breedings ಅವರು ಎಲ್ಲಾದರೂ ಇದನ್ನು ಮಾಡಲಿಕ್ಕೆ ಹೋದರೆ ಬ್ರೀಡ್ ಆಗುವುದೇ ನಿಂತುಹೋದೀತು. ಟ್ರಾಂಕುಲೈಸರ್ ಹಾಕಿ ಬ್ರೀಡಾಗುವುದನ್ನು ನಿಲ್ಲಿಸಬೇಕಾಗಿಲ್ಲ. ಹದಿನಾರೇ ಹುಲಿಗಳು ಇರುವುದರಿಂದ ಸರ್ಕಾರ ತೆಗೆದುಕೊಂಡಿರತಕ್ಕ ಕ್ರಮವನ್ನು ಸ್ವಾಗತ ಮಾಡುತ್ತೇವೆ. 150–200 ಹುಲಿಗಳು ಆದಾಗ ಪುನಃ ಅದನ್ನು ಶುರು ಮಾಡಲಿಕ್ಕೆ ತೀರ್ಮಾನ ತೆಗೆದುಕೊಳ್ಳಬಹುದು ನಮ್ಮ ಸಲಹೆ, ಸರ್ಕಾರ ಇದಕ್ಕೆ ಬದ್ಧವಾಗಿರಬೇಕು.

**ಶ್ರೀ ಎ. ರಾಮಣ್ಣ:–** ನಾಗರ ಹೊಳೆಯಲ್ಲಿ ಹುಲಿ ಸಂಶೋಧನೆ ಮಾಡುವುದಕ್ಕೆ ಸರ್ಕಾರ ಯಾವಾಗ ಆಜ್ಞೆ ಮಾಡಿತು? ಅದರ ಪ್ರತಿಯನ್ನು ಕೊಡಬಹುದೆ? ಆಜ್ಞೆ ನಂಬರು ಮತ್ತು ತಾರೀಖು ಯಾವುದು?

**ಶ್ರೀ ಬಿ. ಬಸವಲಿಂಗಪ್ಪ:–** ಇದು ಸಾರ್ವಜನಿಕ ಪತ್ರ. 1985ನೇ ಇಸವಿ 30ನೇ ತಾರೀಖು ಆಜ್ಞೆ ಹೊರಡಿಸಲಾಗಿದೆ. ತಮಗೆ ಬೇಕಾದರೆ ಕೊಡುತ್ತೇನೆ. ಅಲ್ಲಿಂದ ಅವರು ಕೆಲಸ ಮಾಡುತ್ತಿದ್ದಾರೆ. ಸತ್ಯನಾರಾಯಣರಾಯರೇ ನನಗೆ ವಿಜ್ಞಾನದಲ್ಲಿ ನಂಬಿಕೆ ಇಲ್ಲ ಅಂತ ಅಲ್ಲ, ನಂಬಿಕೆ ಉಂಟು, ಬೆಕ್ಕು ಹುಲಿ ಜಾತಿಗೆ ಸೇರಿದ ಬಾಲ ಭೋದೆಯಲ್ಲಿ ಒಂದು ಇದೆ. "ಎಲೆ ರೂಪಿನಿಂದಲೇ ಹುಲಿಯ ಜಾತಿಗೆ ಸೇರಿದವನೆಂದು ಗರ್ವಿಸಬೇಡ" ಎಂದು ಪ್ರಾರಂಭವಾಗುತ್ತದೆ. ಹುಲಿ ಬೆಕ್ಕು ಒಂದೇ ಜಾತಿಗೆ ಸೇರಿದ್ದು, ಪ್ರಯೋಗ ಮಾಡತಕ್ಕ ಮನುಷ್ಯ ಬೆಕ್ಕು ಏತಕ್ಕೆ ಇಟ್ಟುಕೊಳ್ಳಲಿಲ್ಲ? ಇದೊಂದು ಪ್ರಶ್ನೆ ಬರುತ್ತೆ. ಹುಲಿ ಮೇಲೆಯೇ ಪ್ರಯೋಗ ಬೇಕೇ? ಹುಲಿ ಸಂತತಿ ಉದ್ಧಾರವಾಗಬೇಕು, ಇನ್ನು ಮೇಲೆ ಬೆಳೆಸುವುದಕ್ಕೆ ಪ್ರಯತ್ನ ಮಾಡುತ್ತೇವೆ. ನಮ್ಮ ನಿಲುವಿಗೆ ಶ್ರೀಮಾನ್ ನಾಣಯ್ಯನವರು ಸಂಪೂರ್ಣ ಬೆಂಬಲ ಕೊಟ್ಟಿದ್ದಾರೆ. ತಾವು ಕೂಡ ಬೆಂಬಲ ಕೊಡಿ, ವೈಜ್ಞಾನಿಕ ಪ್ರಯೋಗ ಹುಲಿ ಮೇಲೆ ಬೇಡ.

## ಪ್ರಜಾಪ್ರಭುತ್ವ ಎಂದರೆ ಪ್ರಜೆಗಳೆ ಸಾರ್ವಭೌಮರು (9ನೇ ಫೆಬ್ರವರಿ 1987)

**ಶ್ರೀ ಬಿ. ಬಸವಲಿಂಗಪ್ಪ (ಯಲಹಂಕ):**– ಮಾನ್ಯ ಅಧ್ಯಕ್ಷರೇ, ಈ ಜನತಾ ಸರಕಾರದವರು ರಾಜ್ಯಪಾಲರ ಭಾಷಣದ ಮೇಲೆ ಭಾಷಣ ಮಾಡಲು ಈ ಸದನದಲ್ಲಿ ಇಬ್ಬರು ಒಳ್ಳೆಯ ಮುಖವಾಡ ಭಾಷಕಾರರನ್ನಾಗಿ ನೇಮಿಸಿದ್ದಾರೆ, ಅವರು ಬಹಳ ಚೆನ್ನಾಗಿ ಮಾತನಾಡಿದ್ದಾರೆ. But, they have argued a bad case. ರಾಜ್ಯಾಂಗದ ಪ್ರಕಾರ ಭಾಷಣದ ಉದ್ದೇಶ ಮತ್ತು ಗುರಿಯ ಬಗ್ಗೆ ವಿವರಗಳನ್ನು ಕೊಟ್ಟಿದ್ದರೆ ಚೆನ್ನಾಗಿತ್ತು. ಮಾನ್ಯ ಎಂ.ಪಿ. ಪ್ರಕಾಶ್‌ರವರು ಬಹಳ ಚೆನ್ನಾಗಿ ಮಾತನಾಡಿದರು, ವಿದ್ವತ್ ಪೂರ್ಣವಾಗಿ ಮಾತನಾಡಿದರು ಅವರಿಗೆ ಇತಿಹಾಸದಲ್ಲಿ ಶ್ರದ್ಧೆ ಇದೆ, ಅದನು ತಮ್ಮ ಭಾಷಣದಲ್ಲಿ ವಿಶ್ಲೇಷಣೆ ಮಾಡಿದ್ದಾರೆ.

**ಉಪಾಧ್ಯಕ್ಷರು:**– ಮಾನ್ಯ ಎಂ.ಪಿ. ಪ್ರಕಾಶ್‌ರವರ ಭಾಷಣದ ಮೇಲೆ, ಶ್ರೀ ರಾಮಯ್ಯನವರು ಭಾಷಣದ ಮೇಲೆ ಮಾತನಾಡುತ್ತೀರೋ ಇಲ್ಲವೇ ರಾಜ್ಯಪಾಲರ ಭಾಷಣದ ಮೇಲೆ ಮಾಡುತ್ತಿರುವ ಭಾಷಣವೇ?

**ಶ್ರೀ ಬಿ. ಬಸವಲಿಂಗಪ್ಪ:**– ಮಾನ್ಯ ಉಪಾಧ್ಯಕ್ಷರೇ ಅವರೇ ಮುಖ್ಯ. They are the spokesmen of the Government. I would like to take to them first before I go to other points. ರಾಮಯ್ಯನವರು ಕೂಡ ಚೆನ್ನಾಗಿ ಮಾತನಾಡಿದ್ದಾರೆ ಅಷ್ಟೇ ಕಾಮೆಂಟ್ಸ್ ಇಟ್ಟುಕೊಂಡು ಮಾತನಾಡಿದ್ದಾರೆ. ಶ್ರೀ ಎಂ.ಪಿ. ಪ್ರಕಾಶ್‌ರವರು ಮಾತನಾಡುವಾಗ ಒಳ್ಳೊಳ್ಳೇ ಪುಸ್ತಕಗಳನ್ನು ಓದಿದ್ದಾರೆ, ಅವುಗಳ ಹಿನ್ನೆಲೆಯಾಗಿ ಇಟ್ಟುಕೊಂಡು ಜನತಾ ಪಕ್ಷದವರ ಕೆಲಸಗಳನ್ನು ಪ್ರಸ್ತಾವನೆ ಮಾಡಿದ್ದಾರೆ, ಚೆನ್ನಾಗಿ ಮಾತನಾಡಿದ್ದಾರೆ, ಏನೇನು ನಿದರ್ಶನಗಳನ್ನು ಹೇಳಿದ್ದಾರೆ ಅವು ಜನತಾ ಪಕ್ಷದ ಕಾರ್ಯಕ್ರಮಗಳೇನೇ ಆದರೂ ಯಾವುದಕ್ಕೂ ಸಂಬಂಧವಿಲ್ಲ. ಮಾನ್ಯ ಪ್ರಕಾಶ್ ರವರು ಮಾನತಾಡುತ್ತಾ ಇಂಗ್ಲೆಂಡ್‌ನಲ್ಲಿ ನಮಗೆ ತಕ್ಕಂತಹ ಒಂದು ನಿದರ್ಶನವನ್ನು ಉದಾಹರಣೆ ಮಾಡಿ ಹೇಳಿದ್ದಾರೆ. ಅದು ಮಾತ್ರ ಅನ್ವಯಿಸುತ್ತ 16ನೇ ಶತಮಾನದಲ್ಲಿನ ಲಾಯರ್‌ಗಳು ವಾದ ಮಾಡುವಾಗ ಶಕ್ತಿ ಪ್ರದರ್ಶನ ಮಾಡಿ ವಾದ ಮಾಡುತ್ತಿದ್ದರು. ಯಾರು ಹೆಚ್ಚು ಶಕ್ತಿ ಪ್ರದರ್ಶನ ಮಾಡುತ್ತಿದ್ದರು, ಅದರ ಮೇಲೆ ನ್ಯಾಯಾಧೀಶರು ತೀರ್ಪು ಕೊಡುತ್ತಿದ್ದರು. ಅದರ ಹಿನ್ನೆಲೆಯಲ್ಲಿ ನಾನು

ಹೇಳುತ್ತಿದ್ದೇನೆ. 16ನೇ ಶತಮಾನದ ಬಗ್ಗೆ ಮಾನ್ಯ ಪ್ರಕಾಶ್‌ರವರು ಹೇಳಿದ್ದಾರೆ. ಅದನ್ನು ನಡೆಸುತ್ತಿದ್ದಾರೆ ಇನ್ನು ಕೆಲವರು ಮಾತನಾಡಿದ್ದಾರೆ. ಪತ್ರಿಕೆಗಳಲ್ಲಿ ಹೇಳಿಕೆಗಳನ್ನೂ ಕೊಟ್ಟಿದ್ದಾರೆ. ಆ ಹೇಳಿಕೆ ಪ್ರಕಾರ ಮೊನ್ನೆ ನಡೆದಂತಹ ಚುನಾವಣೆಯಲ್ಲಿ ಶಕ್ತಿ ಪ್ರದರ್ಶನವನ್ನು ಬಹಳ ಚೆನ್ನಾಗಿ ಮಾಡಿದ್ದೀರಿ, ಅದನ್ನು ಮಾಡದೇ ಹೋಗಿದ್ದರೆ ಜನತಾ ಪಕ್ಷದವರು ಗೆಲ್ಲತಕ್ಕಂತಹ ಪ್ರಶ್ನೆಯೇ ಬರುತ್ತಿರಲಿಲ್ಲ. ಜನಗಳ ಹತ್ತಿರ ಶಕ್ತಿ ಪ್ರದರ್ಶನ ಮಾಡಿ ನೀವು ಸ್ವಲ್ಪ ಮುಂದೆ ಹೋಗತಕ್ಕಂತಹ ಪ್ರಯತ್ನ ಮಾಡಿದ್ದೀರಿ. ಯಾರ್‍ಯಾರು ಮಹಾ ಪುರುಷರು ಹಿಂದೆ ಇದ್ದರು ನಮ್ಮ ದೃಷ್ಟಿಯಲ್ಲಿ, ನಿಮ್ಮ ದೃಷ್ಟಿಯಲ್ಲಿ ಅವರ ವಿಚಾರಗಳನ್ನು ನಾವು ಇಲ್ಲಿ ಹೇಳಿ ಅದು ಸರಿಯೆಂದು ಹೇಳಿದರೆ, ನಂಬಲಿಕ್ಕೆ ತಯಾರಿಲ್ಲ. ಹಿಂದಿನ ಮಾತುಗಳು ಹಿಂದೆ ಅದು ಆ ಕಾಲಕ್ಕೆ ಸಂಬಂಧಪಟ್ಟಿರತಕ್ಕಂತಹ ಜನಗಳಿಗೆ ಸಂಬಂಧಪಟ್ಟಿದ್ದು, ನಾವು ಅನುಸರಿಸತಕ್ಕಂತಹ ಸಮಯದಲ್ಲಿ ಈಗಿರತಕ್ಕಂತವರಿಗೆ ಅದು ಅನ್ವಯಿಸುವುದಿಲ್ಲ. The thoughts of ancient men are not relevant to the present day society. These talks are relevant to those people who speak about those things. ಆ ಕಾಲಕ್ಕೆ ಇರಬಹುದು, ಈ ಕಾಲಕ್ಕೆ ಇರಬಹುದು. ಮಾನ್ಯ ಜೆ. ಕೃಷ್ಣಮೂರ್ತಿಯವರು ಒಂದು ಮಾತನ್ನು ಹೇಳಿದ್ದರು ಅದನ್ನು ತಾವೂ ಕೂಡ ಕೇಳಿರಬಹುದು, ಇವರಿಬ್ಬರಿಗೂ ಹೇಳುತ್ತಿದ್ದೇನೆ. ಈಗಿನ ಕಾಲದಲ್ಲಿ ನಮ್ಮದೇನು ವಿಚಾರಗಳು ಇವೆ, ಈ ವಿಚಾರಗಳು ನಮ್ಮದೇ ಆಗಿವೆ, ಬೇರೊಬ್ಬರ ವಿಚಾರ ಏನಿದೆ ಅದು ಅವರದು, ಅವರದ್ದೇ ಆದ ವಿಚಾರವಾದ ಅದನ್ನು ನಾವು ಅನುಕರಣೆ ಮಾಡುವುದು ಕೂಡದು. ನಮ್ಮ ವಿಚಾರಕ್ಕೆ ತಕ್ಕಂತಹ ಮತ್ತು ನಮ್ಮ ಸಮಾಜಕ್ಕೆ ತಕ್ಕಂತಹ ನಮ್ಮ ಅಭಿಪ್ರಾಯಗಳನ್ನು ರೂಢಿಸಿಕೊಂಡು ಮುಂದೆ ಹೋದರೆ ಈ ಸಮಾಜ ಬೆಳವಣಿಗೆಯಾಗುತ್ತದೆ ಎಂದು ಶ್ರೀ ಜೆ. ಕೃಷ್ಣಮೂರ್ತಿಯವರು ಹೇಳಿದರು.

ಈಗ ಈ ಹಿನ್ನೆಲೆಯಲ್ಲಿ ಅವರು ಏನು ಹೇಳಿದ್ದಾರೆ, ಅದು ವಾಸ್ತವಕ್ಕೆ ದೂರವಾಗಿರತಕ್ಕಂಥದ್ದು ಶ್ರೀಮಾನ್ ರಾಮಯ್ಯನವರು ಈ ಸಮಾಜದಲ್ಲಿರತಕ್ಕಂಥ ಬಡವರ ಬಗ್ಗೆ ಬಹಳ ಚೆನ್ನಾಗಿ ವರ್ಣನೆ ಮಾಡಿದ್ದಾರೆ. ಹರಿದ ಬಟ್ಟೆಯಲ್ಲಿ ಹೋಗತಕ್ಕಂಥ ಅಥವಾ ಇರತಕ್ಕಂಥ ಹೆಣ್ಣು ಮಕ್ಕಳ ಬಗ್ಗೆ, ಅವರ ಹಸಿವಿನ ಬಗ್ಗೆ, ಬಟ್ಟೆ ಇಲ್ಲದವರ ಬಗ್ಗೆ, ತಾಳಿ ಕಟ್ಟಿಸಿಕೊಳ್ಳುವವರ ಬಗ್ಗೆ ಬಹಳ ಚೆನ್ನಾಗಿ ಹೇಳಿದ್ದಾರೆ. ಇದೆಲ್ಲಾ ತಾವು ಏನು ಭಾಷಣ ಮಾಡಿದ್ದೀರಿ. ಒಳ್ಳೆಯ ಭಾಷಣ

ಮಾಡಿದ್ದೀರಿ. ಇದಕ್ಕೆ ಕಾರಣವೆಂದರೆ ಬಡವರ ಕಣ್ಣಿನಲ್ಲಿ ಮಣ್ಣೆರಚಿ ಲಾಭ ಪಡೆಯಲು ಈ ಕೆಲಸ ಮಾಡಿದ್ದಾರೆ. ಪುರಂದರದಾಸರ ಕಾಲದಿಂದಲೂ ಬಲ್ಲಿದರ ಪ್ರಯತ್ನ ನಡೆಯುತ್ತಲೇ ಬಂದಿದೆ ಇದರ ಬಗ್ಗೆ ನನಗೆ ನಂಬಿಕೆ ಇಲ್ಲ. ವಚನಕಾರರು ಒಂದು ಮಾತು ಹೇಳಿದರು.

"ಹರಿಭಕ್ತರ ಕಂಡರೆ ವಿಷ್ಣುನಾಮ ಜಪಿಸುವರಯ್ಯ ಹರಭಕ್ತರ ಕಂಡರೆ ಶಿವನಾಮ ಜಪಿಸುವರಯ್ಯ."

ಸಂಬಂಧಕ್ಕನುಗುಣವಾಗಿ ಮಾತನಾಡಿ. ಬಡವರನ್ನು ಮರಳು ಮಾಡುವ ಪ್ರಯತ್ನ ಸಾಂಗವಾಗಿ ನಡೆದಿದೆ ಮತ್ತೆ ಅವರಿಗೆ ಕಾಂಗ್ರೆಸ್ ಪಕ್ಷದವರು ಏನು ಮಾಡಿದರು, ಬಿಟ್ಟರು ಅದು ಬೇರೆ ವಿಚಾರ. ಬಡವರ ಬಗ್ಗೆ ಕಾರ್ಯಕ್ರಮ ಹಾಕಿಕೊಂಡು ಅನುಷ್ಠಾನಕ್ಕೆ ತರುವವರಲ್ಲಿ ನಾನೂ ಒಬ್ಬ. ಹಳ್ಳಿಗಳಿಗೆ ಹೋಗಿ ಬಡವರು ಯಾವ ಜನಾಂಗಕ್ಕಾದರೂ ಸೇರಿರಲಿ, ಬಡವರು ಒಂದೇ ಎಂದು ಎದೆಸೆಟೆಸಿ ನಿಂತುಕೊಂಡು ಅವರ ಪರವಾಗಿ ಕೆಲಸ ಮಾಡಿದ್ದು ಅವಶ್ಯವಾಗಿದೆ. ಶ್ರೀಮಾನ್ ರಾಮಯ್ಯನವರು ಬಹಳ ಚೆನ್ನಾಗಿ ಮಾತನಾಡಿದ್ದಾರೆ.

**ಶ್ರೀ ವೈ.ಕೆ. ರಾಮಯ್ಯ:–** ನಿಮ್ಮ ಹಾಗೆ ನಾನೂ ಇದ್ದೇನೆ ಎಂದು ಏತಕ್ಕೆ ಭಾವಿಸಬಾರದು?

**ಶ್ರೀ ಬಿ.ಬಸವಲಿಂಗಪ್ಪ:–** ಕಮಿಟ್‌ಮೆಂಟ್ ಇರತಕ್ಕಂಥವರು ಎಂದು ಹೇಳಿದ್ದೇನೆ. ಸ್ವಾಮಿ, ಇಲ್ಲಿಗೆ ಐದು ಸಾರ್ವಜನಿಕ ಚುನಾವಣೆಗಳನ್ನು ನೀವು ಮಾಡಿದ್ದೀರಿ. ಮೂರು ಸಾರ್ವಜನಿಕ ಚುನಾವಣೆ, ಎರಡನ್ನು ಮೊನ್ನೆ ಮಾಡಿದ್ದೀರಿ. ಮೊನ್ನೆ ಮೊನ್ನೆ ಮಾನ್ಯ ಮುಖ್ಯಮಂತ್ರಿಗಳು ರಾಜೀನಾಮೆಕೊಟ್ಟರು. ಎಷ್ಟು ಸಲ ರಾಜೀನಾಮೆ ಕೊಡುತ್ತಾರೆ. ಫೆಬ್ರವರಿ 86 ರಲ್ಲಿ ರಾಜೀನಾಮೆಕೊಟ್ಟು ಸರ್ಕಾರವನ್ನು ಅತಂತ್ರ ಮಾಡಿದರು. ಸರ್ಕಾರ ಇದೆಯೋ ಇಲ್ಲವೋ ಎನ್ನುವ ಗೋಜಿಗೆ ಹೋಗಿ ಬರುವ ರೀತಿಯಲ್ಲಿ ವಾತಾವರಣ ಕಲ್ಪನೆ ಮಾಡಿಕೊಂಡರು. ಇದು ಆದ ಮೇಲೆ ಮೊನ್ನೆ ಮದ್ರಾಸ್‌ಗೆ ಹೋಗಿದ್ದರು. 15ನೇ ಜನವರಿ 1987ರ ಪತ್ರಿಕೆಯಲ್ಲಿ ಈ ರೀತಿ ಬಂದಿದೆ.

"Karnataka Chief Minister Mr. Ramakrishna Hegde said on wednesday that his mani task in the State is over after the creation of Panchayat Raj. He would now do his duty for the

consolidation of national opposition in future" he told newsmen here.

ಸ್ವಾಮಿ, ತಮಗೆ ವಿನಯಪೂರ್ವಕವಾಗಿ ಹೇಳುತ್ತೇನೆ. ಈವಾಗ ಜನತಾ ಪಾರ್ಟಿಯವರು ಏನಾಗಿದೆ ಎಂದರೆ ಕೆಮ್ಮಿದರೆ ಗಂಟಲು ಹೋಗುವ ಅಥವಾ ಶೀತವಾದರೆ ಮೂಗು ಹೋಗುವ ರೀತಿಯಾಗಿದೆ. ಇಂಥಾದ್ದನ್ನು ಇಟ್ಟುಕೊಂಡು ಕಾಲ ಕಳೆದರೆ ಏನು ಪ್ರಯೋಜನ? ಸರ್ಕಾರದಲ್ಲಿ ತಕ್ಕಂಥ ಜನರು ಇವರ ಒಂದು ಅನಿಶ್ಚಿತತೆಯ ಬಗ್ಗೆ ಯೋಜನೆಯನ್ನೇ ಮಾಡುವುದಿಲ್ಲ. ಸರ್ಕಾರಿ ಅಧಿಕಾರಿಗಳು ಹೇಗೆ ಇದ್ದಾರೆ ನನಗೆ ಗೊತ್ತು. ನಾನೂ ಬಹಳ ವರ್ಷ ಮಂತ್ರಿಯಾಗಿದ್ದೆ. ಅಧಿಕಾರಿಗಳು ಹೇಗೆ ಇರುತ್ತಾರೆ ಎಂದರೆ ಬಲವಾದ ಗಂಡ ಇದ್ದರೆ ಹೆಂಡತಿಯ ಹಾಗೇ ವರ್ತಿಸುತ್ತಾ. ಯಾರು ಅಶಕ್ತರಾಗಿರುತ್ತಾರೋ ಅವರ ಬಗ್ಗೆ ಹೇಗಿರುತ್ತಾರೆ ಎಂದರೆ ಆ ಅಧಿಕಾರಿಗಳು ತಮ್ಮ ಸ್ವೇಚ್ಛೆಯೇಕೆ ತಮಗೆ ಇಷ್ಟಬಂದ ಹಾಗೆ ನಡೆದು ಕೊಳ್ಳುತ್ತಾರೆ ಮಾನ್ಯ ಎಸ್.ಕೆ. ಕಾಂತಾರವರು, ಮಾನ್ಯ ರಾಮಯ್ಯನವರು ಅ ಅಧಿಕಾರಿಗಳ ಬಗ್ಗೆ ಚೆನ್ನಾಗಿ ಹೇಳಿದ್ದಾರೆ. ಆ ಅಧಿಕಾರಿಗಳಿಗೆ ಸಾರ್ವಜನಿಕರ ಹಿತರಕ್ಷಣೆ ಬೇಕಾಗಿಲ್ಲ, ಅವರಿಗೆ ಬಡವರ ಕಲ್ಯಾಣ ಬೇಕಾಗಿಲ್ಲ. ಯಾರಿಗೋಸ್ಕರವಾಗಿ ಈ ಎನ್. ಆರ್.ಇ.ಪಿ. ಮತ್ತು ಆರ್.ಎಲ್.ಇ.ಜಿ.ಪಿ. ಯೋಜನೆ ಇವೆ, ಅವಕ್ಕೆ 100ಕ್ಕೆ 100 ಪರ್ಸೆಂಟ್ ಹಣ ಕೇಂದ್ರ ಸರ್ಕಾರದಿಂದ ಏನು ಬರುತ್ತದೆ. ಈ ಹಣ ಯಾರಿಗಾಗಿ ಕೊಟ್ಟಿದ್ದಾರೆ ಅದರ ಬಗ್ಗೆ ಅವರು ಯೋಚನೆಯೇ ಹರಿಸುವುದಿಲ್ಲ. ಅಧಿಕಾರಿಗಳು ಬಡವರ ಕಲ್ಯಾಣವಾಗುವ ಹಾಗೆ ಧರ್ಮಬುದ್ಧಿಯಿಂದು, ದೇಶ ಭಕ್ತಿಯಿಂದ ಕೆಲಸ ಮಾಡಬೇಕು. ಅವರು ಹಾಗೆ ಮಾಡುತ್ತಾ ಇಲ್ಲ. ಬಂದಿರುವ ಹಣದಲ್ಲೇ ಅವರು ಅರ್ಧ, ಮುಕ್ಕಾಲು ಹಣವನ್ನು ತಿಂದುಬಿಡುತ್ತಾರೆ. ಅವರು ನಾಚಿಕೆ ಇಲ್ಲದೆ ಜೀವನ ಮಾಡುತ್ತಿದ್ದಾರೆ. ಅವರು ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ದೊಡ್ಡ ದೊಡ್ಡ ಆಸ್ತಿಯನ್ನು ಮಾಡಿಕೊಂಡಿದ್ದಾರೆ. ನಾನು ನೋಡಿದ್ದೇನೆ. ಯಾರು ರಾಜ್ಯದ ಮುಖ್ಯ ಮಂತ್ರಿಗಳಾಗಿರುತ್ತಾರೋ ಅವರು ಸ್ಥಿರವಾಗಿರಬೇಕು. ಮುಖ್ಯ ಮಂತ್ರಿಯವರು ಏನು ಹೇಳಿದ್ದಾರೆ

"My party is very strong. I have done my job. I will go to centre to consolidate opposition" ಅಂತ ಹೇಳಿದ್ದಾರೆ. Let him leave and go we have no objection at all.

**ಶ್ರೀ ಹೆಚ್.ಎಲ್. ತಿಮ್ಮೇಗೌಡ:**– ತಾವು we have no objection ಅಂತ ಹೇಳಿದರಲ್ಲಾ ನಿಮ್ಮದು ಏನಾದರೂ ಅಬ್ಜಕ್ಷನ್ ಇತ್ತೇ.

**ಶ್ರೀ ಬಿ. ಬಸವಲಿಂಗಪ್ಪ:**– ತಾವು ಹೋಗಿ ಸೂಜಿಯನ್ನು ಚುಚ್ಚಿ ಇಲ್ಲಿ ಬಂದಿದೀರಲ್ಲಾ. ನಿಮ್ಮ ಮುಖ್ಯಮಂತ್ರಿಗಳ ಸಮಾಚಾರ ಹೇಳಿದರೆ ನಿಮಗೆ ತಕ್ಷಣ ಸಿಟ್ಟು ಏತಕ್ಕೆ ಬರುತ್ತದೆ? ನಮ್ಮ ಸಂಖ್ಯೆ, ಹೆಚ್ಚಾಗಿ, ಬಹುಮತ ಎಲ್ಲಿಯವರೆಗೆ ಬರುವುದಿಲ್ಲವೋ ಪ್ರತಿ ದಿವಸವೂ ಅನಿಶ್ಚಿತವಾಗಿರತಕ್ಕಂಥಾ ಈ ಸರ್ಕಾರ ಜನರ ಬಗ್ಗೆ ನಿಚ್ಚಳವಾಗಿ ಕೆಲಸ ಮಾಡುವುದಕ್ಕೆ ಪ್ರಯತ್ನ ಮಾಡಬೇಕು. ಅದು ನಿಮ್ಮ ಕರ್ತವ್ಯ, ಆ ಕೆಲಸವನ್ನು ನೀವು ಮಾಡಲೇ ಬೇಕು. ನಾನು ಅದರ ಬಗ್ಗೆ ಹೆಚ್ಚು ಹೇಳಲಿಕ್ಕೆ ಹೋಗುವುದಿಲ್ಲ. ಅವರು 12–2–1986 ರಲ್ಲಿ ಏನು ರಾಜಿನಾಮೆ ಕೊಟ್ಟರು ಅದನ್ನು ನಾನು ಈಗ ಹೇಳುವುದಕ್ಕೆ ಹೋಗುವುದಿಲ್ಲ. ತಮಗೆಲ್ಲಾ ಗೊತ್ತಿರುವ ಹಾಗೆ ಮೊನ್ನೆ ತಾನೇ ಜಿಲ್ಲಾಪರಿಷತ್ ಮತ್ತು ಮಂಡಲ ಪಂಚಾಯತ್ ಚುನಾವಣೆಗಳನ್ನು ತಾವು ಮಾಡಿದ್ದೀರಿ. ಬಹಳ ಗ್ರಾಮಗಳಿಗೆ ನಾವು ಹೋಗಿದ್ದೇವೆ. ಪ್ರಚಾರ ಮಾಡಿದ್ದೀರಿ "ನಿಮ್ಮ ಅಧಿಕಾರ ನಿಮಗೇ ಕೊಡುತ್ತೇವೆ" ಎಂದು. ನೀವು ಏನು ಕೊಡುವುದು, ಅವರ ಅಧಿಕಾರ ಅವರ ಹತ್ತಿರವೇ ಇದೆ. ಈ ಪ್ರಜಾಪ್ರಭುತ್ವದ ಅರ್ಥ ಏನು? ಅನ್ನುವುದನ್ನು ತಾವು ಅರ್ಥ ಮಾಡಿಕೊಳ್ಳಲಿಲ್ಲ. ಪ್ರಜಾಪ್ರಭುತ್ವ ಎಂದರೆ ಪ್ರಜೆಗಳೇ ಸಾರ್ವಭೌಮರು ವಾಸ್ತವಿಕವಾಗಿ ಸಾರ್ವಭೌಮತ್ವ ಇದೆ, ಅವರು 5 ವರ್ಷಕ್ಕೊಂದು ಸಾರಿ ಸಾರ್ವಭೌಮತ್ವವನ್ನು ಧಾರೆ ಎರೆಯುತ್ತಾರೆ. ಅವರಿಂದ ಚುನಾಯಿತರಾದ ಪ್ರತಿನಿಧಿಗಳು ಜನರ ಪರವಾಗಿ ಸಾರ್ವಭೌಮರು, ಅವರು ನಮಗೆಲ್ಲಾ ಮತ್ತೆ 5 ವರ್ಷದವರೆಗೆ ನಾವು ಅವರನ್ನು ಕೇಳುವ ಹಾಗೆ ಇಲ್ಲ. ಅವರನ್ನು ಒಂದು ವೇಳೆ ವಾಪಸ್ಸು ಕರೆಯಿಸುವುದಿದ್ದರೆ. ಅವರೇ ನಮ್ಮನ್ನು ರೀಕಾಲ್ ಮಾಡಬೇಕು. ಇದನ್ನು ರಾಜಕೀಯವಾಗಿ ಉಪಯೋಗಿಸಿದ್ದೀರಿ. ಮೊನ್ನೆ ತಾನೇ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತ್ ಚುನಾವಣೆ ಮಾಡಿದ್ದೀರಿ. ಅವರಿಗೆ ಏನು ಹೇಳಿದಿರಿ ಎಂದರೆ "ನಿಮ್ಮ ಅಧಿಕಾರ ನಿಮಗೇ ಕೊಟ್ಟಿದೆ" ನೀವು ಏನು ಕೊಟ್ಟದ್ದು? ಅವರಿಗೆ ಕೊಡುವ ಅಧಿಕಾರ ನಿಮಗೇ ಇಲ್ಲವೇ ಇಲ್ಲ. ಇಲ್ಲಿ ಜನರಿಗೆ ಅಧಿಕಾರ ಕೊಡುವುದು ಏನಿದೆ ಜನರೇ ಸಾರ್ವಭೌಮರಿದ್ದಾರೆ. ಆದರೂ ಅವರಿಗೆ ನಿಮ್ಮ ಅಧಿಕಾರವನ್ನು ನಿಮಗೇ ಕೊಟ್ಟಿದ್ದೇವೆ ಎಂದು ಹೇಳುವುದಕ್ಕೆ ಇವರು ಯಾರು? ಇವರೇನು ಪೂಜಾರಿಗಳೇ ಅಥವಾ ಮಧ್ಯಸ್ಥಗಾರರೇ? ನಿಮ್ಮ ಅಧಿಕಾರವನ್ನು ನಿಮಗೇ ಕೊಟ್ಟಿದ್ದೇವೆ ಅಂದರೆ ಯಾರಿಗೆ ಕೊಟ್ಟಿದ್ದಾರೆ?

**ಶ್ರೀ ಬಿ. ರಾಚಯ್ಯ:**– ಇದಕ್ಕೆ ಸಂಬಂಧಪಟ್ಟ ಮಸೂದೆಯನ್ನು ಇಲ್ಲಿ ಪಾಸ್ ಮಾಡುವಾಗ ಈ ಒಂದು ತತ್ವವನ್ನು ನೀವೆಲ್ಲರೂ ಒಪ್ಪಿದ್ದೀರಿ.

**ಶ್ರೀ ಬಿ. ಬಸವಲಿಂಗಪ್ಪ:**– ಈ ಒಂದು ಮಸೂದೆಯಿಂದ ಜನರ ಸಾರ್ವಭೌಮತ್ವವನ್ನು ಯಾರೂ ಸಹ ಕಿತ್ತು ಕೊಳ್ಳುವುದಕ್ಕಾಗಿವುದಿಲ್ಲ. ಇಂತಹ ಡೋಂಗಿ ಭಾಷೆಯನ್ನು ಜನರ ಮುಂದೆ ಉಪಯೋಗಿಸಿದರೆ ಜನರು ನಿಮ್ಮನ್ನು ಹಿಂಬಾಲಿಸುತ್ತಾರೆಂದು ನೀವು ತಿಳಿದುಕೊಳ್ಳಬಾರದು. ಮಾನ್ಯ ಎಸ್. ಬಂಗಾರಪ್ಪನವರು ಈಗ ಇಲ್ಲಿ ಇಲ್ಲ. ಅವರು ಈಗ ಇದ್ದಿದ್ದರೆ ಏನಾದರೂ ಹೇಳುತ್ತಿದ್ದರು. ಚುನಾವಣೆ ಸಂದರ್ಭದಲ್ಲಿ ಇವರು ಜನರಿಗೆ ಹೆಂಡ ಕುಡಿಸಿದರೆಂದು ಎಲ್ಲರೂ ಹೇಳುತ್ತಿದ್ದಾರೆ. ನಾನು ಸಹ ಇದನ್ನು ಕಣ್ಣಿಂದ ನೋಡಿದ್ದೇನೆ. ಆದರೆ ನಾನು ಇದರ ವಿವರಕ್ಕೆ ಹೋಗುವುದಿಲ್ಲ. ಆದರೆ ಇವರು ಆ ಸಮಯದಲ್ಲಿ ತಮ್ಮ ಅಧಿಕಾರವನ್ನು ನಾನಾ ರೀತಿಯಿಂದ ದುರುಪಯೋಗ ಪಡಿಸಿಕೊಂಡಿರುವುದನ್ನು ನಾನು ಕಣ್ಣಾರೆ ನೋಡಿದ್ದೇನೆ. ಮಾನ್ಯ ರಾಮಯ್ಯನವರು ಹೇಳಿದಂತೆ ಜನರಿಗೆ ಹೆಂಡ ಕುಡಿಸುವ ಕೆಲಸ ಏನಿದೆ, ಅದನ್ನು ಯಾರು ಮಾಡಿದರೂ ತಪ್ಪೇ ಆಗುತ್ತದೆ. ಜನರೇ ಸಾರ್ವಭೌಮರಾಗಿರುವಾಗ ಅವರನ್ನು ಈ ರೀತಿಯಿಂದ ದಾರಿ ತಪ್ಪಿಸುವುದಕ್ಕೆ ಪ್ರಯತ್ನ ಮಾಡಿದ್ದು ಸರಿಯಲ್ಲ ಜನರೇ ಸಾರ್ವಭೌಮರೆಂದು ಹೇಳುವಾಗ ಅವರ ಕೈಯಲ್ಲಿ ಇಂತಹ ಕೆಲಸ ಮಾಡಿಸುವುದು ಸರಿಯೇ? ಇಂತಹ ಕೆಲಸಕ್ಕಾಗಿ ಹಣ ಖರ್ಚು ಮಾಡಿದ್ದು ಸರಿಯೇ?

**ಶ್ರೀ ಬಿ. ರಾಚಯ್ಯ:**– ಸಾರ್ವಭೌಮ ಪ್ರಜೆಗಳು ಯಾರಿದ್ದಾರೆ, ಅವರ ಬಗ್ಗೆ ಈ ರೀತಿ ಮಾತನಾಡುವುದು ಮತ್ತು ಅವರ ಮೇಲೆ ಈ ರೀತಿ ಆಪಾದನೆ ಹೊರಿಸುವುದು ಸರಿಯಲ್ಲ.

**ಶ್ರೀ ಬಿ. ಬಸವಲಿಂಗಪ್ಪ:**– ಈಗ ನಾನು ಹೇಳಿದ್ದೇ ಬೇರೆ, ಅವರು ಹೇಳುತ್ತಿರುವುದೇ, ಬೇರೆ ಆಗಿದೆ, ನಾನು ಇನ್ನೂ ತಮ್ಮ ಇಲಾಖೆಗೆ ಸಂಬಂಧಪಟ್ಟ ಲಾ–ಅಂಡ್ ಆರ್ಡರ್ ವಿಷಯಕ್ಕೆ ಇನ್ನೂ ಬಂದಿಲ್ಲ. ಜಿಲ್ಲಾ ಪರಿಷತ್ ಮತ್ತು ಮಂಡಲ್ ಪಂಚಾಯತ್ ಚುನಾವಣೆಗಳ ಸಮಯದಲ್ಲಿ ಇವರು ತಮ್ಮ ಅನುಕೂಲಕ್ಕೆ ತಕ್ಕಂತೆ ಅಧಿಕಾರಿಗಳನ್ನು ಬಳಸಿಕೊಂಡು ತಮ್ಮ ಕೆಲಸಗಳನ್ನು ಮಾಡಿಸಿಕೊಂಡಿರುವುದನ್ನು ನಾನು ನನ್ನ ಕಣ್ಣಿಂದ ನೋಡಿದ್ದೇನೆ. ಪೋಲೀಸರು

ತಮ್ಮ ರೆವಿನ್ಯೂ ಅಧಿಕಾರಿಗಳು ಇವರ ಏಜೆನ್ಸಿ ತರಹ ಕೆಲಸ ಮಾಡಿದ್ದಾರೆ. ಶ್ರೀಮತಿ ನಾಗರತ್ನಮ್ಮನವರು ಈ ಬಗ್ಗೆ ಬಹಳ ಚೆನ್ನಾಗಿ ಹೇಳಿದರು. ಆದ್ದರಿಂದ ಅದನ್ನೇ ನಾನು ತಿರುಗಿ ಹೇಳುವುದಿಲ್ಲ. ನಾಮಪತ್ರಗಳನ್ನು ಸಲ್ಲಿಸುವುದರಿಂದ ಹಿಡಿದು ಕೊನೆಯ ಹಂತದವರೆಗೂ ಇವರ ಒಂದು ಕೈವಾಡ ನಡೆದಿದೆ. ಶಕ್ತಿವಂತರು ಏನಾದರೂ ನಾಮಪತ್ರ ಸಲ್ಲಿಸಲು ಮುಂದೆ ಬಂದರೆ ಸಾಕು, ಅವರ ಮೇಲೆ ಯಾವುದಾದರು ಒಂದು ಸುಳ್ಳು ಕಂಪ್ಲೇಂಟನ್ನು ಪೋಲೀಸರಿಗೆ ಕೊಟ್ಟು, ಅವರ ನಾಮಪತ್ರ ದಾಖಲಾಗಬಾರದು, ಆ ರೀತಿಯಂಗೆಲ್ಲ ತೊಂದರೆ ಕೊಟ್ಟಿದ್ದಾರೆ. ನಾನಾ ರೀತಿಯ ಆತಂಕಗಳನ್ನು ಉಂಟು ಮಾಡಿದ್ದಾರೆ, ಈ ಸಮಯದಲ್ಲಿ ನೀವು ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರಿ ಎಂದು ನಾನು ಹೇಳುವುದಿಲ್ಲ, ಆದರೆ ಅಧಿಕಾರವನ್ನು ನಿಮ್ಮ ಕೈಯಲ್ಲಿಟ್ಟುಕೊಂಡು, ಸರ್ಕಾರದ ಆಡಳಿತ ಯಂತ್ರವನ್ನು ನಿಮ್ಮ ಕೈಯಲ್ಲಿಟ್ಟುಕೊಂಡು ಅದರ ಒಂದು ಉಪಯೋಗವನ್ನು ಜಾಸ್ತಿ ಪಡೆದುಕೊಂಡಿದ್ದೀರಿ ಎಂದು ಮಾತ್ರ ಹೇಳುತ್ತೇನೆ. ನೀವು ಇಷ್ಟೆಲ್ಲಾ ಮಾಡಿದರೂ ಸಹ ಚುನಾವಣೆ ಫಲಿತಾಂಶದಲ್ಲಿ ಮಾತ್ರ ನಮಗಿಂತ ಸ್ವಲ್ಪ ಮುಂದೆ ಹೋಗಿದ್ದೀರಿ.

**ಶ್ರೀ ಹೆಚ್.ಎಲ್. ತಿಮ್ಮೇಗೌಡ:–** ಇಲ್ಲಿ ನಮ್ಮ ಪಕ್ಷದ ಸರ್ಕಾರವೇ ಅಧಿಕಾರದಲ್ಲಿದ್ದರೂ ಸಹ ವಿಧಾನಸೌಧದ ಹೊರಗಡೆ ಇವರಿಗೆ ಅನುಕೂಲ ಮಾಡಿಕೊಡುವ ಅಧಿಕಾರಿಗಳು ಸಹ ಇದ್ದಾರೆ. ಇವರ ಪಕ್ಷದವರು ಸಹ ಅಧಿಕಾರಿಗಳನ್ನು ಉಪಯೋಗಿಸಿಕೊಂಡಿದ್ದಾರೆ. ನಾನು ಇದನ್ನು ಬೇಕಾದರೆ ಸಾಬೀತು ಮಾಡುತ್ತೇನೆ. ನಾನು ನಮ್ಮ ತಾಲ್ಲೂಕು ಮಟ್ಟದಲ್ಲಿಯೇ ಇದನ್ನು ಸಾಬೀತು ಮಾಡುವುದಕ್ಕೆ ತಯಾರಿದ್ದೇನೆ. ಇವರು ಸಹ ಸರ್ಕಾರದ ಅಧಿಕಾರಿಗಳನ್ನು ಉಪಯೋಗಿಸಿಕೊಂಡಿದ್ದಾರೆ.

**ಶ್ರೀ ಕೆ.ಹೆಚ್. ಪಾಟೀಲ್:–** ಹಾಗಿದ್ದರೆ ಈ ಬಗ್ಗೆ ನ್ಯಾಯಾಂಗ ತನಿಖೆ ಮಾಡಲಿ.

**ಉಪಾಧ್ಯಕ್ಷರು:–** ಒಬ್ಬೊಬ್ಬರಾಗಿ ಮಾತನಾಡಿ.

**ಶ್ರೀ ಬಿ.ಎಸ್. ಯಡಿಯೂರಪ್ಪ:–** ಈ ರೀತಿ ಸರ್ಕಾರದ ಅಧಿಕಾರಿಗಳನ್ನು ತಮ್ಮ ಅನುಕೂಲಕ್ಕಾಗಿ ಉಪಯೋಗಪಡಿಸಿಕೊಳ್ಳುವಂತಹ ಶಕ್ತಿ ಆಡಳಿತ ಪಕ್ಷದವರಿಗೆ ಇದೆ ಎಂದು ಕಾಂಗ್ರೆಸ್ ಪಕ್ಷದವರು ಮತ್ತು ಕಾಂಗ್ರೆಸ್ ಪಕ್ಷದವರಿಗೆ

ಇದೆ ಎಂದು ಜನತಾ ಪಕ್ಷದವರು ಹೇಳುತ್ತಿರಬೇಕಾದರೆ, ಈ ಎರಡೂ ಪಕ್ಷಗಳ ನಡುವೆ ಇರುವಂತಹ ನಮ್ಮಂತಹ ಸಣ್ಣ ಸಣ್ಣ ಪಕ್ಷಗಳ ಗತಿ ಏನು?

**ಶ್ರೀ ಬಿ. ರಾಚಯ್ಯ:–** ಈಗ ಅಧಿಕಾರಿಗಳನ್ನು, ದುರುಪಯೋಗ ಪಡಿಸಿಕೊಳ್ಳಲಾಗಿದೆಯೆಂದು ಈ ಕಡೆ ಮತ್ತೊಂದು ಕಡೆ ಹೇಳಿದ್ದಾರೆ. ಇದಕ್ಕೆ ಮಾರ್ಗ ಇದೆ. ಚುನಾವಣೆ ನಡೆದಂಥ ಕಾಲದಲ್ಲಿ ಎಲ್ಲಿ ಅಧಿಕಾರ ದುರುಪಯೋಗವಾಗಿದೆಯೋ, ಕಾನೂನು ಬಾಹಿರವಾಗಿ ಕೆಲಸ ಮಾಡಿದೆಯೋ ಅದಕ್ಕೆ ಚುನಾವಣಾ ತಕರಾರು ಅರ್ಜಿಗಳು ಬಂದಿದೆ. ಮತ್ತೆ ಅಧಿಕಾರಿಗಳ ಮೇಲೆ ಏನಾದರೂ ಆಪಾದನೆ ಬಂದರೆ ಅರ್ಜಿಗಳು ಬರುತ್ತವೆ. ಅವರು ಹೇಳುವ ಹಾಗೆ ಇದ್ದಿದ್ದರೆ 2575 ಕಾಂಗ್ರೆಸ್‌ನಲ್ಲಿ ಅಭ್ಯರ್ಥಿಗಳು ಎಲ್ಲಿ ಬರುತ್ತಿದ್ದರು, 16 ಬಿಜೆಪಿ ಎಲ್ಲಿ ಬರುತ್ತಿದ್ದರು. ಹೀಗೆ ಎಲ್ಲಾ ಬಂದಿರುವುದರಿಂದ ಚುನಾವಣೆ ಸರಿಯಾಗಿ ನಡೆದಿದೆ ಎಂಬುದಾಗಿ ನಿರ್ಧರಿಸಲು ಸಾಧ್ಯವಿಲ್ಲ

**ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:–** ಚುನಾವಣೆ ಸರಿಯಾಗಿ ಆಗಿದ್ದರೆ ನಿಮ್ಮಗತಿ ಏನಾಗುತ್ತಿತ್ತು.

**ಶ್ರೀ ಬಿ. ರಾಚಯ್ಯ:–** ಅಧಿಕಾರಿಗಳನ್ನು ಸಂಪೂರ್ಣವಾಗಿ ದುರುಪಯೋಗಪಡಿಸಿಕೊಂಡಿದ್ದರೆ ಎಲ್ಲರೂ ಹೇಗೆ ಬರುತ್ತಿದ್ದರು.

**ಶ್ರೀ ಕೆ.ಹೆಚ್. ಪಾಟೀಲ್:–** ನಮ್ಮ ಪಕ್ಷದವರು ಟೀಕೆಮಾಡಿದ್ದಾರೆ. ಟ್ರೆಜರಿ ಬೆಂಚ್‌ನಿಂದ ಸಲಹೆ ಬಂದಿದೆ. ಈ ಬಗ್ಗೆ ಸದನದ ಕಮಿಟಿ ಮಾಡಿ ಅಥವಾ ಜುಡಿಶಿಯಲ್ ಎನ್‌ಕ್ವೈರಿ ಮಾಡಿ, ನಿಷ್ಪಕ್ಷಪಾತವಾಗಿ ನಿರ್ಣಯಮಾಡಿ. ಯಾವ ಅಧಿಕಾರಿ ಎಲ್ಲಿ ತಪ್ಪಿದ್ದಾನೆ ಅವನನ್ನು ಹೊರಗೆ ಹಾಕಿರಿ, ನಮಗೂ ಬೇಡ ನಿಮಗೂ ಬೇಡ, ಇದಕ್ಕೆ ಅವಕಾಶ ಮಾಡಿಕೊಡಿ. ಸುಮ್ಮನೆ ಅಧಿಕಾರಿಗಳ ಮೇಲೆ ಗೂಬೆ ಕೂರಿಸಿ ಸಾರ್ವಜನಿಕ ಜೀವನವನ್ನು ಹಾಳು ಮಾಡುವ ರೀತಿ ನಾವೂ ಮಾಡಬಾರದು. ನೀವೂ ಮಾಡಬಾರದು.

**ಶ್ರೀ ಬಿ. ರಾಚಯ್ಯ:–** ಕಂಪ್ಲೈಂಟ್ ಬಂದರೆ ಕೊಡಿ. ವಿಚಾರಣೆ ಮಾಡುತ್ತಾರೆ.

**ಶ್ರೀ ಕೆ.ಹೆಚ್. ಪಾಟೀಲ್:–** ಕಂಪ್ಲೈಂಟ್ ಯಾರಿಗೆ ಕೊಡಬೇಕು.

**ಶ್ರೀ ಬಿ. ರಾಚಯ್ಯ**:- ಅಭ್ಯರ್ಥಿಗಳು ಅರ್ಜಿ ಮಾಡಿದ್ದಾರೆ. ಚುನಾವಣಾ ತಕರಾರು ಅರ್ಜಿಗಳು ಬಂದಿವೆ. ಅಧಿಕಾರಿ ಯಾರಿದ್ದಾರೆ ಆ ಮಟ್ಟದಲ್ಲಿ ಹೇಳಲಿ.

**ಶ್ರೀ ಎಂ. ವೀರಪ್ಪಮೊಯ್ಲಿ**:- ಸರ್ಕಾರ ಅಧಿಕಾರವನ್ನು ಮುಖ್ಯ ಚುನಾವಣಾಧಿಕಾರಿಗೆ ಡೆಲಿಗೇಟ್ ಮಾಡಿದ್ದರೂ ಸಂವಿಧಾನದ ಪ್ರಕಾರ ಪರಮಾಧಿಕಾರ ಇಲ್ಲ. ಸರ್ಕಾರದ ಆದೇಶದ ಮೇರೆಗೆ ಕೆಲಸ ಮಾಡಬೇಕು. ಸರ್ಕಾರದ ಆದೇಶಮೀರಿ ಸ್ವತಂತ್ರವಾಗಿ ಕೆಲಸ ಮಾಡುವುದಕ್ಕಾಗುವುದಿಲ್ಲ. ಅಷ್ಟೊಂದು ಸರಳವಾಗಿ ಅಲಿಗೇಷನ್ ಮಾಡಿರುವುದನ್ನು ತೆಗೆದುಕೊಳ್ಳಬಾರದು. ಟ್ರಜರಿ ಬೆಂಚಿನವರು ಅಧಿಕಾರ ದುರುಪಯೋಗ ಮಾಡಿ ಅಧಿಕಾರಿಗಳು ಕಾಂಗ್ರೆಸ್ ನವರಿಗೆ ಸಹಾಯ ಮಾಡಿದರು ಎಂದರೆ, ಇಡೀ ಅಧಿಕಾರಿಗಳ ತಂಡಕ್ಕೆ ದ್ರೋಹ ಮಾಡಿದಂತಾಗುತ್ತದೆ. If there is a severe attack on the Executive in Kegislatwe then it is a very serious matter. That too when the treasury bench is making such an eeation then it is a very serious matter. Of course we are also a party to it. ಇದರ ಬಗ್ಗೆ ವಿಚಾರಣೆ ಆಗಲೇಬೇಕು. ವಿಚಾರಣೆಯನ್ನು ಅಧಿಕಾರಿಗಳು ಮಾಡುವುದಕ್ಕಾಗುವುದಿಲ್ಲ. ಸದನದ ಸಮಿತಿ ಕೂಡ ಮಾಡುವುದಕ್ಕಾಗುವುದಿಲ್ಲ. because tomorro We may lead evidence and they may also lead evidence.

**ಶ್ರೀ ಹೆಚ್.ಎಲ್. ತಿಮ್ಮೇಗೌಡ**:- ಅಧಿಕಾರಿಗಳನ್ನು ಉಪಯೋಗಿಸಿ-ಕೊಂಡಿದ್ದಾರೆಂದು ಆರೋಪ ಮಾಡಿ ಮಾನ್ಯ ಮೊಯ್ಲಿಯವರು ಈಗ ಹೇಳುತ್ತಾರೆ. ನಮ್ಮ ಕರ್ನಾಟಕದ ಅಧಿಕಾರಿಗಳಿಗೆ ಒಳ್ಳೆಯ ಪರಂಪರೆ ಇದೆಯೆಂದು. ಬೇಸ್ ಲೆಸ್ ಅಲಿಗೇಷನ್ ಮಾಡುವುದು ಸರಿಯಲ್ಲ. ಮೊದಲು ಆರೋಪ ಮಾಡಿದ್ದು ಅವರೇ, ಹಿಂದೆ ಅಧಿಕಾರಿಗಳನ್ನು ನೇಮಕ ಮಾಡಿ ಶಿಷ್ಯರುಗಳನ್ನು ಇಟ್ಟುಕೊಂಡಿದ್ದಾರೆ, ಈಗಲೂ ಕೂಡ ಸಹಾಯ ಮಾಡಿದ್ದಾರೆ. ಈಗ ಅಧಿಕಾರಿಗಳ ಪರಂಪರೆ ಚೆನ್ನಾಗಿದೆಯೆಂದು ಹೇಳುತ್ತಿದ್ದಾರೆ, ಆರೋಪ ಏತಕ್ಕೆ ಮಾಡಬೇಕಾಗಿತ್ತು, ಒಂದು ಕಡೆ ಅಧಿಕಾರಿಗಳನ್ನು ಒಯ್ಯುವುದು, ಇನ್ನೊಂದು ಕಡೆ ಅವರಿಗೆ ರಕ್ಷಣೆ ಕೊಡುತ್ತೇವೆಂದು ಹೇಳುವುದು ಒಂದಕ್ಕೊಂದಕ್ಕೆ ತದ್ವಿರುದ್ಧವಾದಂಥ ಹೇಳಿಕೆಗಳನ್ನು ಏತಕ್ಕೆ ಮಾಡಬೇಕು.

**ಶ್ರೀ ಎಂ. ವೀರಪ್ಪಮೊಯ್ಲಿ**:– ಈಗಲೂ ಹೇಳುತ್ತೇನೆ. In the entire country the civil services we have in Karnataka is excelent. I stil Stand by it whethere it is police or excutive. But there are some black sheeps. I agree.

ಇದರ ಬಗ್ಗೆ, ಹೇಳಿದೆ, ಮಾನ್ಯ ಹಿರಿಯ ಸದಸ್ಯರಾದಂಥ ಡಾ॥ ತಿಮ್ಮೇಗೌಡರು ಗ್ರಾಮಸಹಾಯಕರಿಂದ ಹಿಡಿದು ವಿಧಾನಸೌಧದವರೆ ಇವರ ಶಿಷ್ಯರುಗಳು ಇದ್ದಾರೆಂದು ಹೇಳಿದರು. ಬಹುಶಃ ಅವರು ಆವೇಶದಿಂದ ಹೇಳಿರಬಹುದು. ನಾವು ಹಾಗೆ ಹೇಳಲಿಲ್ಲ.

**ಶ್ರೀ ಹೆಚ್.ಎಲ್. ತಿಮ್ಮೇಗೌಡ**:– ಅಧ್ಯಕ್ಷರೇ ಪಾಯಿಂಟ್ ಆಫ್ ಆರ್ಡರ್.

**ಶ್ರೀ ಎಂ. ವೀರಪ್ಪಮೊಯ್ಲಿ**:– ಸ್ವಾಮಿ, ನಾವು ತಿಮ್ಮೇಗೌಡರು ಕೊಟ್ಟಿರತಕ್ಕ ಸವಾಲನ್ನು ಸ್ವೀಕಾರ ಮಾಡಿದ್ದೇವೆ. ಟ್ರಜರಿಬೆಂಚ್‌ನವರಿಗೆ ಧೈರ್ಯ ಇದ್ದರೆ, ಅವರು ಸ್ವೀಕಾರ ಮಾಡಲಿ.

**ಶ್ರೀ ಹೆಚ್.ಎಲ್. ತಿಮ್ಮೇಗೌಡ**:– ಮಾನ್ಯ ವೀರಪ್ಪಮೊಯ್ಲಿಯವರು ಈಗ ಹೇಳಿದಂಥ ಒಂದು ಪದ ಸತ್ಯಕ್ಕೆ ದೂರವಾದುರು. ನನ್ನ ಬಾಯಲ್ಲಿ ಬರದೇ ಇದ್ದುದನ್ನು ಹೇಳುತ್ತಿದ್ದಾರೆ.

**ಶ್ರೀ ಎಂ. ಮಲ್ಲಿಕಾರ್ಜುನ ಖಾರ್ಗೆ**:– ಅದು ರೆಕಾರ್ಡ್ ಆಗಿದೆ.

**ಶ್ರೀ ಹೆಚ್.ಎಲ್. ತಿಮ್ಮೇಗೌಡ**:– ವಿಲೇಜ್ ಅಕೌಂಟೆಂಟ್‌ನಿಂದ ಹಿಡಿದು ವಿಧಾನಸೌಧದವರೆಗೆ ನಿಮಗೆ ಸಪೋರ್ಟ್ ಮಾಡತಕ್ಕ ಏಜೆಂಟ್ಸ್ ಇದ್ದಾರೆ.

**ಶ್ರೀ ಬಿ.ಎಸ್. ಯಡಿಯೂರಪ್ಪ**:– ಕೆಲವರು ಒಳ್ಳೆಯವರು ಇದ್ದಾರೆ, ಕೆಲವರು ಕಟ್ಟವರು ಇದ್ದಾರೆ. ಉದಾಹರಣೆ ಹೇಳಬೇಕೆಂದರೆ, ಧಾರವಾಡ ಜಿಲ್ಲೆ ಶಿಗ್ಗಾವ್ ತಾಲ್ಲೂಕು, ಶಹಬಜಾರ್‌ನಲ್ಲಿ 14 ಸೀಟುಗಳನ್ನು ಜನತಾ ಪಕ್ಷಕ್ಕೆ ಅವಿರೋಧವಾಗಿ ಆಯ್ಕೆ ಮಾಡಿದರು. ಅನಂತರ ನಾಲ್ಕೂವರೆ ಗಂಟೆಗೆ ಇನ್ನೊಂದು ಸೀಟು ಅವಿರೋಧವಾಗಿ ಆಯ್ಕೆಯಾಗಿದೆ ಎಂದು ಹೇಳಿದಾಗ ಪಠಾಣೆ ಎನ್ನುವವರು ಪ್ರಶ್ನೆ ಮಾಡಿದ್ದಾರೆ. ಇದರ ಬಗ್ಗೆ ತನಿಖೆ ಮಾಡಿದರೆ ಸತ್ಯಾಸತ್ಯ ಹೊರಗಡೆ ಬರುತ್ತದೆ.

**ಶ್ರೀ ಹೆಚ್.ಜಿ. ಚನ್ನಪ್ಪ:-** ಅಧ್ಯಕ್ಷರೆ, ಅವರು ಮಾತನಾಡುವಾಗ ಅವಕಾಶ ಕೊಡುತ್ತೀರಿ, ನಮಗೆ ಏತಕ್ಕೆ ಅವಕಾಶ ಕೊಡುತ್ತಿಲ್ಲ, ನಾವು ಏತಕ್ಕೆ ಸುಮ್ಮನೆ ಕುಳಿತುಕೊಳ್ಳಬೇಕು.

**ಅಧ್ಯಕ್ಷರು:-** ಇನ್ನು ಮುಂದೆ ಯಾರೂ ಮಾತನಾಡುವುದು ಬೇಡ ದಯಮಾಡಿ ಕುಳಿತುಕೊಳ್ಳಿ.

**ಶ್ರೀ ಬಿ. ಬಸವಲಿಂಗಪ್ಪ:-** ಅಧ್ಯಕ್ಷರೆ, ತಾವು ಇರಲಿಲ್ಲ ಸುಮಾರು 17 ನಿಮಿಷ ಈ ಸಂಭಾಷಣೆಯೇ ಆಗಿದೆ.

**ಅಧ್ಯಕ್ಷರು:-** ಇನ್ನು ಮುಂದೆ ಈ ರೀತಿ ಆಗುವುದಿಲ್ಲ ತಾವು ಮಾತನಾಡಬಹುದು.

**ಶ್ರೀ ಬಿ. ಬಸವಲಿಂಗಪ್ಪ:-** ಡಾ॥ ತಿಮ್ಮೇಗೌಡರು, ನಾನು ಕಣ್ಣಿನಿಂದ ನೋಡಿದ್ದೇನೆ ಎಂದು ಹೇಳಿದರು. ಕಾಂಗ್ರೆಸ್ ಪಕ್ಷದ ಪರವಾಗಿ ನಮ್ಮ ರಾಜ್ಯದಲ್ಲಿ ತಿರುಗಾಡಿ ನೋಡಿದ್ದೇನೆ ಎಂದು ನಾನು ಹೇಳಿದೆ. ಸದನದ ಕಮಿಟಿ ಮಾಡಿ ಎಂದು ಹೇಳಿದರು. ಅದಕ್ಕೆ ನಮ್ಮ ಪಕ್ಷದವರು ಒಪ್ಪುತ್ತೇವೆ. ಏನೇ ಆಗಿದ್ದರೂ ನಮ್ಮದು ಬಯಲಿಗೆ ಬರಲಿ, ನಿಮ್ಮದು ಬಯಲಿಗೆ ಬರಲಿ, ಈ ಸದನದ ಹತ್ತು ಜನರ ಕಮಿಟಿ ಮಾಡಿ, ಅವರು ರಾಜ್ಯದಲ್ಲೆಲ್ಲಾ ತಿರುಗಾಡಿಕೊಂಡು ಬಂದು ಒಂದು ವರದಿಯನ್ನು ಒಪ್ಪಿಸಲಿ, ಯಾರದು ತಪ್ಪು ಯಾರದು ನೆಪ್ಪು ಎನ್ನುವುದು ಬಯಲಿಗೆ ಬರಲಿ. ಸಾರ್ವಜನಿಕ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದೇವೆ ನಿಷ್ಪಕ್ಷಪಾತವಾಗಿ ಕೆಲಸ ಮಾಡಬೇಕು, ನಾವು ದೇಶದ ದೃಷ್ಟಿಯಿಂದ ಕೆಲಸ ಮಾಡಿದ್ದರೆ, ಶಹಭಾಸ್‌ಗಿರಿ ಬರುತ್ತದೆ. ಅಧಿಕಾರ ದುರುಪಯೋಗ ಮಾಡಿಕೊಂಡು, ಉಪಯೋಗ ಮಾಡಿಕೊಂಡು ತಾವು ಹೇಗೋ ಮಾಡಿ ಯಾವ ರೀತಿಯಿಂದಲಾದರೂ ಗೆಲ್ಲಬೇಕು ಎಂದು ಪ್ರಯತ್ನವನ್ನು ಮಾಡದೇ ಹೋಗಿದ್ದರೆ ಇಲ್ಲಿಗೆ ಸೋತು ಮನೆಗೆ ಹೋಗುತ್ತಿದ್ದಿರಿ. ರಾಜ್ಯಪಾಲರ ಭಾಷಣದಲ್ಲಿ 1982ನೇ ಇಸವಿಯಲ್ಲಿ ಭಾಷಣ ಮಾಡಿದರು.

ವೆಚ್ಚ 651 ಕೋಟಿ ರೂಪಾಯಿಗಳನ್ನು ಕಡ್ಡಾಯವಾಗಿ ಖರ್ಚು ಮಾಡಿಯೇ ಮಾಡುತ್ತೇವೆಂದು ಹೇಳಿದರು. ಎಷ್ಟರಮಟ್ಟಿಗೆ ಖರ್ಚು ಮಾಡಿದ್ದೀರಿ? ನೀವು ಹಣವನ್ನು ಖರ್ಚು ಮಾಡಲಿಕ್ಕೆ ಹೋಗಲೇ ಇಲ್ಲ.

ನೀವು ಯಾವ ಅಂಕಿಅಂಶಗಳನ್ನು ಹೇಳುತ್ತೀರಿ. ಡೆವಲಪ್‌ಮೆಂಟ್ ಬೋರ್ಡ್ ಮಾಡುತ್ತೇವೆಂದು ಹೇಳಿದಿರಿ. ನಿಮಗಾಗುವಷ್ಟು ಮಾತ್ರ ಮಾಡಿಕೊಂಡಿರಿ. ಪ್ರತಿಯೊಂದು ಪಂಚಾಯತಿಯಲ್ಲೂ ನೂರಾರು ಎಕರೆ ಸಾಗುವಳಿ ಮಾಡುತ್ತೇವೆಂದು ಹೇಳಿದಿರಿ. ಆ ಮಟ್ಟದಲ್ಲಿ ಪ್ರಯತ್ನ ಮಾಡಿದರೆ. ಭಾಷಣದಲ್ಲಿರತಕ್ಕಂಥ ವಿಷಯವನ್ನು ಮಾತ್ರ ಹೇಳುತ್ತಿದ್ದೇನೆ.

**ಶ್ರೀ ಬಿ. ರಾಚಯ್ಯ:–** ಎಷ್ಟು ಕೆಲಸ ಮಾಡಿದ್ದೇವೆನ್ನುವುದನ್ನು ಬಡ್ಜೆಟ್‌ನಲ್ಲಿ ಕೊಡುತ್ತೇವೆ.

**ಶ್ರೀ ಬಿ. ಬಸವಲಿಂಗಪ್ಪ:–** ಪ್ರತಿಯೊಂದನ್ನೂ ವ್ಯಾಖ್ಯಾನ ಮಾಡುವಾಗ ಇದರಲ್ಲಿ ಇರತಕ್ಕಂಥ ವಿಷಯವನ್ನೇ ಹೇಳುತ್ತೇನೆ, ಉಳಿದ ಯಾವುದನ್ನು ಹೇಳುವುದಿಲ್ಲ. 20–1–1986ನೇ ಇಸವಿಯಲ್ಲಿ ಭಾಷಣ ಮಾಡಿದರು. ಪರಿಚ್ಛೇದ 16ರಲ್ಲಿ ಏನು ಹೇಳಿದ್ದೀರಿ. ನಮ್ಮ ಸರ್ಕಾರದ ಯಂತ್ರವನ್ನು ಸ್ವಚ್ಛಗೊಳಿಸುವಂಥ ಕಾರ್ಯಕ್ರಮವನ್ನು ಮಾಡುತ್ತೇವೆಂದು ಹೇಳಿದಿರಿ. ಆಯೋಗದವರನ್ನು ನೇಮಿಸಿದಿರಿ. ಬಹಳ ಸಂತೋಷ. ನಿಮ್ಮ ಸರ್ಕಾರದ ಯಂತ್ರ ಯಾವ ರೀತಿ ಕೆಲಸ ಮಾಡುತ್ತಿದೆ ಎಂಬುದರ ಬಗ್ಗೆ ಹೇಳುತ್ತೇನೆ. ಡಿಪಾರ್ಟ್‌ಮೆಂಟ್‌ಗಳು ಏನು ಇವೆ ಅವು ಯಾವ ರೀತಿಯಾದ ಕೆಲಸವನ್ನು ಮಾಡುತ್ತಿಲ್ಲ. ಯಾರು ನಿಷ್ಠೆಯಿಂದ ಈವತ್ತಿನ ದಿವಸ ಕೆಲಸ ಮಾಡುತ್ತಿದ್ದಾರೆ. ಯಾರು ಓದುತ್ತಾರೆ. ಕಾನೂನು ಪ್ರಕಾರ ನಡೆಯಬೇಕೆಂದು ತೀರ್ಮಾನಿಸಿರುತ್ತಾರೆಯೇ? ಪ್ರತಿಯೊಂದಕ್ಕೂ ಸಣ್ಣಪುಟ್ಟ ತೀರ್ಮಾನ ತೆಗೆದುಕೊಳ್ಳುವುದಕ್ಕೂ ಸರ್ಕಾರದ ಕೊನೆಯವರೆಗೂ ಬಂದು ವಾಪಸ್ ಹೋಗುತ್ತಾರೆ. ನೀವು ಸ್ವಚ್ಛಗೊಳಿಸಿದ್ದಾದರೂ ಏನು? ನೀವು ಇಂಥ ಆಫೀಸನ್ನು ಸ್ವಚ್ಛಮಾಡಿದ್ದೇವೆಂದು ಯಾವುದಾದರೂ ಒಂದು ಉದಾಹರಣೆಯನ್ನು ಕೊಟ್ಟು ಬೆನ್ನು ತಟ್ಟಿಕೊಳ್ಳತಕ್ಕಂಥ ಪ್ರಕರಣವಿದ್ದರೆ ಪ್ರಶ್ನೆ ಹಾಕಿಕೊಳ್ಳಿ. ನಾನು ಸಾಕಷ್ಟು ದಿವಸಗಳ ಕಾಲ ಮಂತ್ರಿಯಾಗಿ ಕೆಲಸ ಮಾಡಿದ್ದೇನೆ. ಪ್ರತಿಯೊಂದು ಆಫೀಸ್‌ನಲ್ಲೂ. ಪ್ರತಿಯೊಂದು ಇಲಾಖೆಯಲ್ಲೂ ನಡೆಯುತ್ತಿರತಕ್ಕಂಥದ್ದು ಲಂಚಗುಳಿತನವಾಗಿದೆ. ನಾನು ಹೇಳುವಾಗ ಸಾಕ್ಷೀಭೂತವಾಗಿ ಅಂಶಗಳು ಇಲ್ಲದೆ ಹೇಳುತ್ತಿಲ್ಲ. ನಾನು ಬೇಕಾದರೆ ಅದನ್ನು ಪ್ರೂವ್ ಮಾಡುವುದಕ್ಕೆ ತಯಾರಾಗಿದ್ದೇನೆ. ಭಾಷಣ ಮಾಡಿದ ಮೇಲೆ ಪ್ರಯತ್ನ ಕೂಡ ಆಗಬೇಕು. ಯಾರೂ ಕೂಡ ಅದರ ಕಡೆ ಗಮನ ಕೊಡುವಂತೆಯೇ ಇಲ್ಲ. ರಾಜ್ಯಾಂಗ 179ರ ಪ್ರಕಾರ ಪ್ರೋಗ್ರಾಮ್ ಹಾಕಿಕೊಂಡ ಮೇಲೆ ವಿವೇಚನೆಯಿಂದ

ಕೆಲಸ ಮಾಡಬೇಕು. ವಿವೇಚನವನ್ನು ಬಿಟ್ಟು ಕೆಲಸ ಮಾಡತಕ್ಕಂಥವರು ಹತೋಟಿಯನ್ನು ಇಟ್ಟುಕೊಳ್ಳಬೇಕು. ಯಾವ ಮಂತ್ರಿಗಳಿಗೂ ಯಾರ ಮೇಲೂ ಹತೋಟಿ ಇಲ್ಲ. ಇದ್ದರೆ ಹೇಳಲಿ. ನಾನೂ ಕೂಡ ಮಂತ್ರಿಯಾಗಿ ಬಹಳ ದಿವಸ ಕೆಲಸ ಮಾಡಿದ್ದೇನೆ. ನಾನು ಸ್ವಚ್ಛತೆ ಇಲ್ಲದಿದ್ದರೆ ಸರ್ಕಾರವನ್ನು ನಡೆಸುವುದಕ್ಕೆ ಆಗುವುದಿಲ್ಲ. ಎಲ್ಲಾ ಕಾನೂನುಗಳನ್ನು ತಿಳಿದುಕೊಳ್ಳಬೇಕು. ಡಿಸಿಪ್ಲೀನ್ ರೂಲ್ಸ್ ಏನಿವೆ ಅವು ಇವತ್ತು ಇಲ್ಲವೆಂದು ಕಾಣುತ್ತದೆ. ಏಕೆಂದರೆ ಎಲ್ಲರೂ ಸ್ವೇಚ್ಛೆಯಿಂದ ಸಂಘಗಳನ್ನು ಮಾಡಿಕೊಳ್ಳಬಹುದಾಗಿದೆ. ಜವಾನನಿಂದ ಹಿಡಿದು ಮುಖ್ಯ ಕಾರ್ಯದರ್ಶಿಯವರೆಗೆ ಸಂಘಗಳನ್ನು ಮಾಡಿಕೊಳ್ಳುವುದಕ್ಕೆ ಅವಕಾಶ ಕೊಟ್ಟಿದ್ದೀರಿ. ಅವರು ನಿಯತ್ತಿನಿಂದ ಹೇಗೆ ಕೆಲಸ ಮಾಡುತ್ತಾರೆ. ಅವರಿಂದ ಕೆಲಸ ಮಾಡಿಸುವುದಾದರೂ ಹೇಗೆ? ಅವರನ್ನು ಯಾವ ರೂಪದಲ್ಲಿ ಕಂಟ್ರೋಲ್ ಮಾಡುತ್ತೀರಿ? ಕಾರ್ಖಾನೆಗಳಲ್ಲಾದರೆ ಮಾಡಬಹುದು. ಸರ್ಕಾರದ ನಿಯಮಗಳ ಪ್ರಕಾರ ಅನುಸರಿಸಿಕೊಂಡು ನಡೆದುಕೊಂಡು ಹೋದರೆ ಕಂಟ್ರೋಲ್ ಮಾಡುವುದಕ್ಕಾಗುವುದಿಲ್ಲ. ಮೊನ್ನೆ ಲಕ್ಷ್ಮೀಸಾಗರ್‌ರವರು ಸರ್ಕಾರಿ ನೌಕರರ 79 ಯೂನಿಯನ್‌ಗಳಿಗೆ ಪರ್ಮಿಷನ್ ಕೊಟ್ಟಿದ್ದೇವೆಂದು ಉತ್ತರಿಸಿದರು. ಅಂದಾಗ ರಾಜ್ಯಮಟ್ಟದಲ್ಲಿರತಕ್ಕ ಯೂನಿಯನ್‌ಗೆ ಬೆಲೆ ಇಲ್ಲ ಅನ್ನಿಸುತ್ತದೆ. ನಮ್ಮ ಕಾಲದಲ್ಲಿ ರಾಜ್ಯಮಟ್ಟದಲ್ಲಿ ನೌಕರರ ಪರವಾಗಿ ಹೇಳಲಿಕ್ಕೆ ಒಂದೇ ಒಂದು ಯೂನಿಯನ್ ಅನ್ನು ಇಟ್ಟುಕೊಂಡಿದ್ದೆವು. ರಾಜ್ಯಾಂಗದ ಕಲಂ 19ರ ಪ್ರಕಾರ ನಾವು ಅನುಮತಿ ಕೊಟ್ಟಿದ್ದೇವೆಂದು ಹೇಳಿದರು. ಅದರಲ್ಲಿ ರೀಸನಬಲ್ ರಿಸ್ಟ್ರಿಕ್ಷನ್ಸ್ ಎಂದು ಇದೆ. ಅಂದರೆ ಇವರು ಮನಸ್ಸಿಗೆ ಬಂದ ಹಾಗೆ ಕೊಡಲಿಕ್ಕೆ ಅವಕಾಶ ಇಲ್ಲ. ಸರ್ಕಾರಿ ನೌಕರರು ಹೇಳಿದಷ್ಟು ಸಂಘಗಳಿಗೆ ಅನುಮತಿ ಕೊಟ್ಟು ಸರ್ಕಾರಿ ಯಂತ್ರವನ್ನು ಹದಗೆಡಿಸಿದ್ದೀರಿ. ಅವರು ಜನಸೇವೆಯಲ್ಲಿ ಇಲ್ಲ. ಅದಕ್ಕೆ ವಿರೋಧವಾಗಿ ಕೆಲಸ ಮಾಡುತ್ತಿದ್ದಾರೆ. ಜನತೆಯ ಕೈಗೆ ಅಧಿಕಾರ ಕೊಟ್ಟಿದ್ದೇವೆಂದು ಸರ್ಕಾರೀ ನೌಕರರನ್ನು ಹೊರತುಪಡಿಸಿ ಮಾಡುತ್ತೀರಾ? ನೀವು ಸರ್ಕಾರೀ ಯಂತ್ರವನ್ನು ತಹಬಂದಿಗೆ ತರದೇ ಹೋದರೆ ಸರ್ಕಾರವನ್ನು ನಡೆಸುವುದಕ್ಕಾಗುವುದಿಲ್ಲ. ಜನರಿಗೆ ಏನು ಉಪಕಾರ ಮಾಡಬೇಕೆಂದಿದ್ದೀರಿ ಅದನ್ನು ಮಾಡುವುದಕ್ಕಾಗುವುದಿಲ್ಲ. ನಾನು ಕಠಿಣವಾಗಿ ಹೇಳಿರಬಹುದು. ಆದರೆ ನನ್ನ ಅನುಭವದಲ್ಲಿ ಹೇಳಿದ್ದೇನೆ. ಇದರ ಬಗ್ಗೆ ಆಳವಾಗಿ ಯೋಚನೆ ಮಾಡಿ. ಸರ್ಕಾರಿ ಯಂತ್ರವನ್ನು ನೀವು ತಹಬಂದಿಗೆ ತೆಗೆದುಕೊಂಡು ನೀವು ಹೇಳಿದಂತೆ ಕೇಳುವಂತೆ ಮಾಡದಿದ್ದರೆ ಸರ್ಕಾರವನ್ನು ನಡೆಸುವುದಕ್ಕೆ ಆಗುವುದಿಲ್ಲವೆಂದು

ಹೇಳುತ್ತೇನೆ. 1985–86ರಲ್ಲಿ ರಾಜ್ಯಪಾಲರಿಂದ ಭಾಷಣ ಮಾಡಿಸಿದ್ದೀರಿ. ಮಾನ್ಯ ರಾಮಯ್ಯನವರು ಹೇಳುವ ಹಾಗೆ ಅದರ ಅವಶ್ಯಕತೆ ಇತ್ತೋ ಇಲ್ಲವೋ ಎಂದು ಸಂಶಯ ಇದೆ. ಅದರೂ ಔಪಚಾರಿಕವಾಗಿದೆ. ಅದಕ್ಕೆ ಬೆಲೆ ಇಲ್ಲ. ಮುಖ್ಯ ಕಾರ್ಯದರ್ಶಿಗಳು ಏನು ಬರೆದುಕೊಡುತ್ತಾರೆ ಅದಕ್ಕೆ ಸಹಿ ಹಾಕಿ ಕಳುಹಿಸುತ್ತಾರೆ. ಕ್ಯಾಬಿನೆಟ್‌ನಲ್ಲಿ ಕೂಡ ಅದು ಚರ್ಚೆ ಆಗುವುದಿಲ್ಲ.

**ಅಧ್ಯಕ್ಷರು:–** ನಿಮ್ಮ ಕಾಲದಲ್ಲಿ ಹೇಗೆ ಇತ್ತು?

**ಒಬ್ಬ ಮಾನ್ಯ ಸದಸ್ಯರು:–** ಪರಿಶೀಲನೆ ಮಾಡಿ ಮಾಡುತ್ತಿದ್ದೆವು.

**ಶ್ರೀ ಬಿ. ಬಸವಲಿಂಗಪ್ಪ:–** ನಮ್ಮ ನಿಮ್ಮ ಕಾಲದಲ್ಲೂ ಹಾಗೆ ಇತ್ತು.

**ಅಧ್ಯಕ್ಷರು:–** ಈಗ ಏನು ಮಾಡಬೇಕು ಹೇಳಿ. ನಿಮ್ಮ ಕಾಲದಿಂದಲೂ ಹಾಗೆ ನಡೆದುಕೊಂಡು ಬಂದಿದೆ.

**ಶ್ರೀ ಬಿ. ಬಸವಲಿಂಗಪ್ಪ:–** ರಾಮಯ್ಯನವರಿಗೆ ಖೇದವಾಗಿದೆ. ಯಾವ ರೀತಿ ಸುಧಾರಣೆ ಕೊಡಬೇಕೆಂಬುದನ್ನು ಯೋಚಿಸಬೇಕು. ರಾಜ್ಯಪಾಲರಿಂದ ಭಾಷಣ ಮಾಡಿಸುವಾಗ ಯೋಚಿಸಿ. ಮುಂದಿನ ವರ್ಷ ಅಧಿಕಾರದಲ್ಲಿದ್ದರೆ ಇದನ್ನು ಮನಸ್ಸಿನಲ್ಲಿಟ್ಟುಕೊಳ್ಳಿ.

**ಒಬ್ಬ ಮಾನ್ಯ ಸದಸ್ಯರು:–** ನೀವೇನು ಕನಸು ಕಾಣುತ್ತಿದ್ದೀರಾ?

**ಶ್ರೀ ಬಿ. ಬಸವಲಿಂಗಪ್ಪ:–** ಇನ್ನು ಮಾನ್ಯ ಅಧ್ಯಕ್ಷರ ಸಮಾಚಾರಕ್ಕೆ ಬರುತ್ತೇನೆ. ಇಲ್ಲಿ ಕಾವಲು ಸಮಿತಿ ಎಂದು ಮಾಡಿ ಅದಕ್ಕೆ ಒಬ್ಬರು ಅಧ್ಯಕ್ಷರನ್ನು ಮಾಡಿದ್ದಾರೆ. ಅದಕ್ಕೆ ಇಂಗ್ಲಿಷ್‌ನಲ್ಲಿ ವಾಚ್ ಡಾಗ್ ಕಮಿಟಿ ಎಂದು ಹೆಸರಂತೆ. ಹಾಗೆ ಏಕೆ ಕರೆದರೋ ಗೊತ್ತಿಲ್ಲ. ಆ ಸಮಿತಿಯ ಅಧ್ಯಕ್ಷರ ಅಧಿಕಾರ ಏನೆಂದರೆ ಶಿಫಾರಸ್ಸಿನ ಅಧಿಕಾರ. ಯಾವ ಯಾವ ಹಂತದಲ್ಲಿ ಹೇಗೆ ಕನ್ನಡ ಬಳಸಬೇಕು. ಹೇಗೆ ಹೇಳಿಕೊಡಬೇಕು ಯಾವ ರೀತಿ ಇಂಟ್ರಡ್ಯೂಸ್ ಮಾಡಬೇಕೆಂಬುದಕ್ಕೆ ಅವರಿಗೊಂದು ಸಮಿತಿ. ಅವರು ಆ ಕೆಲಸ ಬಿಟ್ಟರು. ಶಿಫಾರಸ್ಸಿನ ಕೆಲಸ ಬಿಟ್ಟು ಹುಕುಂ ಹೊರಡಿಸುವುದಕ್ಕೆ ಶುರು ಮಾಡಿದರು. ಸಿಬ್ಬಿರು ಹೊರಡಿಸಿದಂತೆ. ನಿಮ್ಮನ್ನು ಜೈಲಿಗೆ ಕಳುಹಿಸುತ್ತೇವೆಂದು ಹೇಳಿದಹಾಗೆ ಆಯಿತು. ಅವರು ಹೆದರಿ ಸಾಯುತ್ತಾರೆ. ಏಕೆಂದರೆ ಸಮಿತಿಯ ಅಧ್ಯಕ್ಷರಿಗೆ ಮುಖ್ಯ ಮಂತ್ರಿಗಳ ಆಶೀರ್ವಾದ ಇದೆ ಎಂದು ಹೆದರುತ್ತಾರೆ.

ಕನ್ನಡ ಕಲಿಸಬೇಕು ನನ್ನ ಮಕ್ಕಳಿಗೆ. ಕನ್ನಡ ಕಲಿಸಿದರೆ ಅವರನ್ನು ಎಲ್ಲಿಗೆ ಕಳುಹಿಸುತ್ತೀರಿ? ಹೈದರಾಬಾದ್‌ಗೆ ಕಳುಹಿಸುತ್ತೀರಾ? ಡೆಲ್ಲಿಗೆ ಕಳುಹಿಸುತ್ತೀರಾ? ಅಮೆರಿಕಾಕ್ಕೆ ಕಳುಹಿಸುತ್ತೀರಾ? ತಮಿಳುನಾಡಿಗೆ ಕಳುಹಿಸುತ್ತೀರಾ? ಬರೀ ಕನ್ನಡ ಕಲಿತು ಎಲ್ಲಿ ಹೋಗಬೇಕು? ಕರ್ನಾಟಕ ರಾಜ್ಯದಲ್ಲೇ ಎಲ್ಲಿ ಜೀವನ ಮಾಡುವುದಕ್ಕಾಗುತ್ತದೆ? ಎಲ್ಲಿ ಕೆಲಸ ಕೊಡುತ್ತೀರಿ? ಒಂದು ಲಕ್ಷದ ಐದು ಸಾವಿರ ಮಕ್ಕಳಿಗೆ ಪುಸ್ತಕ ಕೊಟ್ಟೆವು ಎಂದು ಹೇಳಿದ್ದಾರೆ. ಪ್ರೈಮರಿ ಮಿಡ್ಲ್‌ಸ್ಕೂಲಿನಲ್ಲಿ ಲಕ್ಷಾಂತರ ಜನ ಓದುತ್ತಿದ್ದಾರೆ. ಇಷ್ಟು ಜನರಿಗೆ ವಿದ್ಯಾವಂತರನ್ನಾಗಿ ಮಾಡಿದರೆ ವರ್ಷಕ್ಕೆ ಇಷ್ಟೊಂದು ಜನ ಬಂದರೆ ಎಷ್ಟಾಗುತ್ತದೆ ದಯಮಾಡಿ ಯೋಚನೆ ಮಾಡಿ. ಇಷ್ಟು ಜನರಿಗೂ ಕೆಲಸ ಕೊಡುತ್ತೇವೆಂದು ಭರವಸೆ ಕೊಡುತ್ತೀರಾ? ಕಾವಲು ಸಮಿತಿ ಅಧ್ಯಕ್ಷರಿಗೆ ಕೇಳಿ. ತಾವು ಕರೆಸ್ಪಾಂಡೆನ್ಸ್ ಮಾಡಿದ್ದೀರಿ. ಕೊನೆಗೆ ಪತ್ರಿಕೆಯಲ್ಲಿ ಪ್ರಕಟವಾಯಿತು. ನೀವು ಅವರಿಗೆ ಸರೆಂಡರ್ ಆದಹಾಗೆ ಮೌನವಹಿಸಿ

ಅವರ ಚಲನವಲನ ಏನಿದೆ ಅದಕ್ಕೂ ಕೂಡ ಕಡಿವಾಣ ಹಾಕಬೇಕು. ನಮಗೆ ಬರೀ ಕನ್ನಡ ಬೇಕಿಲ್ಲ. ಜೊತೆಗೆ ಇಂಗ್ಲೀಷ್ ಬೇಕು, ಬರೀ ಕನ್ನಡವನ್ನು ಕಲಿತು ನಮ್ಮ ಮಕ್ಕಳು ದನ ಕಾಯುವಂತೆ ಮಾಡುತ್ತೀರಾ?

**ಶ್ರೀ ಬಿ.ಜಿ. ಕೊಟ್ರಪ್ಪ:–** ಅಧ್ಯಕ್ಷರೆ, ನನ್ನದೊಂದು ಕ್ರಿಯಾಲೋಪ.

**ಅಧ್ಯಕ್ಷರು:–** ಮಾನ್ಯ ಸದಸ್ಯರಾದ ಶ್ರೀ ಬಿ. ಬಸವಲಿಂಗಪ್ಪನವರು ಅವರ ಹೆಸರನ್ನು ಪ್ರಯೋಗಮಾಡಿಲ್ಲ. ಅವರ ಕಾರ್ಯಕ್ಷೇತ್ರದ ಬಗ್ಗೆ ಮಾತ್ರ ಮಾತನಾಡುತ್ತಿದ್ದಾರೆ.

**ಶ್ರೀ ಬಿ.ಜಿ. ಕೊಟ್ರಪ್ಪ:–** ರಾಜ್ಯಾಂಗದ ಪ್ರಕಾರ ಕರ್ನಾಟಕ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಿದ್ದಾಗಿದೆ. ಶ್ರೀಮಾನ್ ಬಸವಲಿಂಗಪ್ಪನವರು ಅದರ ವಿರುದ್ಧವಾಗಿ ಮಾತನಾಡುತ್ತಿದ್ದಾರೆ. ಇದಕ್ಕೆ ನನ್ನ ಅಬ್ಜಕ್ಷನ್ ಇದೆ. ತಮಿಳುನಾಡಿಗೆ ಹೋಗಿ ಏನು ಮಾಡಬೇಕು? ಆಂಧ್ರಕ್ಕೆ ಹೋಗಿ ಏನು ಮಾಡಬೇಕು? ಅಂತ ಹೇಳುತ್ತಿದ್ದಾರೆ, ಅವರಿಗೆ ಬೇರೆ ಭಾಷೆಯನ್ನು ಕಲಿಯಿರಿ ಅಂತ ಹೇಳುವುದಕ್ಕೆ ಏನು ಅಧಿಕಾರ ಇದೆ?

**ಶ್ರೀ ಆರ್. ವೆಂಕಟರಾಮಯ್ಯ:–** ಅವರು ಏನು ಬೇಕಾದರೂ ಮಾತನಾಡಿಕೊಳ್ಳಲಿ. ಆದರೆ ಮನಸ್ಸಿಗೆ ಬಂದ ಹಾಗೆ ಮಾತನಾಡುವುದು

ಬೇಡ. ಈ ಸದನದ ಸದಸ್ಯರಿಗೆ ಶಾಸಕಾಂಗ ಇಲಾಖೆಯಲ್ಲಿ ಇಂಗ್ಲೀಷ್ ಬಳಕೆಯಾಗುತ್ತದೆ ಅದನ್ನು ತಪ್ಪಿಸಬೇಕೆಂದು ಹೇಳಿದ್ದಾರೆ.

**ಶ್ರೀ ಬಿ.ಜಿ. ಕೊಟ್ರಪ್ಪ:–** ನಾನು ಶ್ರೀಮಾನ್ ವೆಂಕಟರಾಮಯ್ಯನವರಿಂದ ಎಕ್ಸ್‌ಪ್ಲನೇಷನ್ ಅನ್ನು ತೆಗೆದುಕೊಂಡು ಅವರಿಂದ ಅರ್ಥಮಾಡಿಕೊಳ್ಳುವ ಪ್ರಮೇಯ ಇಲ್ಲ. ಅವರ ವಿವರಣೆ ನನಗೆ ಬೇಕಾಗಿಲ್ಲ.

**ಶ್ರೀ ಆರ್. ವೆಂಕಟರಾಮಯ್ಯ:–** ನಮ್ಮನ್ನು ಅವರು ಅಪಹಾಸ್ಯ ಮಾಡುತ್ತಿದ್ದಾರೆ. ಸದಸ್ಯರಾದ ನನಗೆ ಕನ್ನಡದ ಬಗ್ಗೆ ಗೌರವ ಇಲ್ಲ ಎಂಬುದಾಗಿ ಹೇಳುವುದು ನಿಜವಾಗಿಯೂ ನ್ಯಾಯವಾದುದಲ್ಲ. ಅದು ನ್ಯಾಯವೂ ಅಲ್ಲ. ಅದನ್ನು ನಿಜವಾಗಿಯೂ ನಾವು ಖಂಡಿಸಲೇ ಬೇಕಾಗುತ್ತದೆ. ನಮ್ಮನ್ನು ನಿಮ್ಮನ್ನು ಸೇರಿಸಿ ಮಾತನಾಡಿದ್ದಾರೆ ಅವರು.

**ಶ್ರೀ ಬಿ. ಬಸವಲಿಂಗಪ್ಪ:–** ಶ್ರೀಮಾನ್ ಕೊಟ್ರಪ್ಪನವರು ನಮ್ಮ ಊರಿನವರೆ. ಅವರು ಗೊತ್ತು ನನಗೆ. ಕನ್ನಡದ ಬಗ್ಗೆ ಬಂದಾಗ ಮಾತನಾಡುತ್ತೇನೆ. ಪೋಲೀಸ್ ಇಲಾಖೆಯ ಬಗ್ಗೆ ಸ್ವಲ್ಪ ಮಾತನಾಡಬೇಕಲ್ಲ.

**ಶ್ರೀ ಬಿ. ರಾಚಯ್ಯ:–** ಮಾತನಾಡಿ ಸ್ವಾಮಿ.

**ಶ್ರೀ ಬಿ. ಬಸವಲಿಂಗಪ್ಪ:–** ಪೋಲೀಸ್ ಇಲಾಖೆಯ ಬಗ್ಗೆ ನಾನು ಮಾತನಾಡಬಾರದು ಅಂತ ನಿರ್ಧಾರ ಮಾಡಿದ್ದೇ ಕಾರಣವೇನೆಂದರೆ, ಶ್ರೀಮಾನ್ ರಾಚಯ್ಯನವರು ಪೋಲೀಸ್ ಮಂತ್ರಿಗಳಾಗಿದ್ದಾರೆ. ಅವರು ದಲಿತರೆಂದು ಶ್ರೀಮಾನ್ ರಾಮಕೃಷ್ಣ ಹೆಗಡೆಯವರು ಅವರನ್ನು ಪೋಲೀಸ್ ಮಂತ್ರಿಗಳಾಗಿ ಮಾಡಿದ್ದಾರೆ.

**ಅಧ್ಯಕ್ಷರು:–** ನೀವೂ ಮಾಜಿ ಗೃಹ ಮಂತ್ರಿಗಳಲ್ಲವೇ?

**ಶ್ರೀ ಬಿ. ಬಸವಲಿಂಗಪ್ಪ:–** ಹೌದಲ್ಲ, ಅವರು ಲೋಕೋಪಯೋಗಿ ಮಂತ್ರಿಯಾಗಿಯೋ ಅಥವಾ ಇರಿಗೇಷನ್ ಮಂತ್ರಿಗಳಾಗಿಯೋ ಇದ್ದರೆ ಇನ್ನೂ ಹೆಚ್ಚು ಕೆಲಸ ಮಾಡಬಹುದಾಗಿತ್ತು. ಏನೇ ಆದರೂ ಅದು ಅವರಿಗೆ ಚೆನ್ನಾಗಿಯೇ ಇದೆ. ನಾನೂ ನೋಡಿದ್ದೇನೆ. ನಾನು ಮಾತನಾಡಬಹುದಾಗಿತ್ತು. ಪೋಲೀಸ್ ಇಲಾಖೆಯಲ್ಲಿ ಅವರ ಹಿರಿಯ ಅಧಿಕಾರಿಗಳು ಏನು ಇದ್ದಾರೆ, ಅವರು ಏನೇ ಹೇಳಲಿ, ಕಡತದಲ್ಲಿ ಏನೇ ಬರೆಯಲಿ ಅದಕ್ಕೆ ಇವರು ರುಜು ಹಾಕುತ್ತಾರೆ.

ತಪ್ಪಾಗಿದೆ ಅಂತ ಯಾರಾದೂ ಪಾಯಿಂಟ್‌ಔಟ್ ಮಾಡಿದರೆ ಅವರ ಮೇಲೆ ಇನ್ನೊಬ್ಬರನ್ನು ನಾಮಕರಣ ಮಾಡುತ್ತಾರೆ. ತಪ್ಪಾಗಿದೆ ಅಂತ ಹೇಳುತ್ತಿದ್ದಾರೆ ನೀವು ಪುನಃ ವಿಚಾರಣೆ ಮಾಡಿ ಅಂತ ಹೇಳುತ್ತಾರೆ. ಕೆಳಗಿನ ಅಧಿಕಾರಿಗಳು ಏನು ಕೊಟ್ಟಿರುತ್ತಾರೋ ಅದನ್ನೇ ಮೇಲಧಿಕಾರಿಗಳು ಒಪ್ಪುತ್ತಾರೆ. ಅದನ್ನೇ ನೀವು ಒಪ್ಪುತ್ತೀರಿ. ಮಂತ್ರಿಗಳಿಗೆ ಅವರ ಇಲಾಖೆಯ ಅಧಿಕಾರಿಗಳು ಹೇಳಿದ್ದೇ ಸರಿ. ನಿಮಗೆ ಸ್ವಂತ ಬುದ್ಧಿ ಇಲ್ಲವೇ ಅಂತ ಕೇಳಿದೆ ಒಂದು ಸಾರಿ. ಅದಕ್ಕವರು ಇಲಾಖೆಯ ಅಧಿಕಾರಿಗಳು ಆ ರೀತಿ ಹೇಳುತ್ತಾರಲ್ಲಾ ಅಂತ ಹೇಳಿದರು. ಆದರೆ ಬೆಂಗಳೂರು ಸಿಟಿಯಲ್ಲಿ ಮತ್ತು ಕರ್ನಾಟಕ ರಾಜ್ಯದಲ್ಲಿ, ಮೈಸೂರಿನಲ್ಲಿ ಗಲಭೆ ಗಲಾಟೆಗಳು ಬಹಳ ಆಗಿದೆ. ಸಣ್ಣ ಕತೆಯನ್ನು ಯಾವುದೋ ಒಬ್ಬರು ಬರೆದರು. ಬರವಣಿಗೆ ವಿಚಾರ. ಆದರೆ ಪೈಗಂಬರರ ಸಂಬಂಧಪಟ್ಟವರ ಹೆಸರಿನ ಹೆಂಗಸರು ಗಂಡಸರು ಇದ್ದರು. ಇದಕ್ಕೆ ಜನರಿಗೆ ಸಿಟ್ಟುಬಂತು. ಅವರಿಗೆ ಸಿಟ್ಟು ಬಂದರೆ ಅವರನ್ನು ಹಿಡಿದು ಗುಂಡು ಇಟ್ಟು ಕೊಲ್ಲುವುದೇ? ಇದಕ್ಕೆ ಬೇರೆ ಮಾರ್ಗ ಇಲ್ಲವೇ? ವೆಂಕಟಸ್ವಾಮಿ ಆಯೋಗದ ಬಗ್ಗೆ ಮೈಸೂರು–ಬೆಂಗಳೂರು ರಸ್ತೆಯಲ್ಲಿ ವಾಹನಗಳನ್ನು ತಡೆದರು. ಸಾರ್ವಜನಿಕರಿಗೆ ತೊಂದರೆ ಮಾಡಿದರು. ನನಗೆ ತಿಳಿದ ಪ್ರಕಾರ, ನಾನು ಶೋಧನೆ ಮಾಡಿ ತಿಳಿದಿರುವ ಪ್ರಕಾರ ಯಾರೇ ಮಾಡಲಿ ಆ ಜನರನ್ನು ತಡೆಯಬಾರದು, ಅದು ನಡೆಯಲಿ ಎಂದು ನೀವು ಹೇಳಿದ್ದೀರೆಂದುತಿಳಿದು ಬಂದಿದೆ. ಆಗ ಅಲ್ಲಿ ಯಾರೇ ಪೊಲೀಸರನ್ನು ಸಸ್ಪೆಂಡ್ ಮಾಡಿಲ್ಲ. ಅಲ್ಲಿ ರಸ್ತೆಯಲ್ಲಿ ಅವರ ವಾಹನಗಳನ್ನು ತಡೆದರೂ ಅದಕ್ಕೆ ನಿರ್ಬಂಧ ಇಲ್ಲ. ಮೈಸೂರಿನಲ್ಲಿ ಇಂದಿಗೂ ಗಲಾಟೆ ನಡೆಯುತ್ತಾ ಇದೆ. ಮೊನ್ನೆ ಯಾವುದೋ ಓಂ ಬಾವುಟವನ್ನು ಮುಸಲ್ಮಾನರು ಎಲ್ಲಿದ್ದಾರೆ ಅಲ್ಲೇ ಹೋಗಿ ಹಾಕಿಸಿದ್ದಾರೆ ಅದಕ್ಕೆ ಇವತ್ತು ಇದನ್ನೆಲ್ಲಾ ಯಾರು ಮಾಡುತ್ತಾರೆ? ಯಾರೋ ಮಿಸ್ಚಿವಸ್ ಪ್ರಿಪಲ್ ಮಾಡುತ್ತಾರೆ ಅದಕ್ಕೆ ಪೊಲೀಸಿನವರು ಗುಂಡು ಹಾರಿಸುವುದು, ಅರೆಸ್ಟ್ ಮಾಡುವುದು, ಗೌರವಸ್ಥರನ್ನು ಹರಾಜು ಮಾಡುವುದು. ಇದಕ್ಕೆ ಕಾರಣ ಯಾರು? ಬಾವುಟವನ್ನು ಕಟ್ಟಿದವರು ಅಲ್ಲ. ಪೊಲೀಸಿನವರು ಕಾರಣರು. ಈ ನೆಮ್ಮದಿ ಭಂಗಕ್ಕೆ ಪೊಲೀಸರ ವಿವೇಕರಹಿತ ಕಾರ್ಯಕ್ರಮವೇ ಕಾರಣ. ಬೆಂಗಳೂರಿನಲ್ಲಿ ಗುಂಡು ಹಾಕಿದರು. ಅದು ಅಷ್ಟು ಅನಿವಾರ್ಯ ಆಗಿತ್ತೇ? ಅಲ್ಲಿ ಸತ್ತವರು, ಬಡವರು, ಬುದ್ಧಿವಂತರು, ಹಣವಂತರು ಸಾಯಲಿಲ್ಲ. ಇವತ್ತು ಮೈಸೂರಿನಲ್ಲಿ ಎಷ್ಟು ನಷ್ಟವಾಗಿದೆ? ಅಲ್ಲಿ ಬಡವರ ಅಂಗಡಿಗಳೇ ನಾಶವಾಗಿವೆ. ಸಣ್ಣ ಸಣ್ಣ ಉದ್ದಿಮೆಗಳು ನಾಶವಾಗಿವೆ. ನಾನೇ ಮೈಸೂರಿಗೆ ಹೋಗಿದ್ದೆ. ಅಲ್ಲಿ

ಎಲ್ಲರೂ ಒಪ್ಪುತ್ತಾರೆ. ಅಲ್ಲಿ ಜನಕ್ಕೆ ಭಯ ಹಿಡಿಸಿದ್ದಾರೆ, ಅಲ್ಲಿಯವರಿಗೆ ವಿಷಯ ಏನು ಎಂದೇ ಸರಿಯಾಗಿ ಗೊತ್ತಿಲ್ಲ. ನಾನು ಸ್ಪಷ್ಟವಾಗಿ ಹೇಳುತ್ತೇನೆ, ಪೋಲಿಸ್‌ನವರು ಏನು ಹೇಳುತ್ತಾರೆ ಅದನ್ನು ದಯಮಾಡಿ ಕೇಳುವುದಕ್ಕೆ ಹೋಗಬೇಡಿ. ಸ್ವತಃ ತಾವೇ ಪರೀಕ್ಷೆ ಮಾಡಿ ಯಾವುದು ಸರಿ ಎನಿಸುತ್ತದೆಯೋ ಆ ಕೆಲಸವನ್ನು ಮಾಡಿ. ಇವತ್ತು ಒಂದೊಂದು ಪೋಲೀಸ್ ಸ್ಟೇಷನ್ ನಲ್ಲಿ, ಟೌನ್ ಪೋಲೀಸ್ ಸ್ಟೇಷನ್‌ಗಳಲ್ಲಿ ಮುಸಲ್ಮಾನರು ದಲಿತರು ಎಂಬ ಒಂದೇ ಜಾತಿಯವರನ್ನು ಹಾಕುತ್ತಿದ್ದೀರಿ. ನಿಮಗೆ ಇದರಿಂದ ಕಂಟ್ರೋಲ್ ಇರುವುದಿಲ್ಲ. ಈ ಮೈಸೂರು ಸಿಟಿಯನ್ನೇ ತೆಗೆದುಕೊಳ್ಳಿ, ಅಲ್ಲಿ ಯಾರೋ ಆರ್.ಎಸ್.ಎಸ್.ನಲ್ಲಿ ಇರತಕ್ಕ ಅಧಿಕಾರಿಗಳು, ಅವರ ಹೆಸರು ಈಗ ಏಕೆ, ಒಟ್ಟಿನಲ್ಲಿ ಮುಸಲ್ಮಾನರು ಇಲ್ಲ, ದಲಿತರು ಇಲ್ಲ ದಲಿತರು ಹಾಗೂ ಮುಸಲ್ಮಾನರನ್ನು ಅಲ್ಲಿಗೆ ಹಾಕಿದರೆ ಗಲಾಟೆ ಆಗುತ್ತಾ ಇರಲಿಲ್ಲ. ಅಂತಹ ವಾತಾವರಣ ಉಂಟಾಗುತ್ತಿರಲಿಲ್ಲ. ಸೂಕ್ಷ್ಮ ರೀತಿಯಲ್ಲಿ, ಜನರಿಗೆ ತೊಂದರೆ ಆಗದ ರೀತಿಯಲ್ಲಿ ಗುಂಡು ಉಪಯೋಗಿಸದೆ ಇರುವ ರೀತಿಯಲ್ಲಿ ಕೆಲಸ ಮಾಡಿದರೆ Idea of integration be there and then there will be harmonity in the life of the people ಅದಕ್ಕೆ ತಾವು ನಾವು ಹೇಳಿದ್ದು ಎಲ್ಲಾ ತಪ್ಪು ಎಂದು ಕಲ್ಪನೆ ಮಾಡಿ ನೀವು ಕ್ರಮ ತೆಗೆದುಕೊಳ್ಳುವುದಕ್ಕೆ ಹೋಗಬೇಡಿ.

**ಅಧ್ಯಕ್ಷರು:–** ಒಂದು ತಾಸು ಆಯಿತು.

**ಶ್ರೀ ಬಿ. ಬಸವಲಿಂಗಪ್ಪ:–** ಇವತ್ತು ಕೋಮುವಾರು ಗಲಭೆಗೆ ಕಾರಣ ಏನು ಎಂದು ಒಂದು ಪ್ರಶ್ನೆ. The people who are including in creating disaffection in the society are criminals and they are liable to be prosecuted the Indian Penal Code. ನಾನು ಕೆಲವು ಸೀನಿಯರ್ ಅಧಿಕಾರಿಗಳ ಕೇಳಿದೆ. Disaffection ಎಂದರೆ ಗೊತ್ತೇ ಎಂದು. ಅದು ಏನು ಸ್ವಾಮಿ ಹಾಗಂದ್ರೆ ಅಂತ ನನ್ನ ಕೇಳಿದು ಐ.ಪಿ.ಸಿ. ಅನ್ನು ಎಷ್ಟು ಜನ ಓದಿದ್ದೋರೋ ಗೊತ್ತಿಲ್ಲ. ನಿಮ್ಮ ಬಹಳ ಜನ ಅಧಿಕಾರಿಗಳಿಗೆ ಯಾವ ಕಾನೂನು ಇದೆ ಅದು ಗೊತ್ತಿಲ್ಲ, ಪ್ರೊಸಿಜರ್ ಗೊತ್ತಿಲ್ಲ. ಎವಿಡೆನ್ಸ್ ಆಕ್ಟ್ ಎಷ್ಟು ಜನ ಪೋಲೀಸ್ ಅಧಿಕಾರಿಗಳು ಓದಿದ್ದಾರೆ? ಹಿಡಿದುಕೊಂಡು ಹೋಗುವುದು ದೊಣ್ಣೆ ತೆಗೆದುಕೊಂಡು ಹೊಡೆಯುವುದು. ದೊಣ್ಣೆಯಿಂದ ಯಾವುದೂ ಪ್ರಯೋಜನ ಇಲ್ಲ. You must be a correct agent. You must be agent

to correct the wrongs done on the inocent people. You cannot beat them. You connot kill them you cannot shoot them. You have to treat them as citizenship ಹೇಳುತ್ತೀರಿ ನಿಮ್ಮ ಅಧಿಕಾರವನ್ನು ನಿಮಗೆ ಕೊಟ್ಟಿದ್ದೇವೆಂದು. ಹೇಳುವುದು ಹೇಳೋಕೆ ದೊಣ್ಣೆತೆಗೆದುಕೊಂಡು ಭಾರಿಸುವುದು, ಇದೇನು ಸ್ವಾಮಿ?

ಶ್ರೀ ಬಿ. ರಾಚಯ್ಯ:- ತಾವು ಅಧಿಕಾರದಲ್ಲಿದ್ದಾಗ ಲಾಠಿ ಪ್ರಹಾರ ಮಾಡಲಿಲ್ಲವೆ? ಗದ್ದಲ ಎಬ್ಬಿಸಲಿಲ್ಲವೆ? ಪೋಲೀಸ್‌ನವರ ಭಾಷೆ ನಿಮ್ಮ ಬಾಯಲ್ಲಿ ಬಂದಿತ್ತು. ನನ್ನ ಭಾಯಲ್ಲಿ ಅದು ಬರಲಿಲ್ಲ. ನಾನು ಬೆಂಗಳೂರಿನಲ್ಲಿದ್ದಾಗ ಮೈಸೂರಿನಲ್ಲಿ ಗಲಾಟೆಯಾಗಿದೆ. ಮೈಸೂರಿನಲ್ಲಿದ್ದಾಗ ಬೆಂಗಳೂರಿನಲ್ಲಿ ಆಗಿದೆ. ಪೋಲೀಸ್‌ನವರು ಕ್ರಮ ತೆಗೆದುಕೊಳ್ಳುತ್ತಾರೆ. ಇವರು ಅವರನ್ನು ಸುಮ್ಮನೆ ಇರಿಸುವುದಿಲ್ಲ.

ಶ್ರೀ ಬಿ. ಬಸವಲಿಂಗಪ್ಪ:- ಮಾನ್ಯ ರಾಚಯ್ಯನವರು ನಾವು ಏನೇ ಹೇಳಲಿ ಅವರು ಹೇಳಿದ್ದೆ ಹೇಳುತ್ತಾರೆ. ಕ್ರೈಮ್‌ಗೆ ಏತಕ್ಕೆ ಹಾಕುತ್ತೀರಿ ಅಂದರೆ ಪೋಲೀಸ್‌ನವರಿಗೆ ಕೆಲಸ ಬೇಡವೆ ಎಂದು ಹೇಳುತ್ತೀರಿ. ಈಗ ಬಹಳ ವಿಶೇಷವಾಗಿರತಕ್ಕ ವಿಷಯಕ್ಕೆ ಬರುತ್ತಿದ್ದೇನೆ. ಷೆಡ್ಯೂಲ್ಡ್‌ಕ್ಯಾಸ್ಟ್ ಷೆಡ್ಯೂಲ್‌ಟ್ರೈಬ್, ಬ್ಯಾಕ್‌ವರ್ಡ್‌ಕ್ಲಾಸ್ ಮತ್ತು ಬ್ಯಾಕ್‌ವರ್ಡ್ ಟ್ರೈಬ್ ಇವರುಗಳ ಬಗ್ಗೆ ದಲಿತರ ಬಗ್ಗೆ ಮಾತನಾಡುತ್ತಿದ್ದೇನೆ. ಮಾನ್ಯ ರಾಮಕೃಷ್ಣ ಹೆಗಡೆಯವರು ಅಧಿಕಾರಕ್ಕೆ ಬಂದಾಗಿನಿಂದ ಇಂದಿನವರೆಗೂ ಯುವಕರನ್ನು ಆಕರ್ಷಣೆ ಮಾಡಿಕೊಳ್ಳುವುದಕ್ಕೋಸ್ಕರ ಯಾರ್‍ಯಾರು ಷೆಡ್ಯೂಲ್ಡ್‌ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ ವಿದ್ಯಾರ್ಥಿಗಳು ಸ್ನಾತಕೋತ್ತರ ಪದವಿಯಲ್ಲಿ ಫಸ್ಟ್‌ಕ್ಲಾಸ್‌ನಲ್ಲಿ ಪಾಸ್ ಆಗುತ್ತಾರೆ ಅಂದರೆ ಮೆರಿಟ್‌ನಲ್ಲಿ ಯಾರು ಮುಂದೆ ಬರುತ್ತಾರೆ ಅಂತಹವರಿಗೆ ಕೆಲಸ ಕೊಡುತ್ತೇನೆಂದು 4 ವರ್ಷಗಳ ಹಿಂದೆ ಹೇಳಿದ್ದರು. ಒಬ್ಬರಿಗಾದರೂ ಕೊಟ್ಟಿದ್ದಾರೆಯೇ? ಅದರ ಬಗ್ಗೆ ಮಾತನಾಡಿದರೆ ಹೈಕೋರ್ಟ್‌ನಲ್ಲಿ ಸ್ಟೇ ಆರ್ಡರ್ ಇದೆಯೆಂದು ಹೇಳುತ್ತಾರೆ. ಸ್ಟೇ ಆರ್ಡರ್ ವೆಕೆಟ್ ಮಾಡಿಸಿ. ಹೈಕೋರ್ಟ್ ಮುಖ್ಯ ನ್ಯಾಯಾಧೀಶರು ಬಹಳ ಕಟ್ಟುನಿಟ್ಟಾಗಿ, ನೀತೀಯತೆ ಇಲ್ಲದೆ ಕೆಲಸ ಮಾಡುತ್ತಾರೆಂದು ಹೇಳುತ್ತಾರೆ ಅವರ ಮುಂದೆ ನೀವು ಈ ವಿಷಯವನ್ನು ಏತಕ್ಕೆ ಹೇಳಲಿಲ್ಲ? The cases involving social justice in respect of backward classes, scheduled castes, minorties should be taken

so priority basis. This is the urge of people. This is the urge of this House. You must dispose of the cases. ನಾಲ್ಕು ವರ್ಷಗಳಿಂದ ಈ ಕೇಸು ಹಾಗೆಯೇ ಇದೆ. ಯುವಕರಿಗೆ ನೀವು ಹೀಗೆ ಮಾಡುತ್ತೀರಿ.

**ಶ್ರೀ ಜಿ. ಬಸವಣಪ್ಪ:–** ಸ್ಟೇ ವೆಕೆಟ್ ಮಾಡುವುದಕ್ಕೆ ಪ್ರಯತ್ನ ಮಾಡುತ್ತಿದ್ದೇವೆ.

**ಶ್ರೀ ಬಿ. ಬಸವಲಿಂಗಪ್ಪ:–** ನಾನು ಕೇಳಿದ್ದಕ್ಕೆ ಪ್ರಯತ್ನ ಮಾಡುತ್ತಿದ್ದೇವೆಂದು ಹೇಳುತ್ತಿದ್ದಾರೆ. ನಾನು ಮಾಡಿರುವುದನ್ನು ಹೇಳುತ್ತಿದ್ದೇನೆ. ವಿಶೇಷ ಘಟಕ ಯೋಜನೆಗಳಿಗೆ ನೂರಕ್ಕೆ ನೂರರಷ್ಟು ಅನುದಾನ ಕೊಡಲಾಗುತ್ತಿದೆ. ಅದನ್ನು ನೀವು ಯಾವಾಗ ಖರ್ಚು ಮಾಡುತ್ತೀರಿ? ಎಲ್ಲೆಲ್ಲಿ ಎಷ್ಟೆಷ್ಟು ಹಣವನ್ನು ಖರ್ಚು ಮಾಡಿದ್ದೀರಿ ಅದರ ಬಗ್ಗೆ ಹೇಳಿ. ಬಡವರ ಬಗ್ಗೆ ಸುಮ್ಮನೆ ಕನಿಕರವಾಗಿ ಭಾಷಣ ಮಾಡುತ್ತಿದ್ದೀರಿ. ಬಡವರ ಬಗ್ಗೆ ನೀವು ಕೆಲಸ ಮಾಡಬೇಕು, ಆಗ ದೇಶ ಉದ್ಧಾರವಾಗುತ್ತದೆ. ಒಳ್ಳೆಯ ಕೆಲಸಗಳನ್ನು ಮಾಡಲಿಕ್ಕೆ ಇವರಿಗೆ ಮನಸಿಲ್ಲ. ಏನೇನು ಸ್ಕೀಮುಗಳಿವೆ ಅವುಗಳನ್ನೆಲ್ಲ ಜಾರಿಗೆ ಕೊಡಿ. ಹೆಗಡೆಯವರು ಇದೇ ಸ್ಥಳದಲ್ಲಿ ಹೇಳಿದರು, ಮೂರು ಕಡೆ ರೆಸಿಡೆನ್ಸಿಯಲ್ ಹೈಸ್ಕೂಲ್ ಗಳನ್ನು ಮಾಡುತ್ತೇವೆಂದು ಹೇಳಿದ್ದಾರೆ. ಟೊಳ್ಳು ವಾಗ್ದಾನಗಳನ್ನು ಏತಕ್ಕೆ ನೀಡುತ್ತೀರಿ. ಯುವಕರಿಗೆ ಕೆಲಸ ಕೊಡುತ್ತೇವೆಂದು ಹೇಳಿ ನಾಲ್ಕು ವರ್ಷಗಳಾಯಿತು ಒಬ್ಬರಿಗೂ ಕೆಲಸ ಕೊಡಲಿಲ್ಲ. ಇದು ಟೊಳ್ಳು ವಾಗ್ದಾನ ಆಗುವುದಿಲ್ಲವೆ?

**ಶ್ರೀ ಜಿ. ಬಸವಣಪ್ಪ:–** We have taken up construction of 100 S.C./S.T. hostels. The proposal has been sanctioned.

**ಶ್ರೀ ಬಿ. ಬಸವಲಿಂಗಪ್ಪ:–** ಒಂದನ್ನೂ ಮಾಡಲಿಲ್ಲ.

**ಶ್ರೀ ಜಿ. ಬಸವಣ್ಣಪ್ಪ:–** ನಾವೇನು ವಾಗ್ದಾನ ಮಾಡಿದ್ದೇವೆ ಅದನ್ನು ಜಾರಿಗೆ ಕೊಡುತ್ತಿದ್ದೇವೆ.

**ಶ್ರೀ ಬಿ. ಬಸವಲಿಂಗಪ್ಪ:–** ಆಮೇಲೆ ಶ್ರೀಮಾನ್ ರಾಮಕೃಷ್ಣ ಹೆಗಡೆಯವರು ಒಂದು ಮಾತನ್ನು ಹೇಳಿದರು ಏನೆಂದರೆ, ಯಾವ್ಯಾವ ಇಲಾಖೆಯಲ್ಲಿ ಷೆಡ್ಯೂಲ್ಡ್ ಕ್ಯಾಸ್ಟ್‌ನವರಿಗೆ ಇಟ್ಟಿದ್ದು ಖರ್ಚಾಗದೇ ಇರತಕ್ಕಂಥ ಹಣ ಏನು ಇದೆ ಅವೆಲ್ಲವನ್ನೂ ಶೇಖರಣೆ ಮಾಡಿ ಒಂದು ಸೆಂಟ್ರಲ್

ಫಂಡ್ ಕ್ರಿಯೇಟ್ ಮಾಡುತ್ತೇವೆ ಎಂದು. ಸಮಾಜ ಕಲ್ಯಾಣ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಇದನ್ನು ಮಾಡುತ್ತೇವೆ ಎಂದು ಹೇಳಿದ್ದಿರಲ್ಲ, ಇದನ್ನು ಮಾಡಿದ್ದೀರಾ? ಎಷ್ಟು ಹಣ ಇದೆಯೆಂದು ದಯವಿಟ್ಟು ನಾಳೆ ಹೇಳಿ. ಖರ್ಚು ಮಾಡಿದ್ದೀರಿ ಎಂದು ಹೇಳಿ.

**ಶ್ರೀ ಬಿ. ಬಸವಣ್ಣಪ್ಪ:–** ಇದರ ಬಗ್ಗೆ ನಾನು ಹೇಳುತ್ತೇನೆ. We taken up construction of 100 S.C./S.T. hostel. The same work has been sanctioned. ನಾಳೆ ಆರ್ಡರನ್ನು ತಂದು ಕೊಡುತ್ತೇನೆ ತಮಗೆ.

**ಶ್ರೀ ಬಿ. ಬಸವಲಿಂಗಪ್ಪ:–** ಸ್ವಾಮಿ, ಈ ಸುಳ್ಳು ಜಾತಿ ಸರ್ಟಿಫಿಕೇಟ್‌ಗಳು ಕರ್ನಾಟಕ ರಾಜ್ಯದಲ್ಲಿ 1979ರಲ್ಲಿ ಪ್ರಾರಂಭವಾಯಿತು. ಆಗ ಒಬ್ಬರು ಮಂತ್ರಿ ಶ್ರೀಮಾನ್ ಎಲ್.ಜಿ. ಹಾವನೂರ್ ಅವರು, ನಂತರ ಶ್ರೀ ವಿ.ಎಲ್. ಪಾಟೀಲ್ ಅವರು ಒಂದು ಥರಾ ಮಂತ್ರಿ, ಇವರು ಇನ್ನೊಂದು ಥರಾ ಮಂತ್ರಿ, ಈ ಸುಳ್ಳು ಜಾತಿ ಪತ್ರಗಳನ್ನು ಕೊಟ್ಟು ಕೊಟ್ಟು, ಯಾರು ನಿಜವಾಗಿಯು ಅರ್ಹರಿದ್ದಾರೆ, ಅವರ ಹೆಸರಿನಲ್ಲಿ ಹೊಲೆಯ ಅಂದರೆ ಹೊಲೆಯ ಅಂತ ಬರೆಯುವುದು, ಸರ್ಟಿಫಿಕೇಟ್ ತೆಗೆದುಕೊಂಡು ಕೆಲಸಕ್ಕೆ ಸೇರಿಕೊಳ್ಳುವುದು. ಷೆಡ್ಯೂಲ್ಡ್‌ಕ್ಯಾಸ್ಟ್ ಲಿಸ್ಟ್‌ನಲ್ಲಿ ಯಾರು ಇದ್ದಾರೆ ಷೆಡ್ಯೂಲ್ಡ್ ಟ್ರೈಬ್ ಲಿಸ್ಟ್‌ನಲ್ಲಿ ಯಾರು ಇದ್ದಾರೆ, ಅವರ ಹೆಸರುಗಳಲ್ಲಿ ಸರ್ಟಿಫಿಕೇಟ್ ಬರೆಸುವುದು ಕೆಲಸಕ್ಕೆ ಸೇರಿಕೊಳ್ಳುವುದು ನಡೆಯಿತು. ಯಾರು ನಿಜವಾಗಿಯೂ ಶೆಡ್ಯೂಲ್ಡ್ ಕ್ಯಾಸ್ಟ್‌ನಲ್ಲಿ ಇದ್ದಾರೆ, ಅವರಿಗೆ ನ್ಯಾಯವಾಗಿ ಸಿಗಬೇಕಾದಂಥ ಉದ್ಯೋಗ, ರಿಜರ್ವೇಶನ್ ಬೇರೆಯವರ ಪಾಲಿನದಾಯಿತು. ಅವರೇನೂ ಸಾವಿರಾರು ವರ್ಷಗಳ ಕಾಲ ಅವಧಿಯನ್ನು ಕೇಳುತ್ತಿಲ್ಲ. ನಿಗದಿಯಾದ ಕೆಲವು ವರ್ಷಗಳ ಕಾಲ ಅವರಿಗೆ ಎಲ್ಲಾ ಸವಲತ್ತುಗಳು ಮೀಸಲಾತಿ ಎಲ್ಲಾ ಕೊಡುವುದು ಸಮ್ಮತವಾಗಿದ್ದರೂ. ಅವರಿಗೇ ಅನ್ಯಾಯ ಮಾಡುತ್ತಿದ್ದಾರೆ. ಅವರನ್ನು ಹಾಗೆಯೇ ಇಡಬೇಕಂದು ಮಾಡಿದ್ದೀರಿ ಬೇರೆಯವರು ಮಾತ್ರ ಅವರ ಹೆಸರಿನಲ್ಲಿ ಪ್ರಯೋಜನ ಪಡೆಯುತ್ತಿದ್ದಾರೆ. ಆದ್ದರಿಂದ ನಾನಿಲ್ಲಿ ಹೇಳುವುದೇನೆಂದರೆ ಇದನ್ನು ಕಟ್ಟುನಿಟ್ಟಾಗಿ ಮಾಡಿ. ನಾನು ಒಂದು ಮೋಶನ್ ಅನೂ ಕಳಿಸಿದ್ದೇನೆ. ಯಾರು ಅರ್ಹರಿದ್ದಾರೆ, ಅವರಿಗೆ ಸಹಾಯ ಮಾಡತಕ್ಕ ಪ್ರಯತ್ನಮಾಡಿ ಆಮೇಲೆ ಬ್ಯಾಕ್‌ವರ್ಡ್ ಕ್ಲಾಸ್ ಸ್ವಾಮಿ? ಅವರು. ಇವತ್ತು ಬೀದಿಭಿಕಾರಿಗಳು ಇದ್ದ ಹಾಗೆ ಇದ್ದಾರೆ. ಕಾಕಾಕಾಲೇಕರ್ ಕಮಿಷನ್ ಆದ ಮೇಲೆ ಹಿಡಿದು ಮೊನ್ನೆ ವೆಂಕಟಸ್ವಾಮಿ ಕಮೀಷನ್‌ವರೆಗೆ

ಕಮೀಷನ್‌ಗಳೋ ಕಮೀಷನ್. ಯಾರು ಬ್ಯಾಕ್‌ವರ್ಡ್ ಕ್ಲಾಸ್ ಎಂದು ರಾಜ್ಯಾಂಗ ಹೇಳುತ್ತದೆ. ರಾಜ್ಯಾಂಗವನ್ನು ಬಿಟ್ಟು ಅನುಕೂಲ ಅಂತ ಏನು ಹೇಳುತ್ತಾರೆ, ಅನುಕೂಲಕ್ಕೆ ತಕ್ಕಂತೆ ಎಲ್ಲರನ್ನೂ ಬ್ಯಾಕ್‌ವರ್ಡ್ ಕ್ಲಾಸ್‌ಗೆ ಸೇರಿಸುವುದು. ಹೀಗೆ ಎಲ್ಲರನ್ನೂ ಸೇರಿಸಿಬಿಟ್ಟು ಯಾರಿಗೆ ಉಪಕಾರ ಮಾಡುವುದು? ಬ್ಯಾಕ್‌ವರ್ಡ್ ಕ್ಲಾಸ್ ಜನರು, ಯಾರು ನಿರ್ಗತಿಕರು ಇದ್ದಾರೆ, ಅವರನ್ನು ಒಂದು ಹಂತಕ್ಕೆ ತಂದು, ನಾಗರೀಕರನ್ನಾಗಿ ಮಾಡಿ ಎಂದು ರಾಜ್ಯಾಂಗ ಏನು ಹೇಳುತ್ತದೆ. ಅದು ಬಿಟ್ಟರು. ನಾನು ಬ್ಯಾಕ್‌ವರ್ಡ್ ಕ್ಲಾಸ್ ನೀನು ಬ್ಯಾಕ್‌ವರ್ಡ್ ಎಲ್ಲರನ್ನೂ ಬ್ಯಾಕ್‌ವರ್ಡ್ ಲಿಸ್ಟ್‌ಗೆ ಸೇರಿಸುವುದು, ಒಂದು ಗಾದೆಮಾತು ಎಲ್ಲರನ್ನೂ ಪ್ರೀತಿ ಮಾಡಲು ಹೋಗಿ ಗುಡಾರ ಕಿತ್ತುಕೊಂಡು ಮನೆಗೆ ಹೋದರು ಅಂತ. ಆದ್ದರಿಂದ ನಿರ್ದಿಷ್ಟವಾಗಿ, ಯಾವುದೇ ದಾಕ್ಷಿಣ್ಯ ಇಲ್ಲದೆ, ಸ್ಪಷ್ಟವಾದ ತಿರ್ಮಾನವನ್ನು ಸರ್ಕಾರ ತೆಗೆದುಕೊಳ್ಳಬೇಕು. ಯಾವುದು ಬ್ಯಾಕ್‌ವಡ್‌ಕ್ಲಾಸ್ ಎಂದು ಹೇಳಿ ಬೇಕಾದಷ್ಟು ಸುಪ್ರಿಂಕೋರ್ಟ್ ಜಡ್ಜ್‌ಮೆಂಟ್ ಇದೆ, ಹೈಕೋರ್ಟ್ ಜಡ್ಜಮೆಂಟ್ ಇದೆ. ಯಾರು ಅರ್ಜಿಕೊಟ್ಟರೂ ಅವರನ್ನು ಬ್ಯಾಕ್‌ವರ್ಡ್ ಕ್ಲಾಸ್‌ಗೆ ಸೇರಿಸುವುದೆಂದರೆ ಏನರ್ಥ? ಮೊನ್ನೆ ಚಳುವಳಿ ಆಯಿತಲ್ಲ ಆಯೋಗದ ವರದಿ ವಿಚಾರ ಅದನ್ನು ನೋಡಿ ನನಗೆ ಬಹಳ ನಾಚಿಕೆ ಆಯಿತು ಹೊಸದಾಗಿ ಒಂದು ಲಿಸ್ಟ್ ಮಾಡಿದ್ದೀರಿ. ನಿಜವಾದ ಅರ್ಹರು ಯಾರು ಇದ್ದಾರೆ. ಅವರನ್ನು ಬಿಟ್ಟು ಎಲ್ಲರೂ

**ಶ್ರೀ ಜಿ. ಬಸವಣಪ್ಪ:**– ಈ ಹಿಂದುಳಿದವರ ಪಟ್ಟಿ ಏನು ಮಾಡಿದ್ದೇವೆ ಅದು ತಾತ್ಕಾಲಿಕವಾಗಿ ಆದರೆ ನಿಜವಾದ ಹಿಂದುಳಿದವರಿಗೆ ವೆಟೇಜ್ ಕೊಟ್ಟಿದ್ದೇವೆ. 3ನೇ ಬ್ಯಾಕ್‌ವರ್ಡ್ ಕ್ಲಾಸ್ ಕಮಿಷನ್ ಬಂದಾಗ ಸರಿಯಾದ ರೀತಿಯಲ್ಲಿ ಅದರ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇವೆ.

**ಶ್ರೀ ಬಿ. ಬಸವಲಿಂಗಪ್ಪ:**– ಸ್ಟೇಟ್‌ಮೆಂಟ್ ಕೊಟ್ಟು, ಕೊಟ್ಟು ಶ್ರೀ ಬಸವಣ್ಣಪ್ಪನವರು ಸರಿ ಹೋದರು. ಮುಸಲ್ಮಾನರು ಈ ದೇಶದಲ್ಲಿ ನೆಮ್ಮದಿಯಾಗಿರಬೇಕು. ನನ್ನ ಜೀವನದ ಉದ್ದಕ್ಕೂ.... I have worked for the welfare of the Muslion I represented them at the All India level as a special Representative of All India Congress Committe. I have travelled over the country and I was known as

a representative of Muslion Every Muslim in this country knowns that I have represented our properly.

ದಯವಿಟ್ಟು ರಾಷ್ಟ್ರೀಯ ಭಾವೈಕ್ಯ ತರುವುದರಲ್ಲಿ ನಮ್ಮದೂ ಜವಾಬ್ದಾರಿ ಉಂಟು. ಪ್ರಜಾಪ್ರಭುತ್ವವನ್ನು ಉಳಿಸಿಕೊಳ್ಳುವುದಕ್ಕೆ ನಮ್ಮದೂ ಜವಾಬ್ದಾರಿ ಉಂಟು. ಆದರೆ ನೆಮ್ಮದಿಯಾಗಿರುವುದಕ್ಕೆ ತಾವು ಅವಕಾಶ ಮಾಡಿಕೊಡಬೇಕೆಂದು ತಮ್ಮನ್ನು ಕೇಳಿಕೊಳ್ಳುತ್ತೇನೆ. ಇನ್ನು .ಹಲವು ವಿಚಾರವಾಗಿ ಹೇಳಬೇಕಾಗಿತ್ತು.

**ಅಧ್ಯಕ್ಷರು:–** ಡಿಮ್ಯಾಂಡ್ಸ್ ಬಗ್ಗೆ ಮಾತನಾಡುವಾಗ, ಉಳಿದ ವಿಚಾರಗಳನ್ನು ಹೇಳುವಿರಂತೆ, ಈಗ ಮುಗಿಸಿಬಿಡಿ.

**ಶ್ರೀ ಬಿ. ಬಸವಲಿಂಗಪ್ಪ:–** ತಾವು ಮಾಡತಕ್ಕಂಥ ಕೆಲಸ, ಹಾಕತಕ್ಕಂಥ ಹಣ, ಒಂದಕ್ಕೊಂದಕ್ಕೆ ತಾಳೆ ಇಲ್ಲ. ರಾಜ್ಯ ಸರ್ಕಾರದ ಮೇಲೆ ಇರತಕ್ಕ ಸಾಲ 1851.65 ಕೋಟಿ ರೂಪಾಯಿ. This is the loan hanging over on the head of the Government. Every Year you are paying Rs. 126/- crores towards interest. ಮಾನ್ಯ ದೇವೇಗೌಡರು ಲೋಕೋಪಯೋಗಿ ಇಲಾಖೆಯ ಮೇಲೆ ಉತ್ತರ ಕೊಡುತ್ತಾ ಹೇಳಿದರು. ಡಿಸೆಂಬರ್ 31 ರೊಳಗೆ 36 ಕೋಟಿ ರೂಪಾಯಿ ಕಂಟ್ರಾಕ್ಟರುಗಳಿಗೆ ಬಾಕಿ ಕೊಟ್ಟಿಲ್ಲ ಎಂದು ಹೇಳಿದರು. ಕೊಡುವುದಕ್ಕೆ ನಿಮ್ಮ ಹತ್ತಿರ ಹಣ ಇದೆಯೇ? ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಒಂದು ಇಲಾಖೆಯಲ್ಲೇ ಇಷ್ಟು ಬಾಕಿ ಇದ್ದರೆ, ಬೇರೆ ಬೇರೆ ಇಲಾಖೆಗಳಲ್ಲಿ ಎಷ್ಟು ಬಾಕಿ ಉಳಿದಿದೆಯೋ? ತಾವು ಸರ್ಕಾರದ ಹಣಕಾಸಿನ ವ್ಯವಸ್ಥೆಯನ್ನು ಸುಭದ್ರವಾಗಿ ಇಟ್ಟುಕೊಳ್ಳುವುದಕ್ಕೆ ತಾವು ಪ್ರಯತ್ನ ಮಾಡಿ. ಯಾವುದಕ್ಕೂ ಕೇಂದ್ರಕ್ಕೆ ಕೈ ತೋರಿಸಿ, ಅವರು ಕೊಟ್ಟಿಲ್ಲ ಎಂದು ಹೇಳಿ, ತಾವು ನಿಂದನೆ ಮಾಡುವುದಕ್ಕೆ ಹೋಗಬೇಡಿ. ಸರ್ಕಾರದ ವ್ಯವಸ್ಥೆಯನ್ನು, ಕಾರ್ಯಕ್ರಮವನ್ನು ಸರಿಯಾಗಿ ಮಾಡಬೇಕೆಂದು ಹೇಳುತ್ತೇನೆ. ನಿಮ್ಮ ಹಣಕಾಸಿನ ವ್ಯವಸ್ಥೆ ಬಗ್ಗೆ ಡಿಸ್ಟಲರೀಸ್ ಮತ್ತಿತರ ಬಾಬ್ತುಗಳಿಂದ ಟ್ಯಾಕ್ಸ್ ವಸೂಲು ಮಾಡಿ ಆದರೆ ದಯಮಾಡಿ ಅದರ ಮೇಲೆಯೇ ಕಾಲಹರಣ ಮಾಡಬೇಡಿ. ಸರಿಯಾಗಿ ಸೂಚನೆ ಮಾಡಿ, ಹಣದ ವ್ಯವಸ್ಥೆಯನ್ನು ಸರಿಯಾಗಿ ನಡೆಸಿಕೊಂಡು ಹೋಗಿ, ಇಲ್ಲದೇ ಹೋದರೆ ನೀವು ಸರ್ಕಾರವನ್ನು ನಡೆಸಿಕೊಂಡು ಹೋಗುವುದಕ್ಕಾಗುವುದಿಲ್ಲ.

ಅಧ್ಯಕ್ಷರು ನನಗೆ ಅವಕಾಶ ಕೊಟ್ಟಿದ್ದಾರೆ. ಆದರೆ ಹೆಚ್ಚಿನ ಅವಕಾಶವನ್ನು ತೆಗೆದುಕೊಳ್ಳುವುದಕ್ಕೆ ನಾನು ತಯಾರಿಲ್ಲ. ಬಜೆಟ್ ಮೇಲೆ ಮಾತನಾಡುವಾಗ, ಹೆಚ್ಚಿನ ವಿಚಾರಗಳನ್ನು ಹೇಳುತ್ತೇನೆ. ಆದರೆ ಇವರು ಈ ರೀತಿ ಹೋದರೆ ಸರ್ಕಾರ ನಡೆಸುವುದಕ್ಕಾಗುವುದಿಲ್ಲ. Ways and Means funds will not be available at our disposal. You will be in a sad position towards the end of is year.

## ಹೊಲೆಮಾದಿಗರನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನ (14ನೇ ಏಪ್ರಿಲ್ 1972)

ಶ್ರೀ ಬಿ. ಬಸವಲಿಂಗಪ್ಪ (ಪೌರಾಡಳಿತ ಸಚಿವ):– ಶ್ರೀಮತಿ ಅಧ್ಯಕ್ಷರೇ, ನಾನು ನನ್ನ ಗೌರವಾನ್ವಿತ ಸದಸ್ಯರು ಎತ್ತಿರುವ ಪ್ರಶ್ನೆಗೆ ಉತ್ತರಿಸುತ್ತೇನೆ. ಈ ಎಲ್ಲಾ ಸದಸ್ಯರು ಪಾಕಿಸ್ತಾನದ ವಿರುದ್ಧ ಐತಿಹಾಸಿಕವಾಗಿ ಹೋರಾಡುತ್ತಿರುವ ಶೂರರಾದ ಬಾಂಗ್ಲದೇಶಿಯರಿಗೆ ದನ್ಯವಾದಗಳನ್ನು ಹೇಳಬೇಕು. ಇದು ಸ್ವಾತಂತ್ರ ಮತ್ತು ಸಮಾನತೆಯ ವಿಚಾರದಲ್ಲಿ ಮಾನವೀಯತೆಯನ್ನು ಎತ್ತಿ ಹಿಡಿಯುವ ನಾಯಕತ್ವವು ಶ್ರೀಮತಿ ಇಂದಿರಾಗಾಂಧಿ ಪ್ರಧಾನಿಮಂತ್ರಿಗಳ ನೇತೃತ್ವದಲ್ಲಿ ನಡೆಯುತ್ತಿದೆ. ಅವರು ನೈತಿಕವಾಗಿ ಬೆಂಬಲಿಸಿದ್ದಾರೆ. ಹಾಗಾಗಿ ಶ್ರೀಮತಿ ಇಂದಿರಾಗಾಂಧಿಯವರು ಮಾನವ ಸ್ವಾತಂತ್ರದ ಸಂಕೇತ. ಅವರ ಐತಿಹಾಸಿಕ ನಾಯಕತ್ವದಲ್ಲಿ ಈ ದೇಶದಲ್ಲಿ ಒಳ್ಳೆಯ ಐತಿಹಾಸಿಕ ಘಟನೆಗಳು ನಡೆದಿವೆ. ಆದರೆ ಕೆಲವು ಸದಸ್ಯರು ಬರಿ ಘೋಷಣೆ ಎಂದು ಕರೆಯುತ್ತಿದ್ದಾರೆ. ನನ್ನ ಸ್ನೇಹಿತರಿಗೆ ಹೇಳುವುದೇನೆಂದರೆ ನಮ್ಮದು ಘೋಷಣೆ ಮಾತ್ರವಲ್ಲ. ವ್ಯವಸ್ಥಿತವಾದ ಕಾರ್ಯಯೋಜನೆಯೊಂದಿಗೆ ನಾವು ಮತ್ತು ನಮ್ಮ ಪಕ್ಷ ಕಾರ್ಯನಿರತವಾಗಿದೆ.

ಶ್ರೀ ಎಂ.ಎಸ್. ಕೃಷ್ಣನ್:– ಗೌರವಾನ್ವಿತ ಸಚಿವರು ಎಲ್ಲಾ ಇಲಾಖೆಗಳ ಪರವಾಗಿ ಅಥವಾ ಪ್ರಧಾನ ಮಂತ್ರಿಗಳ ಪರವಾಗಿ ಮಾತಾನಾಡುತ್ತಿದ್ದಾರೆಯೇ ಎಂಬುದನ್ನು ತಿಳಿದುಕೊಳ್ಳಬೇಕು.

ಶ್ರೀ ಬಿ. ಬಸವಲಿಂಗಪ್ಪ:– ನೀವೇ ಅವರನ್ನು (ಶ್ರೀಮತಿ ಇಂದಿರಾ ಗಾಂಧಿ) ಹೊಗಳಿದ್ದೀರಿ? ನಾನು ಸರ್ಕಾರದ ಪರವಾಗಿ ಮಾತನಾಡುತ್ತಿದ್ದೇನೆ.

ಶ್ರೀ ಎಂ.ಎಸ್. ಕೃಷ್ಣನ್:- ನನಗೆ ಗೊತ್ತು? ನೀವು ಸರ್ಕಾರದ ಪರವಾಗಿ ಮಾತನಾಡುತ್ತಿದ್ದೀರಿ. ಸರ್ಕಾರದ ಉಪನಾಯಕರು ಕಲಾಪದ ಬಗ್ಗೆ ಮಾತಾನಾಡುತ್ತಿದ್ದಾರೆ. ನನಗೆ ಗೌರವಾನ್ವಿತ ಸಚಿವರು ಎಲ್ಲಾ ಇಲಾಖೆಗಳ ಪರವಾಗಿ ಮಾತಡುತ್ತಿದ್ದಾರೋ ಅಥವಾ ಬಾಂಗ್ಲಾದೇಶದ ಬಗ್ಗೆ ಮಾತನಾಡುತ್ತಿದ್ದಾರೋ?

ಶ್ರೀ ಬಿ. ಬಸವಲಿಂಗಪ್ಪ:- ನಾನು ಯಾವುದಕ್ಕೂ ಬಗ್ಗುವುದಿಲ್ಲ.

ಶ್ರೀ ಎಂ.ಎಸ್. ಕೃಷ್ಣನ್:- ತಾವು ಸಹನೆಯನ್ನು ಕಳೆದುಕೊಳ್ಳಬೇಡಿ?

ಶ್ರೀ ಬಿ. ಬಸವಲಿಂಗಪ್ಪ:- ಇದು ಅವರ ಚಲನಾಶೀಲ ಚತುರ ನಾಯಕತ್ವದಿಂದಲೇ ಪಕ್ಷದ ಎಲ್ಲಾ ಕಾರ್ಯಕರ್ತರಿಗೆ ಒಂದು ರೀತಿಯ ಸಂತೋಷ ಸಿಕ್ಕಿದೆ. ನಾವು ಯಾವ್ಯಾವ ಘೋಷಣೆಗಳನ್ನು ಕೂಗುತ್ತೇವೆಯೋ ಅವುಗಳನ್ನು ನಾವು ಕಾರ್ಯರೂಪಕ್ಕೆ ತರಬೇಕು. ನನ್ನ ಕೆಲವು ಸ್ನೇಹಿತರು ಕಾರ್ಯಕ್ರಮದ ಜಾರಿಯ ಬಗ್ಗೆ ಸಂಶಯ ವ್ಯಕ್ತಪಡಿಸಿದ್ದಾರೆ. ನಾನು ಹೇಳುವುದೇನೆಂದರೆ ಕಳೆದ 10 ವರ್ಷಗಳಿಂದ ಸರ್ಕಾರವು ಕೆಲವೊಂದು ವರ್ಗದ ಜನರಿಂದ ನಡೆಯುತ್ತಿದೆ, ಅಧಿಕಾರಿಗಳು ಸಹ ಅವರ ಮನಸ್ಥಿತಿಯನ್ನು ಬದಲಿಸಲು ಸಾಧ್ಯವಾಗಿಲ್ಲ. ಈ ಅಧಿಕಾರಿಗಳೆಲ್ಲ ರಾಜ್ಯಪಾಲರ ನಿಯಮಗಳನ್ನು ಪಾಲಿಸುತ್ತಾ ರಾಜ್ಯವನ್ನು ಆಳುತ್ತಿರುವ ರಾಜ್ಯಪಾಲರ ಖುಷಿ ಪಡಿಸುವುದಕ್ಕೋಸ್ಕರ ಕೆಲಸ ಮಾಡಿದಂತೆ ಕಾಣಿಸುತ್ತದೆ. ಈಗ ಅಧಿಕಾರಿಗಳು ನಮ್ಮ ಪಕ್ಷದ ಕಾರ್ಯಕ್ರಮಗಳಿಗೆ ಹೊಂದಿಕೊಳ್ಳುವ ಕಾಲಬಂದಿದೆ. ನಾವು ಜನರ ನಂಬಿಕೆ ಮತ್ತು ವಿಶ್ವಾಸದ ಮೇಲೆ ನಡೆಯಬೇಕಾಗುತ್ತದೆ. ಹಾಗಾಗಿ ಈ ಅಧಿಕಾರಿಗಳು ಹೊಸ ಪರಿಸರಕ್ಕೆ ಹೊಂದಿಕೊಳ್ಳಬೇಕು ಅಥವಾ ಸೇವೆಯನ್ನು ಬಿಡಬೇಕು. ಮತ್ತು ಕೆಲವು ಸದಸ್ಯರು ನಮ್ಮ ಪಕ್ಷದ ಕಾರ್ಯಕ್ರಮ ಮತ್ತು ನೀತಿಗಳ ಬಗ್ಗೆ ಸಂಶಯ ವ್ಯಕ್ತಪಡಿಸಿದ್ದಾರೆ. ಇನ್ನು ಕೆಲವರು ಮುಂದುವರೆದು ಈ ಕಾರ್ಯಕ್ರಮಗಳ ಜಾರಿ ಅಸಾಧ್ಯವೆಂದು ಹೇಳಿದ್ದಾರೆ. ಆದರೆ ನಾನು ಈ ಮಾತನ್ನು ಒಪ್ಪುವುದಿಲ್ಲ, ಮತ್ತು ನೀವು ಸಹ ಈ ಕಾರ್ಯಕ್ರಮಗಳು ಜಾರಿಯಾಗುವುದಿಲ್ಲ ಎಂದು ಊಹಿಸಬಾರದು. ನಾವು ಈ ಎಲ್ಲಾ ಕಾರ್ಯಕ್ರಮಗಳನ್ನು ಕೊನೆಯ ಪತ್ರದಂತೆ ಆದೇಶದಂತೆ ಜಾರಿಮಾಡುತ್ತೇವೆ. ಹಾಗಾಗಿ ಗೌರವಾನ್ವಿತ ಸದಸ್ಯರುಗಳ ಈ ಕಾರ್ಯಕ್ರಮ ಜಾರಿಯಾಗಿದ್ದಕ್ಕೆ ಎಲ್ಲರೂ ಧನ್ಯವಾದ ಹೇಳಬೇಕು. ನಾವು ಕಳೆದ

ತಿಂಗಳು 23ರಂದು ಸರ್ಕಾರವನ್ನು ರಚಿಸಿದ್ದೇವೆ. ನಾವು ಈಗಷ್ಟೇ ಸಮಸ್ಯೆಗಳ ಕಡೆ ಗಮನಹರಿಸಿದ್ದೇವೆ. ಹಾಗಾಗಿ ನಾವು ಶತಪ್ರಯತ್ನ ಮಾಡಿ ಜನರ ಆಶೋತ್ತರಗಳನ್ನು ಈಡೇರಿಸಲು ಶ್ರಮಪಟ್ಟು ಪ್ರಯತ್ನಿಸುತ್ತೇವೆ.

ನಾನು ಪ್ರತಿಯೊಂದು ಅಂಶಕ್ಕೆ ಒಂದೊಂದಾಗಿ ಉತ್ತರಿಸುತ್ತೇನೆ. ಸುಮಾರು ಸದಸ್ಯರು ಬೇರೆ ಬೇರೆ ವಿಚಾರಗಳು ಅಂದರೆ ನೀರು ಸರಬರಾಜು, ವಸತಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಿದ್ದಾರೆ. ಸುಮಾರು 1500 ಹಳ್ಳಿಗಳಲ್ಲಿ ಕುಡಿಯುವ ನೀರಿನ ಬಾವಿಗಳಿಲ್ಲ. ನಾನು ನೋಡಿರುವ ಹಾಗೆ ಕೆಲವು ಹಳ್ಳಿಗಳಲ್ಲಿ ಕುಡಿಯುವ ನೀರಿನ ಸೌಲಭ್ಯವೇ ಇಲ್ಲ. ಅಂತಹ ಹಳ್ಳಿಗಳನ್ನು ನೋಡಿದ್ದು ನನ್ನ ಚುನಾವಣಾ ಪ್ರವಾಸದಲ್ಲಿ. ಈ ಹಳ್ಳಿಗಳ ಜನರು ಕೆರೆ ಮತ್ತು ಬಾವಿಗಳಿಂದ ನೀರನ್ನು ತೆಗೆದುಕೊಳ್ಳುತ್ತಿದ್ದಾರೆ. ನನ್ನ ಕಣ್ಣಿಂದಲೆ ಕಣ್ಣಾರೆ ನೋಡಿದ ಹಾಗೆ ಅವರು ಬದಿನೀರು ಮಣ್ಣು ಮಿಶ್ರಿತ ನೀರನ್ನು ಮತ್ತು ಕ್ರಿಮಿಕೀಟಗಳಿರುವ ನೀರನ್ನು ಕುಡಿಯುತ್ತಿದ್ದಾರೆ. ಹಾಗಾಗಿ ಇನ್ನೊಂದು ವರ್ಷದಲ್ಲಿ ಅವರಿಗೆ ವಸತಿ ಮತ್ತು ಇಂತಹ ಸಮಸ್ಯೆ ಇಲ್ಲದ ಹಾಗೆ ನೋಡಿಕೊಳ್ಳಲಾಗುವುದು.

ನನ್ನ ಸ್ನೇಹಿತರಾದ ಶ್ರೀ ಶಾಮಣ್ಣನವರು ಬೆಂಗಳೂರು ನಗರದಲ್ಲಿ ಸೊಳ್ಳೆಗಳ ಕಿರಿಕಿರಿಯ ಬಗ್ಗೆ ಮಾತನಾಡಿದ್ದಾರೆ. 1971–72ರಲ್ಲಿ ಬೆಂಗಳೂರು ನಗರದಲ್ಲಿ ಈ ಯೋಜನೆ ಜಾರಿಮಾಡಲು ರೂ.9.5 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಯೋಜನೆ ಜಾರಿ ಮಾಡಲು ಎಲ್ಲಾ ಪ್ರಯತ್ನ ಮಾಡಲಾಗಿದೆ. ಆದರೆ, ಸಮಸ್ಯೆಯೇ ಬೇರೆ. ನಾನು ಈ ಹಿಂದೆ ಹೇಳಿದಂತೆ ಈ ಯೋಜನೆಯನ್ನು ನೋಡಿಕೊಳ್ಳುತ್ತಿರುವ ಅಧಿಕಾರಿಗಳು ಅಷ್ಟೊಂದು ದಕ್ಷತೆಯನ್ನು ತೋರಿಸುತ್ತಿಲ್ಲ. ನಾನು ಈ ವಿಚಾರವನ್ನು ತುಂಬಾ ಜರೂರು ಎಂದು ಪರಿಗಣಿಸುತ್ತಿದ್ದೇನೆ. ಬೆಂಗಳೂರು ನಗರದ ನೀರು ಸರಬರಾಜು ಜೊತೆಗೆ ರಾಜ್ಯದ ಸಾಕಷ್ಟು ಹಳ್ಳಿಗಳಲ್ಲು ಈ ಸಮಸ್ಯೆಯಿದೆ. ಈ ವರ್ಷದ ಕೊನೆಗೆ ಎಲ್ಲವನ್ನು ಪರಿಹರಿಸಲಾಗುವುದು. ನಾನು ಪರಿಷತ್‌ನಲ್ಲಿ ಸಹ ಸದನದಲ್ಲಿಯೂ ಸಹ ಈ ಎಲ್ಲಾ ವಿಚಾರವನ್ನು ಮನೆ ಮಾಲೀಕರು ಮತ್ತು ಗುಡಿಸಲುಗಳಲ್ಲಿ ವಾಸಿಸುತ್ತಿರುವ ಜನರಿಗೂ ಸಹ ಈ ಸಮಸ್ಯೆಯ ಪರಿಹಾರವಾಗಿರುವುದು ಎಂದು ತಿಳಿಯುವಂತೆ ಹೇಳಿದ್ದೇನೆ.

ಕೊಳಚೆ ಪ್ರದೇಶಗಳ ನಿರ್ಮೂಲನೆ ಬಗ್ಗೆ ನಾನು ಈಗಾಗಲೆ ಎರಡು ಬಾರಿ ಸರ್ಕಾರದ ಗಮನ ಸೆಳೆದಿದ್ದೇನೆ. ಈ ಜಾಗವು ನಗರಪಾಲಿಕೆ ಮತ್ತು

ಸರ್ಕಾರಕ್ಕೆ ಸೇರಿದ ಆಸ್ತಿಯಾಗಿದೆ. ಈ ಸಮಸ್ಯೆಯನ್ನು ಈ ವರ್ಷದ ಕೊನೆಯ ಹೊತ್ತಿಗೆ ಪರಿಹರಿಸಲಾಗವುದು. ನಾವು ಈಗಾಗಲೇ ಸುಮಾರು 3000 30X40 ಅಳತೆಯ ನಿವೇಶನಗಳನ್ನು ಬಡಜನರಿಗೋಸ್ಕರ ಮೀಸಲಿಟ್ಟಿದ್ದೇವೆ. ಹಾಗಾಗಿ ಸರ್ಕಾರವು ಈ ಸಮಸ್ಯೆಯತ್ತ ಗಮನಹರಿಸಬೇಕು. ನಾನು ಹೇಳುವುದೇನೆಂದರೆ ಅವರನ್ನು ಭಾರತೀಯ ನಾಗರೀಕರಂತೆ ಪರಿಗಣಿಸಿ ಆದಷ್ಟು ಬೇಗ ಈ ಸಮಸ್ಯೆ ಬಗೆಹರಿಸಲು ಎಲ್ಲಾ ಪ್ರಯತ್ನವನ್ನು ಮಾಡಬೇಕು.

ಈ ಎಲ್ಲಾ ಕೊಳಗೇರಿಗಳ ಪ್ರದೇಶಗಳು ಕಾರ್ಪೊರೇಶನ್‌ಗೆ ಸೇರಿದಂತವುಗಳು ಸಮಸ್ಯೆಗಳನ್ನು ಸದನದ ಕೊನೆಯಲ್ಲಿ ಪರಿಹರಿಸಲಾಗುತ್ತದೆ. ಈಗಾಗಲೇ 3000 ಸಾವಿರ 30X40 ಅಳತೆ ನಿವೇಶನಗಳನ್ನು ಮೀಸಲಿಡಲಾಗಿದೆ. ಸರ್ಕಾರವು ಈ ಸಮಸ್ಯೆಯನ್ನು ಕಠಿಣವಾದ ಸಮಸ್ಯೆಯೆಂದು ಪರಿಗಣಿಸಿ ಶೀಘ್ರ ಕ್ರಮ ಕೈಗೊಳ್ಳಬೇಕು. ಈ ಸಮಸ್ಯೆಯನ್ನು ಅಂತರಾಳಕ್ಕೆ ತೆಗೆದುಕೊಳ್ಳಬೇಕು. ಏಕೆಂದರೆ ಅವರು ಸಹ ಭಾರತದ ನಾಗರೀಕರೆ ಆಗಿದ್ದಾರೆ.

ಶ್ರೀಮತಿ ಸಭಾಧ್ಯಕ್ಷರೇ ಸ್ವಾತಂತ್ರ್ಯ ಬಂದಾಗಿನಿಂದಲು ಸಹ ಇದು ದೇಶ ಎದುರಿಸುತ್ತಿರುವ ಭಯಾನಕ ಸಮಸ್ಯೆಯಾಗಿದೆ. ಈ ಜನರು ಸಾವಿರಾರು ವರ್ಷಗಳಿಂದಲೂ ವಸತಿ ರಹಿತವಾಗಿ ಬದುಕುತ್ತಿದ್ದಾರೆ. ಅವರಿಗೆ ವಸತಿ ಒದಗಿಸಬೇಕು ಅವರು ಸಮಾಜದ ಅತ್ಯಂತ ಕೆಳವರ್ಗದ ಜನರಾಗಿದ್ದಾರೆ. ನಾವು ಅವರಿಗೆ ಯಾವಾಗ ನಿವೇಶನವನ್ನು ಹಂಚುತ್ತೇವೆ. ನಾವು ,ಅವರು ವಾಸಿಸುವ ಸ್ಥಳವನ್ನು ಹರಿಜನರ ಕೇರಿಗಳು ಎಂದು ನಗರ ಮತ್ತು ಪಟ್ಟಣಗಳಿಂದ ಬೇರ್ಪಡಿಸಬಾರದು. ಕಳೆದ 25 ವರ್ಷಗಳಿಂದ ನಾನು ನೋಡುತ್ತಲೆ ಇದ್ದೇನೆ. ಹರಿಜನರ ಕೇರಿಗಳನ್ನು ನಗರ ಪಟ್ಟಣಗಳಿಂದ ಹೊರಗಿಟ್ಟಿದ್ದಾರೆ, ಅವರನ್ನು ಹೊಲೆಯ ಮತ್ತು ಮಾದಿಗರು ಎಂದು ಕರೆಯುತ್ತಾರೆ. ನಾನು ಅವರಿಗೆ ನಿವೇಶನ ಹಂಚುವುದನ್ನು ಮುಂದುವರಿಸಿದರೆ ಮತ್ತು ಸಮಾಜದ ಜನರ ಜೊತೆಗೆ ಬೆರೆಯುವಂತೆ ಮಾಡುವುದೆ ಒಳ್ಳೆಯ ಬೆಳವಣಿಗೆ.

ಬಾವಿಗಳ ವಿಚಾರಕ್ಕೆ ಸಂಬಂಧಿಸಿದಂತೆ ಎಲ್ಲಾ ಸಮುದಾಯದವರಿಗೂ ಉಪಯೋಗಕ್ಕೆ ಬರುತ್ತಿಲ್ಲಾ. ಹರಿಜನರ ಎಡಗೈ ಜನರು ಬಲಗೈ ಜನರಿಂದ ನೀರನ್ನು ತೆಗೆದುಕೊಳ್ಳಬೇಕು ಎಂದು ಹೇಳುತ್ತಿದ್ದಾರೆ. ನಾವು ನೋಡಿರುವ ಹಾಗೆ ಜಾತಿ ಪದ್ಧತಿಯೂ ಕೇವಲ ಪ.ಜಾತಿಯವರಲ್ಲಿ ಮಾತ್ರವಲ್ಲ ಇತರೇ

ಹಿಂದೂಗಳಲ್ಲಿಯೂ ಸಹ ಇದೆ. ನಾವು ಜಾತಿ ಪದ್ಧತಿಯನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡುವವರೆಗೆ ಎಡ ಬಲ ಮೇಲು ಕೀಳು ಎಂಬ ವಿಚಾರ ಹೋಗಬೇಕು ಮತ್ತು ಸಮಾನವಾಗಿ ಕಾಣುವ ಭಾವನೆ ಇರಬೇಕು ಒಕ್ಕಲಿಗರು, ಲಿಂಗಾಯಿತರು ಮತ್ತು ಬ್ರಾಹ್ಮಣರು ಸಹ ಸಮಾಜದ ಭಾಗ ಎಂದು ತಿಳಿಯಬೇಕು. ಮತ್ತು ಅವರಿಗೆ ಬಾವಿಯಲ್ಲಿ ನೀರು ತೆಗೆದುಕೊಳ್ಳಲು ಸಹಕರಿಸಬೇಕು ಆ ಮೂಲಕ ಜಾತಿ ಪದ್ಧತಿಯನ್ನು ನಿರ್ಮೂಲನೆ ಮಾಡಬೇಕು ಇದನ್ನು ಸುಮ್ಮನೆ ಮಾತಾನಾಡುವುದಕ್ಕಿಂತ ಆಚರಣೆಗೆ ತರಬೇಕು. ಇಲ್ಲವಾದರೆ ಒಂದು ಬಾವಿಯನ್ನು (ಲಿಂಗಾಯಿತರಿಗೂ) ಎಡಗೈನವರಿಗೆ, ಮತ್ತೊಂದು ಬಲಗೈನವರಿಗೆ ಮಗದೊಂದನ್ನು ಲಿಂಗಾಯಿತರಿಗೆ, ಬ್ರಾಹ್ಮಣರಿಗೆ, ಹೀಗೆ ಸಾಮಾಜಿಕ ಪದ್ಧತಿಗೆ ಒಳಗಾಗಬೇಕಾಗುತ್ತದೆ.

**ಶ್ರೀ ಎಂ.ಎಸ್. ಕೃಷ್ಣನ್:–** ನಿಮ್ಮ ಪಾರ್ಟಿಯವರು ಹೇಳುವುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆಯೇ?

**ಶ್ರೀ ಬಿ. ಬಸವಲಿಂಗಪ್ಪ:–** ಎಲ್ಲರು ಒಪ್ಪಲೇಬೇಕು, ನಾನು ನನ್ನ ಮಾತನ್ನು ಮುಗಿಸುವ ಮುನ್ನ ಇನ್ನೊಂದು ವಿಚಾರ ಹೇಳಲು ಇಚ್ಛಿಸುತ್ತೇನೆ. ಬೆಂಗಳೂರು ನಗರಪಾಲಿಕೆಯ ಉಲ್ಲೇಖವನ್ನು ಕೊಡಬಯಸುತ್ತೇನೆ. ನಾವು ಗುಪ್ತಚಾರ ವರದಿಯನ್ನು ಪಡೆದಿರುತ್ತೇವೆ. ಶ್ರೀಯುತ ನಾಗಣ್ಣನವರು ಈ ಸಮಸ್ಯೆಯನ್ನು ಮತ್ತು ಅಲ್ಲಿನ ನಗರಪಾಲಿಕೆಯ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಹೇಳಿದ್ದಾರೆ. ಮತ್ತು ನಾವು ಅದನ್ನು ಪರೀಕ್ಷಿಸಿದ್ದೇವೆ, ಎಲ್ಲ ಭ್ರಷ್ಟಚಾರವಿದೆ, ಎಲ್ಲ ವಿನಯತೆ ಇರುವುದಿಲ್ಲ, ಎಲ್ಲಿ ತಪ್ಪು ನಡೆದಿದೆ, ಎಲ್ಲವನ್ನು ಗಮನಿಸಿದ್ದೇವೆ. ಅವರನ್ನು ಶಿಕ್ಷಿಸುವ/ಹೊಗಳುವ ಕೊನೆಯ ವ್ಯಕ್ತಿಗಳು ನಾವೇ ಆಗಿದ್ದೇವೆ. ಆದರೆ ಸರಿಯಾದ ಕಾನೂನನ್ನು ಕೈಗೆತ್ತಿಕೊಂಡರೆ ಅವರುಗಳು ಸೇವೆಯಲ್ಲಿರಬೇಕು ಅಥವಾ ಸೇವೆಯಿಂದ ಅಮಾನತ್ತಾಗಬೇಕು ಹೊರಹೋಗಬೇಕು.

**ಶ್ರೀ ಎಂ.ಎಸ್. ಕೃಷ್ಣನ್:–** ಬೆಂಗಳೂರು ನಗರದಲ್ಲಿ ಇತ್ತೀಚೆಗೆ ಜಾಸ್ತಿಯಾಗಿರುವ ಮನೆಗಂದಾಯವನ್ನು ಕಾನೂನು ರೀತ್ಯಾ ಪುನಃ ಪರಿಶೀಲನೆ ಮಾಡಿ ರಿಪೋರ್ಟ್ ಕೊಡುತ್ತೇವೆಂದು ಹೇಳಿದಿರಿ. ಪುನರ್ ಪರಿಶೀಲನೆ ಮಾಡುವವರೆಗೂ ಹೊಸ ಕಂದಾಯದ ಬದಲು ಹಳೆಯ ಕಂದಾಯವನ್ನೇ ವಸೂಲಿ ಮಾಡುವಂತೆ ಅಧಿಕಾರಿಗಳಿಗೆ ಆದೇಶ ಕೊಡುತ್ತೀರಾ? ಇಲ್ಲದಿದ್ದರೆ ಅಧಿಕಾರಿಗಳು ಹೆರಾಸ್ ಮಾಡುತ್ತಾರೆ.

**ಶ್ರೀ ಬಿ. ಬಸವಲಿಂಗಪ್ಪ:**- ಮೇಡಂ, ಎರಡು ರೀತಿಯಾದ ತೆರಿಗೆ ಪದ್ಧತಿಗಳಿವೆ, ಒಂದು ಮಾಲೀಕರು ವಾಸವಿರುವ ಮನೆಗಳ ಮೇಲೆ ತೆರಿಗೆ ಹಾಕುವುದು ಮತ್ತು ಇನ್ನೊಂದು ಬಾಡಿಗೆ ಮನೆಗಳ ಮೇಲೆ ಹಾಕುವ ತೆರಿಗೆ, ಇದರಲ್ಲಿ ಯಾವುದೇ ಸಂಶಯವಿಲ್ಲ ಮತ್ತು ಸಮಸ್ಯೆಯೂ ಇಲ್ಲ. ಮಾಲೀಕರು ವಾಸವಿರುವ ಮತ್ತು ಬಡವರು ವಾಸಿಸುವ ಮನೆಗಳನ್ನು ಪರಿಗಣಿಸಿದಾಗ ನಾವು ಅವರನ್ನು ಹಿಂಸಿಸಲು ಹೋಗಿಲ್ಲ.

**ಶ್ರೀ ಕೆ. ಪ್ರಭಾಕರ್:**- ಮಾನ್ಯ ಬಂಗಾರಪ್ಪನವರು ಮಾನ್ಯ ಮಂತ್ರಿಗಳ ವಿಷಯದಲ್ಲಿ ಕೆಲವು ವಿಷಯ ಪ್ರಸ್ತಾಪ ಮಾಡಿದರು. ಮಂತ್ರಿಗಳು ಸಭೆಯಲ್ಲಿ ಇಲ್ಲದಿದ್ದಾಗ ಅವರು ಪ್ರಸ್ತಾಪ ಮಾಡ್ಡಿದರು. ಅವರು ಇಲ್ಲದಿದ್ದಾಗ ಅದನ್ನು ಪ್ರಸ್ತಾಪ ಮಾಡಬಾರದು, ಅವರು ಡಿಫೆಂಡ್ ಮಾಡಿಕೊಳ್ಳುವುದಕ್ಕಾಗುವುದಿಲ್ಲವೆಂದು ಹೇಳಬೇಕೆಂದು, ನನ್ನ ಮನಸಿನಲ್ಲಿ ಇತ್ತು. ಆದರೆ ನಾನು ಮಾತನಾಡಲಿಲ್ಲ. ಅವರ ಭಾಷಣವನ್ನು ಮಾನ್ಯ ಮಂತ್ರಿಗಳು ಓದಿ ತಿಳಿದುಕೊಂಡು ಅದರ ಬಗ್ಗೆ ಉತ್ತರ ಕೊಡುತ್ತಾರೆಂದು ನಾನು ತಿಳಿದುಕೊಂಡಿದ್ದೆ. ಆದರೆ ಉತ್ತರ ಕೊಡಲಿಲ್ಲ. ಎರಡನೆಯದಾಗಿ ಮಾನ್ಯ ಮಂತ್ರಿಗಳು ಉತ್ತರ ಕೊಡುವಾಗ ನಾನು ಹಾಗೆ ಮಾಡುತ್ತೇನೆ. ಹೀಗೆ ಮಾಡುತ್ತೇನೆ ಎಂದು ಹೇಳಿದರು. ಸರ್ಕಾರ ಹಾಗೆ ಮಾಡುತ್ತದೆ. ಸರ್ಕಾರ ಹೀಗೆ ಮಾಡುತ್ತದೆ ಎಂದು ಹೇಳಬೇಕಾಗಿತ್ತು. ಇಲ್ಲದಿದ್ದರೆ ಒಬ್ಬರೇ ಹೇಗೆ ಮಾಡುತ್ತಾರೆಂಬ ಶಂಕೆ ಬರುತ್ತದೆ. ಮೂರನೆಯದಾಗಿ ಒಬ್ಬ ಆಫೀಸ್‌ರಿಗೆ ಖರ್ಚು ಮಾಡಲು ಒಂದು ಲಕ್ಷ ರೂಪಾಯಿ ಕೊಡಲಾಗಿತ್ತು; ಆದರೆ ಆತ ಖರ್ಚು ಮಾಡಲಿಲ್ಲವೆಂದು ಹೇಳಿದರು. ಯಾವ ಕಾರಣಕ್ಕಾಗಿ ಖರ್ಚು ಮಾಡಲಿಲ್ಲವೆಂದು ಹೇಳಲಿಲ್ಲ, ಮತ್ತು ಅಧಿಕಾರಿಗಳ ಬಗ್ಗೆ ಏಕವಚನವನ್ನು ಉಪಯೋಗಿಸಬಹುದೇ ಎಂಬ ಬಗ್ಗೆ ಉತ್ತರ ಕೊಡಬೇಕು. ನನ್ನ ಈ ಮೂರು ಪ್ರಶ್ನೆಗಳಿಗೂ ಉತ್ತರ ಕೊಡಬೇಕು.

**ಶ್ರೀ ಬಿ. ಬಸವಲಿಂಗಪ್ಪ:**- ಇದು ಸರ್ಕಾರದ ಅಭಿಪ್ರಾಯವೇ ಹೊರತು ನನ್ನ ಸ್ವಂತ ಅಭಿಪ್ರಾಯವಲ್ಲ.

**ಶ್ರೀ ಎಸ್. ಬಂಗಾರಪ್ಪ:**- ಮಾನ್ಯ ಮಂತ್ರಿಗಳು ಒಂದು ಕಡೆ ಮಾತನಾಡುತ್ತಾ ದೊಡ್ಡ ನೀರಾವರಿ ಯೋಜನೆಗಳಿಗೆ ಇಟ್ಟಿರುವ ಹಣವನ್ನು ಕಟ್ ಮಾಡಿ ಅದೇ ಹಣವನ್ನು ಮನೆಗಳನ್ನು ಕಟ್ಟಲು ಉಪಯೋಗ ಮಾಡಬೇಕೆಂದು

ಹೇಳಿದ್ದು ಪತ್ರಿಕೆಗಳಲ್ಲಿ ಬಂದಿತ್ತು. ಅದನ್ನು ನಾನು ಓದಿದೆ. ಅದು ಮಾನ್ಯ ಮಂತ್ರಿಗಳ ವೈಯಕ್ತಿಕ ಅಭಿಪ್ರಾಯವೋ ಅಥವಾ ಸರ್ಕಾರದ ಅಭಿಪ್ರಾಯವೋ ಎಂಬುದನ್ನು ತಿಳಿಸಬೇಕು. ಎರಡನೆಯದು ನಿಮ್ಮ ಮೇಲೆ ನಾನು ಮಾಡಿರುವ ಆಪಾದನೆ ಏನಿದೆ?

ಶ್ರೀ ಬಿ. ಬಸವಲಿಂಗಪ್ಪ:- ನಾವು ಹಿಂದಿನ ಸರ್ಕಾರದ ವಿರುದ್ಧ ಹೋರಾಡಲು ಪ್ರಾರಂಭಿಸಿದಾಗ, ಸರ್ಕಾರವು ಬಾರಿ ಬಾರಿ ನೀರಾವರಿ ಯೋಜನೆಗಳನ್ನು ಕೈಗೊಳ್ಳುತ್ತಿದೆ ಆದರೆ ಜನರ ಸಾಮಾಜಿಕ ಸಮಸ್ಯೆಗೆ ಸ್ಪಂದಿಸುತ್ತಿಲ್ಲ. ಆದುದರಿಂದಲೇ ಇಂದಿನ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡಿದ್ದು. ಇಂದಿಗೂ ನಾವು ನಮ್ಮ ಹೆಚ್ಚಿನ ಕಂದಾಯ ಆದಾಯವನ್ನು ನೀರಾವರಿಗೆ ಖರ್ಚು ಮಾಡುತ್ತಿದ್ದು ನಿರೀಕ್ಷಿಸಿದಷ್ಟು ಆದಾಯ ಬರುತ್ತಿಲ್ಲ. ಆದುದರಿಂದ ಇಲ್ಲಿಗೆ ವಿನಿಯೋಗಿಸುವ ಹಣವನ್ನು ಸ್ವಲ್ಪವಾದರು ಸಮಾಜ ಕಲ್ಯಾಣದ ಚಟುವಟಿಕೆಗಳಿಗೆ ಉಪಯೋಗಿಸಿದರೆ ಉತ್ತಮ ಎಂಬುದು ನನ್ನ ಸಲಹೆ. ಇದನ್ನು ಸರ್ಕಾರವು ಚಿಂತಿಸಬೇಕು. ಇದು ನನ್ನ ತೀರ ವೈಯಕ್ತಿಕ ಅಭಿಪ್ರಾಯವಾಗಿದ್ದು, ನಾನು ಸರ್ಕಾರದ ಗಮನಕ್ಕೆ ಈ ವಿಷಯ ತರುತ್ತಿದ್ದೇನೆ.

## ಪರಿಶಿಷ್ಟ ಜಾತಿಗೆ ಇತರೆ ಜಾತಿಯವರನ್ನು ಸೇರಿಸಿರುವುದನ್ನು ವಿರೋಧಿಸಿ (10ನೇ ಜುಲೈ 1980)

ಶ್ರೀ ಬಿ. ಬಸವಲಿಂಗಪ್ಪ:- ಮಾನ್ಯ ಅಧ್ಯಕ್ಷರೇ ಅದಕೋಸ್ಕರವಾಗಿಯೇ ನಾನು ಕೇಳಿದೆ. ಈ ಷೆಡ್ಯೂಲ್ಡ್ ಕ್ಯಾಸ್ಟ್‌ನಲ್ಲಿ ಯಾವ ಯಾವ ಜಾತಿ ಜನ ಸೇರಿದ್ದಾರೆ ಎನ್ನುವುದರ ಬಗ್ಗೆ ಒಂದು ಪಟ್ಟಿಯನ್ನು ಮಾಡಿದ್ದಾರೆ. ಪುನಃ ಯಾರನ್ನಾದರೂ ಕೂಡ ಈ ಪಟ್ಟಿಯಲ್ಲಿ ಸೇರಿಸಬೇಕಾದರೆ ಕಾನ್‌ಸ್ಟಿಟ್ಯೂಷನ್ಸ್‌ನ ಕಲಂ 341ರ ಪ್ರಕಾರ ಪಾರ್ಲಿಮೆಂಟ್‌ಗೆ ಅಧಿಕಾರ ಉಂಟು. ಅದಕ್ಕೆ ಅವರು ತಿದ್ದುಪಡಿ ಮಾಡಬೇಕಾಗುತ್ತದೆ ಅವರು ಅದನ್ನು ತಿದ್ದುಪಡಿ ಮಾಡದ ಹೊರತು ನಾವು ಏನೂ ಮಾಡುವುದಕ್ಕಾಗುವುದಿಲ್ಲ, ಆ ಕಾನ್‌ಸ್ಟಿಟ್ಯೂಷನ್‌ನ ಪ್ರಕಾರ ಈ ರೀತಿ ಇದೆ, ಅದನ್ನು ತಮ್ಮ ಮುಂದೆ ಓದುತ್ತೇನೆ. ಈ ರೀತಿ ಇದೆ.

"341 (1)" ರಾಷ್ಟ್ರ ಅಧ್ಯಕ್ಷರು ಯಾವುದೇ ರಾಜ್ಯ/ಕೇಂದ್ರಾಡಳಿತ ಪ್ರಜೆಗಳ ಗೌರವಿಸುವವರು ಮತ್ತು ರಾಜ್ಯವು ರಾಜ್ಯ ಪಾಲರನ್ನು ಸಂಪರ್ಕಿಸಿದ

ನಂತರ ಯಾವುದೇ ಜಾತಿ, ಜನಾಂಗ, ಬುಡಕಟ್ಟುಗಳನ್ನು ಗುಂಪುಗಳನ್ನಾಗಿಸಿ ಪರಿಶಿಷ್ಟರ ಕಲ್ಯಾಣದ ಬಗ್ಗೆ ಸಂವಿಧಾನದ ಹಕ್ಕುಗಳ ಬಗ್ಗೆ ಸೂಚಿಸಬಹುದು

(2) ಸಂಸತ್ತು ಪರಿಶಿಷ್ಟರ ಪಟ್ಟಿಗೆ ಸೇರಿಸುವ ಅಥವಾ ತೆಗೆಯುವ ಅಧಿಕಾರವನ್ನು ಹೊಂದಿರುತ್ತದೆ. ಯಾವುದೇ ಜಾತಿ, ಜನಾಂಗ, ಬುಡಕಟ್ಟುಗಳನ್ನು ಸೇರಿಸಲು ಸಂಸತ್ತು ಒಟ್ಟಿಗೆ ಬೇಕು. ಅಂತ ಇದೆ.

1950ನೇ ಇಸವಿಯಲ್ಲೇ ಕಾನ್‌ಸ್ಟಿಟ್ಯೂಷನ್ ಪ್ರಕಾರವಾಗಿ ಸುಪ್ರೀಂಕೋರ್ಟ್‌ನವರು ಆರ್ಡರ್ ಮಾಡಿದ್ದಾರೆ. ಅದರ ಬಗ್ಗೆ ಒಂದು ನೋಟಿಫಿಕೇಷನ್ ಕೂಡ ಹೊರಡಿಸಿದ್ದಾರೆ ಆ ನೋಟಿಫಿಕೇಷನ್ ಅನ್ನು ಬದಲಾವಣೆ ಮಾಡಬೇಕಾದರೆ 341 (2)ನೇ ಕಲಂ ಪ್ರಕಾರ ಅಧಿಕಾರ ಪಾರ್ಲಿಮೆಂಟಿಗೆ ಉಂಟು. ಈ ಒಂದು ಅಧಿಕಾರ ಯಾವ ಅಧಿಕಾರಿಗಳಿಗಾಗಲಿ ಯಾವ ರಾಜ್ಯಕ್ಕಾಗಲಿ, ಕೇಂದ್ರ ಸರ್ಕಾರಕ್ಕಾಗಲಿ ಅಧಿಕಾರ ಇಲ್ಲ. ಆದರೆ ಒಂದು ಪ್ರಶ್ನೆ ಏನೆಂದರೆ ನಾವು ಸರ್ಕಾರ ನಡೆಸುವಾಗಲೂ ಕೂಡ ಇದು ಬಂತು. ಆವಾಗ ನಾವು ನೋಡಿ ಈ ಬಗ್ಗೆ ಸರ್ಕಾರಕ್ಕೆ ಅಧಿಕಾರ ಇಲ್ಲ ಎಂದು ಅದನ್ನು ತಿರಸ್ಕರಿಸಿದೆವು. ಈಗ ಮತ್ತೆ ಅದನ್ನೇ ಪುನಃ ತಿರುಗಿ ನಿಮ್ಮ ಸರ್ಕಾರ ಬಂದ ಮೇಲೆ ತಂದಿದ್ದೀರಿ. ಆದುದರಿಂದ ಇದನ್ನು ಸೇರಿಸತಕ್ಕಂಥಾದ್ದರ ಬಗ್ಗೆ ನಿಮಗೆ ಅಧಿಕಾರ ಇಲ್ಲ, ಕಾನ್‌ಸ್ಟಿಟ್ಯೂಷನ್‌ಗೆ ವಿರೋಧವಾಗಿದೆ, ನಿಮಗೂ ಅಧಿಕಾರ ಇಲ್ಲ, ಕೇಂದ್ರ ಸರ್ಕಾರಕ್ಕೂ ಅಧಿಕಾರ ಇಲ್ಲ, ಇದನ್ನು ಪಾರ್ಲಿಮೆಂಟ್ ಮಾಡಿದರೆ ಮಾತ್ರ ಆಗುತ್ತದೆ; ಆವಾಗ ನಮಗೆ ಅಧಿಕಾರ ಬರುತ್ತದೆ. ಕೇಂದ್ರ ಸರ್ಕಾರವು ಈ ಬಗ್ಗೆ ಕಾಗದ ಬರೆದರೂ ಕೂಡ ನಾವು ಈ ಬಗ್ಗೆ ಒಂದು ಕಾಗದವನ್ನು ಹೊರಡಿಸಿದರೂ ಕೂಡ ನಮಗೆ ಇದರಿಂದ ಅಧಿಕಾರ ಬರುವುದಿಲ್ಲ, ಅದಕ್ಕೋಸ್ಕರವಾಗಿ ನಾನು ಹೇಳುವುದು ಇದು ರಾಜ್ಯಾಂಗಕ್ಕೆ ವಿರೋಧವಾಗಿದೆ ದಯಮಾಡಿ ಪುನಃ ಯಾವ ಜಾತಿಗಳನ್ನೂ ಇದಕ್ಕೆ ಸೇರಿಸಿದಿರಿ, ಅದನ್ನು ವಾಪಸ್ಸು ತೆಗೆದುಕೊಳ್ಳಬೇಕು ಎಂದು ಹೇಳುತ್ತೇನೆ. ಇಲ್ಲದೇ ಹೋದರೆ, ಕೇಂದ್ರದ ಕಾನೂನು ಮಂತ್ರಿಗಳು ಈವಾಗ ಅವರನ್ನು ಇದರ ಬಗ್ಗೆ ಕ್ಲಾರಿಫಿಕೇಷನ್ ಕೇಳಿದ್ದಾರೋ ಇಲ್ಲವೋ ನನಗೆ ಗೊತ್ತಿಲ್ಲ, ಅಥವಾ ಅವರು ಈ ಬಗ್ಗೆ ಏನನ್ನೂ ಕಳುಹಿಸದೇ ಇದ್ದರೂ ಕೂಡ ಇವರು ಮಾಡಿದ್ದಾರೋ ಏನೋ ಅದೂ ಗೊತ್ತಿಲ್ಲ. ಸರ್ಕಾರದಲ್ಲಿರುವ ಯಂತ್ರ ಯಾವರೀತಿಯಾಗಿ ನಡೆಯುತ್ತದೆ ಎನ್ನುವುದು ತಮಗೂ ಗೊತ್ತು ನನಗೂ ಬಹಳ ದಿವಸದಿಂದಲೂ ಗೊತ್ತು.

ಕೆಲವು ಸಂದರ್ಭದಲ್ಲಿ ಕಾನೂನು ಇಲಾಖೆಗೆ ಕಳುಹಿಸದೇ ಮಾಡುವುದೂ ಉಂಟು.

**Sri Y. Ramakrishna:-** I dont want to enter into argument. ಪಾರ್ಲಿಮೆಂಟ್‌ಗೆ ಇದರ ಬಗ್ಗೆ ಅಧಿಕಾರ ಇದೆ ಅನ್ನುವ ಸುದ್ದಿ ಬೇರೆಯಾಯಿತು. ತಾವು ಸರ್ಕಾರದಲ್ಲಿದ್ದಾಗ ಇದನ್ನು ಕಳುಹಿಸಿಕೊಟ್ಟಿತ್ತು ನಮ್ಮ ಸರ್ಕಾರ ಮಾಡಲಿಲ್ಲ ಎಂದು ಹೇಳುತ್ತೀರಿ. ತಾವು ಮಾಡಿದ ತಪ್ಪನ್ನು ಇತ್ತ ಕಡೆ ತೋರಿಸುತ್ತೀರಲ್ಲಾ ಇದಕ್ಕೇ ಏನು ಹೇಳಬೇಕೋ ಗೊತ್ತಿಲ್ಲ. ಆವಾಗ ನೀವು ಸರ್ಕಾರದಲ್ಲಿದ್ದಾಗ ಈ ಬಗ್ಗೆ ಲಾ ಡಿಪಾರ್ಟ್‌ಮೆಂಟಿನವರನ್ನು ಕೇಳಲಿಲ್ಲವೇ? Whether this state is competent to include name? ಅಂತ ಕೇಳಲಿಲ್ಲವೇ? ಇದರಲ್ಲಿ ಯಾವುದು Synonumous name ಇದೆ ಅನ್ನುವುದರ ಬಗ್ಗೆ ಏನಾದರೂ ಕ್ಲಾರಿಫಿಕೇಷನ್ ಕೊಟ್ಟಿದ್ದೀರಾ? ಈ ಪಾಯಿಂಟ್ ಅನ್ನು ಕೇಳಿದ್ದೀರೋ ಇಲ್ಲವೋ ಗೊತ್ತಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:-** ನಾನು ಷೆಡ್ಯೂಲ್ಡ್ ಕ್ಯಾಸ್ಟ್ ಲಿಸ್ಟ್ ವಿಚಾರದ ಬಗ್ಗೆ ಮಾತನಾಡಿದರೆ ನೀವು ಅದಕ್ಕೆ ಮಾತನಾಡುತ್ತನೇ ಇಲ್ಲ. ಬೇರೆ ಯಾವುದೋ ವಿಚಾರ ಹೇಳುತ್ತೀರಿ. ತಾವು ಇದನ್ನು ಹಿಂದಿನ ಸರ್ಕಾರದವರು ಮಾಡಿದರು ಎಂದು ಹೇಳುತ್ತೀರಾ? ಹಿಂದಿನ ಸರ್ಕಾರದಲ್ಲಿ ನಾನು ಇದ್ದಾಗ ಇಂತಹ ವಿಷಯಗಳು ಹಲವಾರು ಸಾರಿ ಬಂತು. ಕ್ಯಾಬಿನೆಟ್ ಮುಂದೆಯೂ ಬಂತು. ನಾವು ಅದನ್ನು ಆಗುವುದಿಲ್ಲ ಎಂದು ತಿರಸ್ಕಾರ ಮಾಡಿದ್ದೇವೆ. ಈಗ ಕೆಲವು ಹಿಂದುಳಿದ ವರ್ಗಗಳ ಜಾತಿಗಳ ಏನು ಇದ್ದಾವೆ ಆ ಜಾತಿಗಳಿಗೆ ವಿದ್ಯಾ ಇಲಾಖೆಯಲ್ಲಿ, ಸಮಾಜ ಕಲ್ಯಾಣ ಇಲಾಖೆಯಲ್ಲಿ ಏನೇನು ಸವಲತ್ತುಗಳು ಇರಬೇಕೋ ಅವರ ಒಂದು ಆರ್ಥಿಕ ಮಟ್ಟಕ್ಕನುಗುಣವಾಗಿ ಇರಬೇಕೆಂಬ ದೃಷ್ಟಿಯಿಂದ ಅಂತವರಿಗೆ ಸಹಾಯ ಮಾಡಿ ಅಂತ ಹೇಳಿದ್ದೇವೆ. 1950ನೇ ಇಸವಿಯ ಕಾನ್‌ಸ್ಟಿಟ್ಯೂಷನ್ ಪ್ರಕಾರ ಷೆಡ್ಯೂಲ್ಡ್ ಕ್ಯಾಸ್ಟ್ ಪಟ್ಟಿಯಲ್ಲಿ ಯಾವ ಯಾವ ಜಾತಿಗಳು ಇದ್ದಾವೆ ಅನ್ನುವುದನ್ನು ನಾನು ಓದಿದ್ದೇನೆ. ತಮಗೂ ಗೊತ್ತಿರುವುದು. ಆ ಪ್ರಕಾರವಾಗಿ ಇದನ್ನು ಬದಲಾವಣೆ ಮಾಡುವುದಕ್ಕೆ ಏನಾದರೂ ಅವಕಾಶ ಇದೆಯೇ ಹೇಳಿ.

**ಶ್ರೀ ವೈ. ರಾಮಕೃಷ್ಣ:-** ಇದು ಕೇಂದ್ರ ಸರ್ಕಾರದವರು ತಂದದ್ದು. ತಾವು ಹೀಗೆ ಮಾಡಿದ್ದೇವೆ ಅಂತ ಹೇಳುವುದಕ್ಕೆ ಯಾವ ಆರ್ಡರನ್ನು ಇಷ್ಯೂ ಮಾಡಿದ್ದೀರಿ ಅಂತ ಹೇಳಿ.

**ಶ್ರೀ ಅಜೀಜ್ ಸೇಟ್:-** ಸ್ವಾಮಿ, ಇದನ್ನು ನಮ್ಮ ಸರ್ಕಾರ ಮಾಡಿದ್ದು ಎಂದು ಮಾನ್ಯ ರಾಮಕೃಷ್ಣ ಅವರು ಹೇಳಿದರು....

**ಶ್ರೀ ಐ.ಪಿ.ಡಿ. ಸಾಲಪ್ಪ:-** ಸ್ವಾಮಿ, ಮಾನ್ಯ ಸದಸ್ಯರು ಬೇರೆ ಸೀಟಿನಲ್ಲಿ ಇದ್ದುಕೊಂಡು ಮಾತನಾಡಬಹುದೇ?

**Sri Azeez Sait:-** Sir, there is a ruling on this, I want to bring to the notice of this House the ruling given by Late Sri Baliga....

ಚೇರ್‌ಮನ್. ತಾವು ಏನಾದರು ಹೇಳುವುದಿದ್ದರೆ ತಮ್ಮ ಸೀಟಿಗೆ ಹೋಗಿ ಹೇಳಿ.

**ಶ್ರೀ ಅಜೀಜ್ ಸೇಟ್:-** ಆಗಬಹುದು. ನನ್ನ ಸೀಟಿಗೆ ಹೋಗಿ ಮಾತನಾಡುತ್ತೇನೆ. ಈಗ ಮಾನ್ಯ ಮಂತ್ರಿಗಳಾದ ಶ್ರೀ ರಾಮಕೃಷ್ಣ ಅವರು ಹೇಳಿದ ಮಾತನ್ನು ಕೇಳಿ ನಮಗೆ ದುಃಖವಾಗುತ್ತಿದೆ. ಏಕೆಂದರೆ, ಇದನ್ನು ಇವರು ಮಾಡಿ ನಮ್ಮ ಮೇಲೆ ಹಾಕುತ್ತಿದ್ದಾರೆ. ತುಪ್ಪ ತಿಂದವರು ಇವರು ಹೆಸರು ಇಡುತ್ತಿರುವುದು ಬೇರೆಯವರ ಮೇಲೆ. ಈ ಸರ್ಕಾರದ ಆಜ್ಞೆ ಹೊರಟಿರುವುದು ತಾ॥ 27-3-1980ರಲ್ಲಿ. ಅಂದರೆ ಇವರ ಕಾಲದಲ್ಲಿಯೇ ಇದು ಆಗಿರುವುದು. ಅದಕ್ಕಾಗಿಯೇ ಮಾನ್ಯ ಬಸವಲಿಂಗಪ್ಪನವರು ಮಾನ್ಯ ರಾಮಕೃಷ್ಣ ಅವರಿಗೆ ಕೇಳಿದ್ದು. ನೀವು ಷೆಡ್ಯೂಲ್ಡ್ ಕ್ಯಾಸ್ಟ್ ಹೌದೋ ಅಥವಾ ಅಲ್ಲವೋ ಎಂದು?

**ಶ್ರೀ ಎಸ್.ಆರ್. ಬೊಮ್ಮಾಯಿ:-** ಈಗ ಕಾಂಟ್ರವರ್ಸಿ ನಡೆದಿದೆ. ಆದಕಾರಣ ಶ್ರೀ ದೇವರಾಜ ಅರಸ್ ಅವರ ಸರ್ಕಾರವಿದ್ದಾಗ ಹರಿಜನ ಮತ್ತು ಗಿರಿಜನರ ಪಟ್ಟಿಯಲ್ಲಿ ಯಾವ ಯಾವ ಜಾತಿಗಳನ್ನು ಸೇರಿಸಲು ರೆಕಮೆಂಡ್ ಮಾಡಿದ್ದರು ಮತ್ತು ಈಗಿನ ಸರ್ಕಾರದವರು ಯಾವ ಯಾವ ಜಾತಿಗಳನ್ನು ಸೇರಿಸಲು ಕೇಂದ್ರ ಸರ್ಕಾರಕ್ಕೆ ರೆಕ್‌ಮೆಂಡ್ ಮಾಡಿದ್ದಾರೆ ಎಂಬುದನ್ನು ಮಾನ್ಯ ಮಂತ್ರಿಗಳು ತಿಳಿಸಬೇಕು.

**ಅಧ್ಯಕ್ಷರು:-** ಯಾರೇ ಮಾಡಿರಲಿ, ಅದು ತಪ್ಪಾಗಿದ್ದರೆ ತಪ್ಪೇ.

**ಶ್ರೀ ಐ.ಪಿ.ಡಿ. ಸಾಲಪ್ಪ:–** ಕೆಲವು ಜಾತಿಯ ಜನರು ತಾವು ಹರಿಜನರೆಂದು ಹೇಳಿಕೊಳ್ಳುವುದಕ್ಕೆ ನಾಚಿಕೆ ಪಡುತ್ತಾರೆ. ಅಂತಹ ಜಾತಿಯವರನ್ನೆಲ್ಲಾ ಆ ಲಿಸ್ಟ್‌ನಲ್ಲಿ ಏತಕ್ಕೆ ಸೇರಿಸಬೇಕಾಗಿತ್ತು?

**ಶ್ರೀ ಬಿ. ಬಸವಲಿಂಗಪ್ಪ:–** ನಾನು ಏನಾದರೂ ಕೇಳಿದರೆ ಸಾಕು, ಮಾನ್ಯ ರಾಮಕೃಷ್ಣ ಅವರು ಚಟ್ಟನೆ ಎದ್ದು ನಿಲ್ಲುತ್ತಾರೆ. ಏತಕ್ಕೆ? ಇದು ಸರಿಯೇ?

**ಅಧ್ಯಕ್ಷರು:–** ನೀವೇ ಆಗಲೀ, ಅವರೇ ಆಗಲೀ, ಎಲ್ಲರೂ ಸಂಸದೀಯ ಸಂಪ್ರದಾಯವನ್ನು ಪಾಲನೆ ಮಾಡಬೇಕು.

**ಶ್ರೀ ಬಿ. ಬಸವಲಿಂಗಪ್ಪ:–** ಸ್ವಾಮಿ, ಕರ್ನಾಟಕ ಸರ್ಕಾರದವರು ಈ ವಿಚಾರದಲ್ಲಿ ತಾ# 27–3–1980 ರಂದು ಆಜ್ಞೆಯನ್ನು ಹೊರಡಿಸಿದ್ದಾರೆ. ಇದರ ಪ್ರಿಯಾಂಬಲ್‌ನಲ್ಲಿ ಏನು ಹೇಳಿದ್ದಾರೆ, ಅದು ಬಹಳ ಮುಖ್ಯವಾದುದು.

ಕರ್ನಾಟಕದ ಕೆಲವು ಗುಂಪುಗಳಿಗೆ ಸೇರಿದ ಸದಸ್ಯರುಗಳು ಅನು 341 ಮತ್ತು 342 ರ ಪ್ರಕಾರ ಪರಿಶಿಷ್ಟರ ಪಟ್ಟಿಗೆ ಸೇರಿಸುವಂತೆ ಕೇಳಿದ್ದರೆ, ಆದರೆ ಕರ್ನಾಟಕ ಸರ್ಕಾರವು ಕೇಂದ್ರ ಸರ್ಕಾರವನ್ನೂ ಕೇಳಬೇಕು ಆಗ ಭಾರತ ಸರ್ಕಾರವು ಈ ತೀರ್ಮಾನವನ್ನು ಕೈಗೊಳ್ಳತ್ತದೆ, ಮತ್ತು ರಾಷ್ಟ್ರಪತಿಗಳಿಂದ ಆದೇಶ ಜಾರಿಯಾಗುತ್ತದೆ.

ಈ ರೀತಿ ಸರ್ಕಾರದ ಹುಕುಂ ಏನು ಮಾಡಿದ್ದಾರೆ, ಇದು ನಮ್ಮ ರಾಜ್ಯಾಂಗಕ್ಕೆ ವಿರುದ್ಧವಾಗಿದೆ. ಈ ರೀತಿಯಿಂದ ಬೇರೆ ಕೆಲವು ಜಾತಿಗಳನ್ನು ಈ ಒಂದು ಪಟ್ಟಿಯಲ್ಲಿ ಸೇರಿಸಿದ್ದು ಸರಿಯೋ ಅಥವಾ ತಪ್ಪೋ ಎಂಬ ವಾದಕ್ಕೆ ಈಗ ನಾನು ಹೋಗುವುದಿಲ್ಲ. ಆದರೆ ಇಂತಹ ಒಂದು ಆಜ್ಞೆಯನ್ನು ಹೊರಡಿಸಲು ರಾಜ್ಯ ಸರ್ಕಾರಕ್ಕೇ ಆಗಲಿ ಅಥವಾ ಕೇಂದ್ರ ಸರ್ಕಾರಕ್ಕೇ ಆಗಲಿ ಅಧಿಕಾರವಿಲ್ಲ. ಪಾರ್ಲಿಮೆಂಟಿಗೆ ಮಾತ್ರ ಅಧಿಕಾರವಿರುವುದು. ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಮುಂದೆ ಬರಲು ಕೆಲವೊಂದು ಜಾತಿಗಳ ಜನರಿಗೆ ಅನುಕೂಲಗಳನ್ನು ಮಾಡಿಕೊಡಬೇಕೆಂದು ಹೇಳುವುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಈ ರೀತಿಯ ಸರ್ಕಾರಿ ಆಜ್ಞೆ ಹೊರಡಿಸಲು ಇವರಿಗೆ ಅಧಿಕಾರವಿಲ್ಲ ಆದರೂ ಈ ಒಂದು ಆಜ್ಞೆಯ ಪ್ರಕಾರ ಈಗಾಗಲೇ ನೌಕರಿಗಳನ್ನು ಕೊಡುತ್ತಿದ್ದಾರೆಂದು ನಾನು ಕೇಳಿದ್ದೇನೆ. ಇದು ಸರಿಯಲ್ಲ. ಈ

ಆರ್ಡರನ್ನು ಸರ್ಕಾರದವರು ವಾಪಸ್ ತೆಗೆದುಕೊಳ್ಳಬೇಕು ಮತ್ತು ಇದರ ಬಗ್ಗೆ ಪುನರ್ ಪರಿಶೀಲನೆ ಮಾಡಬೇಕೆಂದು ಹೇಳುತ್ತೇನೆ. ಮಾನ್ಯ ರಾಮಕೃಷ್ಣ ಅವರು ರಾಜ್ಯಾಂಗದ ಪರವಾಗಿದ್ದರೆ, ಇದನ್ನು ಜಾರಿಗೆ ಕೊಡಬೇಡಿ ಎಂದು ಹೇಳುತ್ತೇನೆ. ಈ ವಿಚಾರದಲ್ಲಿ ಮಾನ್ಯ ಜೆ. ಎಚ್. ಪಟೇಲರು ತಮ್ಮ ಒಂದು ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಅದಕ್ಕಾಗಿಯೇ ನಾನು ಬೇರೆ ಜಾತಿಯವರು, ಈ ಹರಿಜನ ಮತ್ತು ಗಿರಿಜನರ ಹೆಸರಿನಲ್ಲಿ ಕೆಲವೊಂದು ಸೌಲಭ್ಯಗಳನ್ನು ಅನುಭವಿಸಲು ಅವಕಾಶ ಕೊಡಬೇಡಿ ಎಂದು ಹೇಳುತ್ತಿರುವುದು. ಈ ಕಾರಣದಿಂದಲೇ ನಾವು ಅಧಿಕಾರದಲ್ಲಿದ್ದಾಗ ಇದನ್ನು ಜಾರಿಗೆ ಕೊಟ್ಟಿರಲಿಲ್ಲ. ಆದರೆ ಈಗಿನ ಸರ್ಕಾರದವರು ಜಾರಿಗೆ ಕೊಟ್ಟಿದ್ದಾರೆ. ಇದು ಸರಿಯಾದ ಕ್ರಮವಲ್ಲ.

**ಶ್ರೀಮತಿ ಮನೋರಮಾ ಮಧ್ವರಾಜ್:**– ಮಾನ್ಯ ಬಸವಲಿಂಗಪ್ಪನವರು ಮಂತ್ರಿಗಳಾಗಿದ್ದಾಗಲೇ ಈ ಬಗ್ಗೆ ರೆಕಮೆಂಡ್ ಮಾಡಿದ್ದರು. ಅದನ್ನು ನಾವು ಈಗ ಜಾರಿಗೆ ತಂದಿದ್ದೇವೆ.

**ಶ್ರೀ ಬಿ. ಬಸವಲಿಂಗಪ್ಪ:**– ಅದು ಸರಿಯೋ ಅಥವಾ ತಪ್ಪೋ ಎಂದು ಮತ್ತೊಂದು ಸಲ ವಿಚಾರ ಮಾಡಿಸಿ ನೋಡಿ.

## 7. ಸುಳ್ಳುಜಾತಿ ಪ್ರಮಾಣ ಪತ್ರ ಪಡೆಯುವುದು ಸರಿಯಲ್ಲ (1ನೇ ಆಗಸ್ಟ್ 1985)

**ಶ್ರೀ ಬಿ. ಬಸವಲಿಂಗಪ್ಪ:**– ಸರಕಾರಿ ಸೇವೆಗೆ ಸೇರುವ ಸಮಯದಲ್ಲಿ ಅನುಸೂಚಿತ ಜಾತಿ ಹಾಗೂ ಅನುಸೂಚಿತ ಆದಿಮ ಜಾತಿಗಳಿಗೆ ಸೇರದ ಅಭ್ಯರ್ಥಿಗಳು ಸುಳ್ಳು ಜಾತಿ ಪ್ರಮಾಣ ಪತ್ರಗಳನ್ನು ನೀಡಿರುವುದರಿಂದ ಅನುಸೂಚಿತ ಜಾತಿ ಹಾಗೂ ಅನುಸೂಚಿತ ಆದಿಮ ಜಾತಿಗಳಿಗೆ ಸೇರಿದ ಅಭ್ಯರ್ಥಿಗಳ ನ್ಯಾಯ ಸಮ್ಮತವಾದ ಹಕ್ಕುಗಳನ್ನು ಕಸಿದುಕೊಳ್ಳುತ್ತಿರುವುದರಿಂದ ಉಂಟಾಗಿರುವ ತೀವ್ರ ಪರಿಣಾಮಗಳ ಬಗ್ಗೆ ಸಮಾಜ ಕಲ್ಯಾಣ ಮಂತ್ರಿಗಳ ಗಮನವನ್ನು ಸೆಳೆಯಬಯಸುತ್ತೇನೆ.

ಮಾನ್ಯ ಅಧ್ಯಕ್ಷರೇ, ಜುಲೈ 5ನೇ ದಿನಾಂಕದ "ಪ್ರಜಾವಾಣಿ" ಪತ್ರಿಕೆಯಲ್ಲಿ ಪ್ರಕಟವಾಗಿರತಕ್ಕ ಒಂದು ವಿಷಯವನ್ನು ನಾನು ಓದುತ್ತೇನೆ.

## ಸುಳ್ಳು ಜಾತಿ ಪತ್ರ 207 ಜನರ ವಿರುದ್ಧ ಮೊಕದ್ದಮೆ

ಬೆಂಗಳೂರು, ಜುಲೈ 4 – ಸುಳ್ಳು ಜಾತಿ ಪತ್ರ ನೀಡಿ ವಿವಿಧ ಹುದ್ದೆಗಳನ್ನು ಗಿಟ್ಟಿಸಿಕೊಂಡ 207 ಜನರ ವಿರುದ್ಧ ರಾಜ್ಯ ನಾಗರಿಕ ಹಕ್ಕುಗಳ ಸಂರಕ್ಷಣಾ ದಳ ಕ್ರಿಮಿನಲ್ ಮೊಕದ್ದಮೆ ಮಾಡಿದೆ. ಮೇಲ್ನೋಟಕ್ಕೆ ಸಾಬೀತಾದ ಈ ಪ್ರಕರಣಗಳ ಸಂಬಂಧದಲ್ಲಿ ಮುಂದಿನ ತನಿಖೆಯೂ ಸಾಗಿದೆ ಎಂದು ಸಂರಕ್ಷಣಾ ದಳದ ಡಿ.ಐ.ಜಿ. ಯವರಾದ ಕೆ. ಶ್ರೀನಿವಾಸ ಆಳ್ವ ಇಂದು ಇಲ್ಲಿ "ಪ್ರಜಾವಾಣಿ" ಗೆ ತಿಳಿಸಿದರು.

ರಾಜ್ಯದ ವಿವಿಧ ಭಾಗಗಳಿಂದ ಸುಮಾರು 737 ಸುಳ್ಳು ಜಾತಿ ಪತ್ರ ಪ್ರಕರಣ ಕುರಿತು ದೂರು ಬಂದಿತ್ತು. ಆ ಎಲ್ಲವನ್ನೂ ಪರಿಶೀಲನೆಗೆ ಒಳಪಡಿಸದಾಗ 207 ಪ್ರಕರಣಗಳು ಮೇಲ್ನೋಟಕ್ಕೆ ಸಾಬೀತಾದವು, ಇವುಗಳ ತನಿಖೆ ಬಗ್ಗೆ ವರದಿಯನ್ನು ಪೋಲೀಸ್ ಮಹಾ ನಿರ್ದೇಶಕರಿಗೆ ಕಳಿಸಲಾಯಿತು. ಅವರ ಆಜ್ಞೆ ಮೇರೆಗೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗಿದೆ ಎಂದು ಅವರು ವಿವರಿಸಿದರು.

ಈ 237 ಪ್ರಕರಣಗಳಲ್ಲಿ ಸುಳ್ಳು ಜಾತಿ ಪತ್ರ ಕೊಟ್ಟು ಅವಕಾಶ ಗಿಟ್ಟಿಸಿಕೊಂಡವರ ವಿವರ ಹೀಗಿದೆ. ಎಂ.ಬಿ.ಬಿ.ಎಸ್. ಹಾಗೂ ಬಿ.ಇ. ಸೀಟು ಪಡೆದವರು 80, ಬಿ.ಇ.ಎಲ್., ಎಚ್.ಎಂ.ಟಿ. ಇತ್ಯಾದಿ ಕೈಗಾರಿಕೆಗಳಲ್ಲಿ ಉದ್ಯೋಗ ಗಿಟ್ಟಿಸಿದವರು 118, ಬ್ಯಾಂಕ್ ಸೇರಿದವರು 108, ಅಂಚೆ ಮತ್ತು ತಂತಿ ಇಲಾಖೆಗೆ ಸೇರಿದವರು 79, ಸರ್ಕಾರಿ ಇಲಾಖೆ 267, ವಿವಿಧ ಮಂಡಳಿ ಹಾಗೂ ನಿಗಮ 68, ಇತರ ಕಡೆಗಳಲ್ಲಿ 17 ಹೀಗಿ ಒಟ್ಟು 737 ಜನ.

ಸ್ವಾಮಿ, ಒಂದು ವಿಚಾರ ತಮ್ಮ ಮುಂದೆ ಹೇಳುತ್ತೇನೆ. ಈ ರೀತಿ ಸುಳ್ಳು ಜಾತಿ ಪತ್ರಗಳನ್ನು ಕೊಟ್ಟಿರುವವರು ಇದಕ್ಕೆ ಜವಾಬ್ದಾರಿ ಆಗಲೇಬೇಕು. ಆದರೆ ಅವರ ವಿಚಾರದಲ್ಲಿ ಇಲ್ಲಿ ಏನು ಹೇಳಿಲ್ಲ. ಇದನ್ನು ತಹಸೀಲ್ದಾರ್ ಕೊಟ್ಟಿರಬಹುದು. ಡಿ.ಸಿ. ಯವರು ಕೊಟ್ಟಿರಬಹುದು ಅಥವಾ ಎ.ಸಿ.ಯವರೇ ಕೊಟ್ಟಿರಬಹುದು. ಈ ಸುಳ್ಳು ಜಾತಿ ಪತ್ರವನ್ನು ಕೊಟ್ಟವರಿಗೆ ಇವತ್ತು ಯಾವುದೇ ಆತಂಕ ಇಲ್ಲ. ಮತ್ತೆ ಕೆಲವು ಪಟ್ಟಭದ್ರ ಹಿತಗಳು ಈ ಸುಳ್ಳು ಜಾತಿ ಪತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಬೇರೆ ಒಂದು ಇಲಾಖೆಯನ್ನೇ ಮಾಡಿಕೊಂಡಿದ್ದಾರೆ. ಈ ಬಗ್ಗೆ ಎಲ್ಲಾ ಕಡೆ ತೊಡಗುತ್ತಿದ್ದಾರೆ. ಸುಳ್ಳು ಪತ್ರ ಪಡೆದು ಹಣವನ್ನು

ವಸೂಲಿ ಮಾಡಿ ಇಂತಹ ಒಂದು ಅವ್ಯವಹಾರದಲ್ಲಿ ತೊಡಗಿದ್ದಾರೆ. ಮಾನ್ಯ ಸಮಾಜ ಕಲ್ಯಾಣ ಮಂತ್ರಿಯವರು ಈ ಬಗ್ಗೆ ತನಿಖೆ ಮಾಡಬೇಕು. ಇದರ ಬಗ್ಗೆ ಕಾರ್ಯಕ್ರಮವನ್ನು ತೆಗೆದುಕೊಳ್ಳುವುದಾದರೆ ಮಾನ್ಯ ಸಮಾಜ ಕಲ್ಯಾಣ ಮಂತ್ರಿಗಳು 2 ತಿಂಗಳ ಹಿಂದೆ ಏನು ಮಾಡಿದ್ದಾರೆ ಎಂಬುದನ್ನು ಹೇಳಬೇಕಾಗುತ್ತದೆ. ಕ್ರಮ ತೆಗೆದುಕೊಳ್ಳಬಾರದು ಎಂದು ಹೈಕೋರ್ಟಿನಲ್ಲೂ ಕೂಡಾ ಸೂಕ್ತವಾದ ಸಲಹೆ ಕೊಟ್ಟಿದ್ದಾರೆ. ರಾಜ್ಯಾಂಗದ ಪ್ರಕಾರ ಯಾರು ಕ್ರಮ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಾರೋ ಅಂತಹವರಿಗೆ ತಾಕೀತು ಮಾಡಿ ಅದನ್ನು ತೆಗೆದುಕೊಳ್ಳಬಾರದು ಎಂದು ಹೇಳಿದ್ದಾರೆ. ಇವರು ಹೇಳಿರತಕ್ಕದ್ದರ ಬಗ್ಗೆ ನಾನು ನೇರವಾಗಿ ಆಪಾದನೆ ಮಾಡುತ್ತೇನೆ. ನಾನು ತಿಳಿದಿದ್ದನ್ನು, ಕೇಳಿದ್ದನ್ನು ಇಲ್ಲಿ ಹೇಳುತ್ತಿದ್ದೇನೆ. ಈ ಒಂದು ಸುಳ್ಳು ಸರ್ಟಿಫಿಕೇಟ್ ವಿಚಾರದಲ್ಲಿ ಸ್ಪಷ್ಟವಾದ ಒಂದು ನಿಲುವನ್ನು ತಾಳಬೇಕು. ರಾಜ್ಯಾಂಗಕ್ಕೆ ನಾವು ಭಾಗಿಗಳಾಗಿದ್ದೇವೆ. ತಾವು ಇದಕ್ಕೆ ವಿರುದ್ಧ ಮಾಡಿದರೆ ರಾಜ್ಯಾಂಗಕ್ಕೆ ಅಪಚಾರ ಮಾಡಿದ ಹಾಗೆ ಆಗುತ್ತದೆ. ರಾಜ್ಯಾಂಗದ ಪ್ರಕಾರ ಹಿಂದುಳಿದ ವರ್ಗದವರು ಹಾಗೂ ಪರಿಶಿಷ್ಟ ಜಾತಿ ಹಾಗೂ ಪಂಗಡದವರಿಗೆ ನ್ಯಾಯವನ್ನು ಒದಗಿಸಬೇಕೆಂದು ಹೊರಟೆವೋ ಅಂತಹವರ ಅನ್ನವನ್ನು ಇದರಿಂದಾಗಿ ಕಿತ್ತು ಬೇರೆಯವರಿಗೆ ಕೊಟ್ಟ ಹಾಗೆ ಆಗುತ್ತದೆ. ಈ ಬಗ್ಗೆ ನಾನು ಒಂದೆರಡು ವಿಷಯಗಳನ್ನು ತಮ್ಮ ಗಮನಕ್ಕೆ ತರುತ್ತೇನೆ. ರಾಜ್ಯಾಂಗದ ಆರ್ಟಿಕಲ್ 341ನ್ನು ನಾನು ಓದುತ್ತೇನೆ.

ರಾಷ್ಟ್ರಪತಿಯವರು ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಗಳಿಗೆ ನೋಟಿಫಿಕೇಶನ್ ಮಾಡುವಂತೆ ಮತ್ತು ಸೇರಿಸಲ್ಪಟ್ಟಿರುವ ಜಾತಿಗಳನ್ನು ಮತ್ತು ಜನಾಂಗಗಳುನ್ನು ಹೆಸರಿಸಬಹುದು.

ಈ ಅಧ್ಯಾಯದ ಮುಖ್ಯ ವಿಚಾರವೇನೆಂದರೆ

(2) ಸಂಸತ್ತು ಪರಿಶಿಷ್ಟರ ಗುಂಪಿಗೆ ಸೇರಿಸುವ / ತೆಗೆಯುವ ಹಕ್ಕನ್ನು ಹೊಂದಿರುತ್ತದೆ. ಅದರಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ.

ಎಂದರೆ 1950ನೇ ಇಸವಿಯಲ್ಲಿ ಏನು ರಾಜ್ಯಾಂಗ ಜಾರಿಗೆ ಬಂತು ಆಗ ಪ್ರೆಸಿಡೆಂಟರು ಒಂದು ಹುಕ್ಕುಂ ಮಾಡಿದ್ದಾರೆ, ಆಜ್ಞೆ ಮಾಡಿದ್ದಾರೆ ಅದರ ಪ್ರಕಾರ ಈಗ ಕರ್ನಾಟಕದಲ್ಲಿ Scheduled Caste 'Constitution Scheduled Caste Order, 1959' ಇದೆ.

ಕಾನ್‌ಸ್ಟಿಟ್ಯೂಷನ್ 1950ರ ಪ್ರಕಾರ ಯಾವ ಯಾವ ಜಾತಿಗಳು ಷೆಡ್ಯೂಲ್ಡ್ ಕ್ಯಾಸ್ಟ್ ಮತ ಷಡ್ಯೂಲ್ಡ್ ಟ್ರೈಬ್ಸ್ ಪಟ್ಟಿಯಲ್ಲಿ ಸೇರಿವೆ ಆ ಜಾತಿಯವರು ಮಾತ್ರ ಎಸ್.ಸಿ. ಅಥವಾ ಎಸ್.ಟಿ.ಯವರು ಇರುತ್ತಾರೆ. ಅವರನ್ನು ಬಿಟ್ಟು ಬೇರೆ ಜಾತಿಯವರು ಎಸ್.ಸಿ., ಎಸ್.ಟಿ.ನಲ್ಲಿ ಬರುವುದಿಲ್ಲ, ಅವರು ಎಸ್.ಸಿ., ಎಸ್.ಟಿ.ಗಳಲ್ಲಿ ಎಂದು ಹೇಳುವಂಥ ಒಂದು ವಾದವನ್ನು ಸುಪ್ರೀಂ ಕೋರ್ಟ್‌ನವರು ಹೇಳಿದ್ದಾರೆ. ಇದನ್ನು ಪ್ರೆಸಿಡೆಂಟ್‌ರವರು ಮಾಡಿದ್ದರು. ಅಲ್ಲಿಂದೀಚೆಗೆ ಪಾರ್ಲಿಮೆಂಟ್‌ನಲ್ಲಿ ಕೂಡ ಇದನ್ನು ಬದಲಾವಣೆ ಮಾಡಿಲ್ಲ. ಇತ್ತೀಚೆಗೆ ಏನಾಗಿದೆ ಎಂದರೆ, ಯಾವ ಯಾವ ವ್ಯಕ್ತಿಗೆ ಪ್ರಬಲರಾದವರು ಮಂತ್ರಿಗಳಾಗಿ ಬರುತ್ತಾರೋ ಅವರು ತಮ್ಮ ತಮ್ಮ ಜಾತಿಯವರನ್ನು ಎಸ್.ಸಿ. ಅಥವಾ ಎಸ್.ಟಿ.ಗೆ ಸೇರಿಸುತ್ತಿದ್ದಾರೆ. ಅದೇ ರೀತಿಯಲ್ಲಿ ಬಂದಂಥ ಸರ್ಕಾರಗಳೂ ಕೂಡ ಒತ್ತಡಕ್ಕೆ ಮಣಿದು ಅದೇ ಕೆಲಸವನ್ನು ಮಾಡುತ್ತಿವೆ; ಅದಕ್ಕೆ ಅನುಮೋದನೆ ನೀಡುತ್ತಿರುವ ಉದಾಹರಣೆಗೆ ಹೇಳುವುದಾದರೆ ಹುಣಸೂರು ತಾಲ್ಲೂಕಿನಲ್ಲಿ ಜೇನು ಕುರುಬರು, ಕಾಡು ಕುರುಬರು ಎಂದು ಇದ್ದಾರೆ. ಇವರು ಯಾವಾಗಲೂ ಕಾಡಿನಲ್ಲೇ ವಾಸ ಮಾಡತಕ್ಕವರು. ಇವರು ಕಾಡು ಬಿಟ್ಟು ಹೊರಗೆ ಬರುವುದಿಲ್ಲ. ಇವರು ಮರದ ಎಲೆಗಳನ್ನು ಸುತ್ತಿಕೊಂಡಿರುತ್ತಾರೆ, ಇಲ್ಲವೇ ಬೆತ್ತಲೆ ಇರುತ್ತಾರೆ. ಇವರು ಅನಾಗರೀಕ ಜನ. ನಾನು ಇವರನ್ನು ಕಣ್ಣಾರೆ ನೋಡಿ ನಾನು ಸಹಾಯ ಮಾಡಿದ್ದೇನೆ. ನಮ್ಮಲ್ಲಿರುವವರು ಊರು ಕುರುಬರು. ನಮ್ಮ ಕರ್ನಾಟಕದಲ್ಲಿ ಸುಮಾರು 30.5 ಲಕ್ಷ ಕುಟುಂಬಗಳಿವೆ. ಇವರಿಗೆ ಎಲ್ಲ ಸೌಲಭ್ಯಗಳೂ ಸಿಕ್ಕುತ್ತಿವೆ. ಇತ್ತೀಚೆಗೆ ಏನಾಗುತ್ತಿದೆ, ಕಾಡು ಕುರುಬರು ಮತ್ತು ಜೇನು ಕುರುಬರಿಗೆ ಸರ್ಕಾರ ಏನು ಸೌಲಭ್ಯಗಳನ್ನು ಕೊಡುತ್ತಿದೆ ಅದನ್ನು ಊರು ಕುರುಬರೂ ತೆಗೆದುಕೊಳ್ಳುವ ಸಲುವಾಗಿ ಯಾರು ಕುರುಬ ಎಂದು ಇರುತ್ತಾನೆ, ಅವರು "ಕುರುಬ" ಎಂಬುದರ ಹಿಂದೆ "ಕಾಡು" ಅಥವಾ "ಜೇನು" ಎಂದು ಸೇರಿಸಿಕೊಳ್ಳುತ್ತಿದ್ದಾರೆ ಅಧಿಕಾರಿಗಳು ಪ್ರಮಾಣ ಪತ್ರಗಳನ್ನು ಕೊಡುವಾಗ "ಜೇನು ಕುರುಬ, ಕಾಡು ಕುರುಬ" ಎಂದು ಸೇರಿಸಿ ಕೊಡುತ್ತಿರುವುದರಿಂದ ನಿಜವಾಗಿಯೂ ಕಾಡಿನಲ್ಲಿ ವಾಸ ಮಾಡುತ್ತಿರುವ ಕಾಡು ಕುರುಬರಿಗೆ ಅಥವಾ ಜೇನು ಕುರುಬರಿಗೆ ಏನು ಸೌಲಭ್ಯ ಸಿಕ್ಕಬೇಕೋ ಅದು ಸಿಕ್ಕುತ್ತಿಲ್ಲ. ಅವರಿಗೆ ಕೊಡುವ ಅನ್ನವನ್ನು ಕಿತ್ತು ಬೇರೆಯವರಿಗೆ ಕೊಡತಕ್ಕ ಕೆಲಸ ಅಧಿಕಾರಿಗಳಿಂದ ನಡೆಯುತ್ತಿದೆ. ಇದು ಒಂದು ಹೇಯವಾದುದು.

ಮಾನ್ಯ ಅಧ್ಯಕ್ಷರೆ, ಇನ್ನೊಂದು ಬಹಳ ಪ್ರಮುಖವಾದ ವಿಚಾರ ಎಂದರೆ....

**ಅಧ್ಯಕ್ಷರು:–** ತಾವು ಕ್ಲಾರಿಫಿಕೇಷನ್ ಕೇಳಿ ನಾಳೆ ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟ್‌ನ ಡಿಮ್ಯಾಂಡ್ ಬಂದಾಗ ಏನು ಹೇಳಬೇಕೋ ಹೇಳುವಿರಂತೆ.

**ಶ್ರೀ ಬಿ. ಬಸವಲಿಂಗಪ್ಪ:–** ಸ್ವಾಮಿ, ಷೆಡ್ಯೂಲ್ಡ್ ಟ್ರೈಬ್‌ನಲ್ಲಿ "ನಾಯಕರ" ಎಂದು ಇದೆ. ಈ ಜಾತಿಯ ಜನರು ಗುಜರಾತ್ ಕಡೆಯಿಂದ ಬಂದಿದ್ದಾರೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ಸುಮಾರು 15–16 ಕುಟುಂಬಗಳು ಈ ಜಾತಿಗೆ ಸೇರಿದವರಿದ್ದಾರೆ. ಕಪಾಡಿಯ ನಾಯಕ, ಚೋಳಿವಾಡ ನಾಯಕ ಮೋಟ ನಾಯಕ, ನಾನಾ ನಾಯಕ ಎಂದು ಇದೆ. ನಾಯಕರೆ ಎಂಬುದು ಒಂದು ಜಾತಿ ಇದರಲ್ಲಿ. ಸಿನಾನಿಮ್ಸ್ ಇದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ "ನಾಯಕರು" ಎನ್ನುವವರು ಬ್ರಾಹ್ಮಣರಲ್ಲಿ ಇದ್ದಾರೆ. ಲಿಂಗಾಯಿತರಲ್ಲೂ ಇದ್ದಾರೆ, ಮತ್ತು ಬೇರೆ ಜಾತಿಯಲ್ಲಿಯೂ ಇದ್ದಾರೆ. ಅವರೂ ಕೂಡ "ನಾಯಕ" ಎನ್ನುವ ಸರ್ಟಿಫಿಕೇಟನ್ನು ತೆಗೆದುಕೊಂಡು ಸರ್ಕಾರದಿಂದ ಕೊಡತಕ್ಕ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ....

**ಶ್ರೀ ವೀರಣ್ಣ:–** ಮಾನ್ಯ ಅಧ್ಯಕ್ಷರೆ, ಮಾನ್ಯ ಸದಸ್ಯರು ಕ್ಲಾರಿಫಿಕೇಷನ್ ಕೇಳುತ್ತಿದ್ದಾರೋ ಡಿಸ್ಕಷನ್‌ಗೆ....

**ಅಧ್ಯಕ್ಷರು:–** ತಾವು ದಯವಿಟ್ಟು ಕೂತುಕೊಳ್ಳಿ. ನೋಟೀಸ್‌ಗೆ ಯಾರು ಯಾರು ಸಹಿ ಹಾಕಿದ್ದಾರೆ ಅವರು ಮಾತ್ರ ಮಾತನಾಡಲು ಅವಕಾಶ ಇದೆ.

**ಶ್ರೀ ವೀರಣ್ಣ:–** ಸ್ವಾಮಿ, ಮಾನ್ಯ ಸದಸ್ಯರಿಗೆ ವಿಷಯ ಚೆನ್ನಾಗಿ ಗೊತ್ತಿದೆ. ಈಗ ಅವರು ಕೇವಲ ಕ್ಲಾರಿಫಿಕೇಷನ್ ಮಾತ್ರ ಕೇಳಬೇಕು. ಅದು ಬಿಟ್ಟು ಭಾಷಣ ಮಾಡುವುದು ಸರಿಯಲ್ಲ. ಅವರು ಈ ವಿಚಾರದಲ್ಲಿ ಪೂರ್ಣ ಚರ್ಚೆ ಮಾಡಬೇಕಾದರೆ ಇದನ್ನು ಬೇರೆ ರೀತಿಯಲ್ಲಿ ಸಭೆಯ ಮುಂದೆ ತರಲಿ ಇಲ್ಲಿ ಜೇನು ಕುರುಬ, ಕಾಡು ಕುರುಬ ಎಂದು ಹೇಳುತ್ತಿದ್ದಾರೆ....

**ಅಧ್ಯಕ್ಷರು:–** ತಾವು ದಯವಿಟ್ಟು ಕೂತುಕೊಳ್ಳಿ.

**ಶ್ರೀ ವೀರಣ್ಣ:**– ಮಾನ್ಯ ಸದಸ್ಯರಿಗೆ ತಾವು ಹೇಳಬೇಕು.

ಅಧ್ಯಕ್ಷರು:– ಬಸವಲಿಂಗಪ್ಪನವರೇ, ನಾಳೆ ಬೆಳಿಗ್ಗೆ ನೀವೇ ಮೊದಲು ಮಾತನಾಡಿ. ಈಗಾಗಲೇ ತಾವು ಸಾಕಷ್ಟು ಸಮಯವನ್ನು ತೆಗೆದುಕೊಂಡಿದ್ದೀರಿ. ದಯವಿಟ್ಟು ವಿವರಣೆಯನ್ನು ಮಾತ್ರ ಕೇಳಿ.

**ಶ್ರೀ ಬಸವಲಿಂಗಪ್ಪ:**– ಸ್ವಾಮಿ, ಮಹಾರಾಷ್ಟ್ರದಲ್ಲಿ....

**ಶ್ರೀ ಬಿ. ಬೈರೇಗೌಡ:**– ಮಾನ್ಯ ಅಧ್ಯಕ್ಷರೆ, ಮಾನ್ಯ ಬಸವಲಿಂಗಪ್ಪನವರಿಗೆ ಮಾತನಾಡಲು ಅವಕಾಶ ಕೊಟ್ಟರೆ ಬೇರೆಯವರಿಗೂ ಅವಕಾಶವನ್ನು ಕೊಡಬೇಕಾಗುತ್ತದೆ.

**ಅಧ್ಯಕ್ಷರು:**– ಬಸವಲಿಂಗಪ್ಪನವರೇ, ತಾವು ಹೇಳುತ್ತಿರುವುದರಲ್ಲಿ ಸತ್ಯಾಂಶ ಇದೆ. ನಾಳೆಯ ದಿವಸ ಸಮಾಜ ಕಲ್ಯಾಣ ಇಲಾಖೆಯ ಬೇಡಿಕೆ ಬಂದಾಗ ತಾವು ಮಾತನಾಡಬಹುದು ಈಗ ಕೇವಲ ಕ್ಲಾರಿಫಿಕೇಷನ್ ಮಾತ್ರ ಕೇಳಿ.

**ಶ್ರೀ ಬಿ. ಬಸವಲಿಂಗಪ್ಪ:**– ಸ್ವಾಮಿ, ನಾನು ಬಹಳ ಪ್ರಮುಖವಾದ ವಿಚಾರವನ್ನು ಪ್ರಸ್ತಾಪ ಮಾಡುತ್ತಿದ್ದೇನೆ. ಆದರೆ,

**ಅಧ್ಯಕ್ಷರು:**– ನೀವು ಶಾಸಕರಾಗಿ ಕೆಲಸ ಮಾಡಿದ್ದೀರಿ ಮತ್ತು ಸಚಿವರಾಗಿಯೂ ಕೆಲಸ ಮಾಡಿದ್ದೀರಿ. ಒಳ್ಳೆಯ ಅನುಭವ ಇರತಕ್ಕ ನೀವೇ ಈ ರೀತಿ ಮಾತನಾಡುತ್ತಾ ಹೋದರೆ ಸಭೆಯನ್ನು ನಾನು ಯಾವ ರೀತಿ ನಡೆಸಬೇಕು ನೀವೇ ಹೇಳಿ?

**ಶ್ರೀ ಬಿ. ಬಸವಲಿಂಗಪ್ಪ:**– ತಾವು ದಯವಿಟ್ಟು ನನಗೆ ಅವಕಾಶ ಕೊಡಬೇಕು.

Complaints have been received that is several instances the real beneficiaries are being harassed by resorting to legal aition

ಹೌದು ಹೇಳಿದ್ದೀರಿ. ಇದರ ಅರ್ಥ ಏನು ಎಂಬುದನ್ನು ಹೇಳಿ.....

**ಅಧ್ಯಕ್ಷರು:–** ತಾವು ಕ್ಲಾರಿಫಿಕೇಷನ್ ಕೇಳಿ. ಎಕ್ಸಾಮಿನೇಷನ್, ಕ್ರಾಸ್ ಎಕ್ಸಾಮಿನೇಷನ್ ಮಾಡುವುದಕ್ಕೆ ಇಲ್ಲಿ ಅವಕಾಶ ಇಲ್ಲ.

**ಶೀ ಬಿ. ಬಸವಲಿಂಗಪ್ಪ:–** ಮಾನ್ಯ ಸಮಾಜ ಕಲ್ಯಾಣ ಇಲಾಖೆಯ ಮಂತ್ರಿಗಳು ನನಗೆ ಸ್ಪಷ್ಟ ಉತ್ತರವನ್ನು ಕೊಡಬೇಕು. ತಾನು ಎಸ್.ಸಿ. ಎಸ್.ಟಿ. ಎಂದು ಯಾರು ಸುಳ್ಳು ಪ್ರಮಾಣ ಪತ್ರವನ್ನು ತೆಗೆದುಕೊಂಡು ಕೆಲಸಕ್ಕೆ ಸೇರಿದ್ದಾರೊ ಅಂಥವರ ಮೇಲೆ ಏನು ಕಠಿಣ ಕ್ರಮ ತೆಗೆದುಕೊಳ್ಳುತ್ತಾರೆಂಬುದನ್ನು ಹೇಳಬೇಕು.

**ಶ್ರೀ ವಿ.ಎಲ್. ಪಾಟೀಲ್:–** ಮಾನ್ಯ ಅಧ್ಯಕ್ಷರೆ, ಮಾನ್ಯ ಸದಸ್ಯರುಗಳಾದ ಕೆ.ಎಚ್. ಪಾಟೀಲರು ಬಸವಲಿಂಗಪ್ಪನವರು, ಕೃಷ್ಣನ್‌ರವರು, ಯಡಿಯೂರಪ್ಪನವರು, ಕಣ್ಣನ್‌ರವರು, ಶ್ರೀ ಭೂಪತಿ ಇವರುಗಳು ಕಾಲಿಂಗ್ ಅಟೆನ್‌ನಷನ್ ನೋಟಿಸಿಗೆ ಸಹಿ ಹಾಕಿದ್ದಾರೆ. ಸಾಧಾರಣವಾಗಿ ಸುಳ್ಳು ಸರ್ಟಿಫಿಕೇಟ್‌ಗಳನ್ನು ಕೊಡುತ್ತಿರುವುದರಿಂದ ಅರ್ಹ ಜಾತಿಯವರಿಗೆ ಅನ್ಯಾಯವಾಗುವುದು ಆದ್ದರಿಂದ ಸುಳ್ಳು ಸರ್ಟಿಫಿಕೇಟ್ ಕೊಡುತ್ತಿರುವವರಿಗೆ ಸೂಕ್ತ ಎಚ್ಚರಿಕೆಯನ್ನು ಕೊಡಬೇಕೆಂದು ಗಮನ ಸೆಳೆಯುವ ಸೂಚನೆಯನ್ನು ಕಳುಹಿಸಿದ್ದಾರೆ. ಪ್ರಜಾವಾಣಿ ಪತ್ರಿಕೆಯಲ್ಲಿ ಬಂದಿರುವುದರಿಂದ ವಿಚಾರದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಸಂಬಂಧಪಟ್ಟವರಿಗೆ ಈಗಾಗಲೇ ಸೂಚನೆ ಕೊಟ್ಟಿದ್ದೇನೆ. ನಾನು ಸಮಾಜ ಕಲ್ಯಾಣ ಖಾತೆಯ ಸಚಿವನಾದ ಮೇಲೆ ಅನೇಕ ಕಡೆಗಳಿಂದ ನನಗೆ ದೂರುಗಳು ಬಂದಿವೆ. ವಿದ್ಯಾರ್ಥಿಗಳಿಂದ, ಹೆಚ್.ಎ.ಎಲ್. ನಿಂದ, ಬಿ.ಇ.ಎಲ್. ನಿಂದ, ಅಂಚೆ ಮತ್ತು ತಂತಿ ಇಲಾಖೆಯಿಂದ, ಸರ್ಕಾರಿ ಇಲಾಖೆಗಳಿಂದ ಸ್ಥಳೀಯ ಸಂಸ್ಥೆಗಳಿಂದ ಕೂಡ ದೂರುಗಳು ಬಂದಿವೆ ಇದನ್ನೆಲ್ಲಾ ನಾನು ಪರಿಶೀಲಿಸಿದಾಗ ಇದರಲ್ಲಿ ಕೆಲವು ವಿಚಾರಗಳು ಸತ್ಯವಾಗಿವೆ. ಅರ್ಹರಾದವರಿಗೆ ತೊಂದೆಯಾಗಿದೆ ಎಂಬುದು ತಿಳಿದು ಬಂತು. ಕೆಲವು ಪ್ರಕರಣಗಳಲ್ಲಿ ಕೇಸು ಕೂಡ ಆಗಿದೆ. ಇದು ಒಂದು ರೀತಿಯಾದರೆ, ಇನ್ನೊಂದು ರೀತಿಯಲ್ಲಿ ಡಿ.ಐ.ಜಿ. ಯವರು ಎನ್‌ಕ್ವೈರಿ ಮಾಡಿದಾಗ ಅವರಿಗೆ ಕೊಟ್ಟಿರತಕ್ಕ ಸರ್ಟಿಫಿಕೇಟ್ ಸರಿಯಾಗಿದೆ. ಅದರ ಪ್ರಕಾರ ಅವರಿಗೆ ಕೆಲಸವನ್ನು ಕೊಟ್ಟಿರುವವರಿಗೆ ಸರಿಯಾಗಿದೆ ಎಂದು ಹೇಳಿದ್ದಾರೆ. ಯಾವುದೇ ದೂರು ಬಂದರೂ ಅದರ ಬಗ್ಗೆ ತನಿಖೆ ನಡೆಸುವುದು ಸರ್ಕಾರದ ಕರ್ತವ್ಯ. ಮಾನ್ಯ ಸದಸ್ಯರಿಗೆ ಇರುವಂತೆಯೇ ನಮಗೂ ಕಳಕಳಿ ಈ ವರ್ಗದ ಜನರ ಮೇಲಿದೆ ಎನ್ನುವ ಮಾತನ್ನು ಹೇಳಬಯಸುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ:**– ಮಾನ್ಯ ಅಧ್ಯಕ್ಷರೇ, ನನ್ನ ಆರೋಪ ಇವರು ನ್ಯಾಯಾಲಯಕ್ಕೆ ನಿರ್ದೇಶನ ಕೊಟ್ಟಿದ್ದಾರೆಯೇ ಎಂದು ಕೇಳುತ್ತಿದ್ದೇನೆ. ಇದಕ್ಕೆ ಸಚಿವರು ಏನು ಹೇಳುತ್ತಾರೆ? ಎಂಬುದನ್ನು ಕೇಳಬಯಸುತ್ತೇನೆ.

**ಶ್ರೀ ವಿ.ಎಲ್. ಪಾಟೀಲ್:**– ರಾಜ್ಯಾಂಗದ ಪ್ರಕಾರ ಇದನ್ನು ಜಾರಿಗೆ ತರಲಾಗುವ ಈಗ 17 ಜಾತಿಗಳು ಇವೆ. ಈ ಬೇಡರು, ನಾಯಕ ಅಂತ ಏನಿವೆ, ನನಗಂತೂ ವೈಯುಕ್ತಿಕವಾಗಿ ಇದರ ಬಗ್ಗೆ ಹೆಚ್ಚು ಗೊತ್ತಿಲ್ಲ. ಅದಕ್ಕಾಗಿ ಒಂದು ಕಮಿಟಿಯನ್ನು ಮಾಡುತ್ತಿದ್ದೇವೆ ಎಂದು ಹೇಳಿದ್ದೇನೆ. ಬೇರೆ ಬೇರೆ ಜಾತಿಯವರು ಒಂದು ಕಡೆ ಸೇರಿ ಆಳವಾಗಿ ಅಭ್ಯಾಸ ಮಾಡಿ ಕೇಂದ್ರ ಸರ್ಕಾರಕ್ಕೆ ತಿಳಿಸಿದ್ದಾರೆ ಅನುಕೂಲವಾಗುತ್ತದೆ.

**ಶ್ರೀ ಎಂ.ಎಸ್. ಕೃಷ್ಣನ್:**– ಕಮಿಟಿ ಮಾಡುವುದಕ್ಕೆ ಮುಂಚೆ ಈಗಾಗಲೇ ಸರ್ಟಿಫಿಕೇಟ್‌ಗಳನ್ನು ಮಾಡಿಕೊಂಡು ಬಿಟ್ಟಿದ್ದಾರಲ್ಲ? ಇದಕ್ಕೇನು ಹೇಳುತ್ತೀರಿ?

**ಶ್ರೀ ವಿ.ಎಲ್. ಪಾಟೀಲ್:**– ಇದರ ಬಗ್ಗೆ ವಿಚಾರ ಮಾಡಿ .....

**ಶ್ರೀ ಬಿ. ಬಸವಲಿಂಗಪ್ಪ:**– ಇದು ಸಾಮಾನ್ಯವಾದ ವಿಷಯ ಅಲ್ಲ. ರಾಜ್ಯಾಂಗಬದ್ಧವಾಗಿ ಏನೇನು ಇದೆ, ಶೆಡ್ಯೂಲ್ಡ್ ಕ್ಯಾಸ್ಟ್ ಆ್ಯಂಡ್ ಶೆಡ್ಯೂಲ್ಡ್ ಟ್ರೈಬ್ ಆರ್ಡರ್ 1950 ಅದರ ಪ್ರಕಾರ ಜಾರಿಗೆ ಕೊಡುತ್ತೇವೆ ಎಂದು ಹೇಳಿದ್ದಾರೆ. ಇದನ್ನೆಲ್ಲಾ ಪರಿಶೀಲನೆ ಮಾಡುತ್ತೇವೆ, ಸಮಿತಿ ಮಾಡುತ್ತೇವೆ ಎಂದು ಹೇಳುತ್ತಿದ್ದೀರಿ. ಅಲ್ಲಿಯವರೆಗೆ ಈ 737 ಜನ ಏನು ಇದ್ದಾರೆ, ಅವರ ವಿರುದ್ಧ ಕ್ರಮ ತೆಗೆದುಕೊಳ್ಳುವುದನ್ನು ನಿಲ್ಲಿಸತಕ್ಕದ್ದು ಸರಿಯೇ?

**ಶ್ರೀ ಕೆ.ಎಸ್. ಬೀಳಗಿ:**– ಇದರ ಬಗ್ಗೆ ವಿಚಾರ ಮಾಡಿ ಸೂಕ್ತ ಕ್ರಮತೆಗೆದುಕೊಳ್ಳುವ ಬಗ್ಗೆ ಒಂದು ಸಮಿತಿಯನ್ನು ನೇಮಿಸಲಾಗುವುದು ಎಂದು ಹೇಳಿದ್ದೀರಿ. ಈ ಸಮಿತಿಯಲ್ಲಿ ಅಧಿಕಾರಿಗಳನ್ನು ಮಾತ್ರ ಸೇರಿಸಿ ಮಾಡುತ್ತೀರೋ ಅಥವಾ ಈ ಸದನದ ಶಾಸಕರನ್ನೂ ಕೂಡ ಸೇರಿಸಿ ಮಾಡುತ್ತಿರೋ.

**ಅಧ್ಯಕ್ಷರು:**– ಬೀಳಗಿಯವರೇ, ನಿಮ್ಮನ್ನು ಕ್ಲಾರಿಫಿಕೇಷನ್ ಕೇಳಿ ಎಂದರೆ ಬೇರೆಯೇ ಪ್ರಶ್ನೆ ಕೇಳುತ್ತೀರಲ್ಲ?

ಶ್ರೀ ಕೆ.ಎಸ್. ಬೀಳಗಿ:– ಅಧ್ಯಕ್ಷರೇ, ನಾನು ಸ್ಪಷ್ಟೀಕರಣ ಕೇಳುತ್ತಿದ್ದೇನೆ. ಈ ಸಮಿತಿಯಲ್ಲಿ ಬರೇ ಅಫಿಶಿಯಲ್ಸ್‌ನ್ನು ಹಾಕಿ ಮಾಡುತ್ತೀರೋ, ಇಲ್ಲ ನಾನ್–ಅಫಿಶಿಯಲ್ಸ್‌ನ್ನು ಹಾಕಿ ಮಾಡುತ್ತೀರೋ?

ಶ್ರೀ ವಿ.ಎಲ್. ಪಾಟೀಲ್:– ಈ ಸಮಾಜಗಳಲ್ಲಿ ತಜ್ಞರು ಯಾರು ಇರುತ್ತಾರೆ ಎಂದು ಶೋಧನೆ ಮಾಡಿ ಅಂಥವರನ್ನೂ ಈ ಸಮಿತಿಯಲ್ಲಿ ಹಾಕುತ್ತೇವೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:– ಈಗಾಗಲೇ ಮಾನ್ಯ ಮಂತ್ರಿಗಳು ತಮ್ಮ ಸ್ಟೇಟ್‌ಮೆಂಟ್‌ನಲ್ಲಿ ಸುಮಾರು 737 ಜನರು ಸುಳ್ಳು ಜಾತಿ ಪತ್ರ ಪಡೆದುಕೊಂಡಿರುವುದು ತಮ್ಮ ಜನರಿಗೆ ಬಂದಿದ್ದು, ಇದರ ಬಗ್ಗೆ ಅನೇಕರು ಕೋರ್ಟಿನಲ್ಲಿ ಕೇಸ್ ಹಾಕಿದ್ದಾರೆ ಎಂದು ಹೇಳಿದ್ದಾರೆ. ಹೈಕೋರ್ಟಿನಲ್ಲಿ ಕೇಸು ನಡೆಯುತ್ತಿರುವುದರಿಂದ, ಇವುಗಳ ವಿಚಾರಣೆ ನಿಲ್ಲಿಸಬೇಕೆಂದು ಸೂಚನೆ ಕೊಟ್ಟಿದ್ದೇನೆ ಎನ್ನುವ ಮಾತನ್ನು ಅವರೇ ಹೇಳಿದರು. ದುರ್ದೈವದಿಂದ ಇಂದು ಏನಾಗಿದೆ ಎಂದರೆ, ಹರಿಜನ ಮತ್ತು ಗಿರಿಜನರಿಗೆ ಸಂಬಂಧಪಟ್ಟ ಖಾತೆ ಮತ್ತು ಹಿಂದುಳಿದ ವರ್ಗದವರಿಗೆ ಸೇರಿದ ಖಾತೆ ಇವೆರಡೂ ಸಹ ಒಬ್ಬ ಮಂತ್ರಿಯ ಕೈಯಲ್ಲಿದೆ. ಈಗ ಸುಮಾರು 17 ಬೇರೆಬೇರೆ ಜಾತಿಗಳಿಗೆ ಸೇರಿದ ವ್ಯಕ್ತಿಗಳು ತಾವು ಹರಿಜನ ಇಲ್ಲವೇ ಗಿರಿಜನರ ಗುಂಪಿಗೆ ಸೇರಿದವರೆಂದು ಸರ್ಟಿಫಿಕೇಟ್ ಪಡೆದು, ಅದರ ಆಧಾರದ ಮೇಲೆ ಕೆಲಸಕ್ಕೆ ಸೇರಿಕೊಂಡಿದ್ದಾರೆ. ಸುಮಾರು 737 ಜನರು ಈ ರೀತಿಯಿಂದ ಫಾಲ್ಸ್ ಸರ್ಟಿಫಿಕೇಟ್‌ನಿಂದ ಕೆಲಸಕ್ಕೆ ಸೇರಿದ್ದಾರೆಂದು ಡಿ.ಐ.ಜಿ. ಅವರು ತನಿಖೆ ಮಾಡಿ ವರದಿ ಕೊಟ್ಟಿದ್ದಾರೆ. ಇದರ ಒಂದು ಆಧಾರದ ಮೇಲೆ ಮಾನ್ಯ ಮಂತ್ರಿಗಳು ಈ ಜನರ ಮೇಲೆ ಕೂಡಲೇ ಕ್ರಮ ತೆಗೆದುಕೊಳ್ಳಬಹುದಾಗಿತ್ತು. ಆದರೆ ಆ ರೀತಿ ಮಾಡುವುದಕ್ಕೆ ಬದಲು ಇದನ್ನು ಪರಿಶೀಲನೆ ಮಾಡಲು ಒಂದು ಕಮಿಟಿ ನೇಮಕ ಮಾಡುತ್ತೇವೆಂದು ಹೇಳುತ್ತಿದ್ದಾರೆ. ಇದು ಸರಿಯಾದ ಕ್ರಮವಲ್ಲ. ಈ 17 ಜಾತಿಯ ಜನರನ್ನು ಹರಿಜನರ ಪಟ್ಟಿಯಲ್ಲಿ ಸೇರಿಸಬೇಕೋ ಅಥವಾ ಹಿಂದುಳಿದವರ್ಗದವರ ಪಟ್ಟಿಯಲ್ಲಿ ಸೇರಿಸಬೇಕೋ ಎಂಬುದನ್ನು ಪರಿಶೀಲನೆ ಮಾಡಲು ಒಂದು ಕಮಿಟಿ ಮಾಡಿ. ಆದರೆ ಫಾಲ್ಸ್ ಸರ್ಟಿಫಿಕೇಟ್‌ನಿಂದ ಕೆಲಸಕ್ಕೆ ಸೇರಿದವರ ಬಗ್ಗೆ ಕೂಡಲೇ ಏತಕ್ಕೆ ಕ್ರಮ ತೆಗೆದುಕೊಳ್ಳಬಾರದು?

## ದಲಿತ ಕೇರಿಗಳಲ್ಲಿ ಮದ್ಯಪಾನ ನಿಷೇಧಿಸಬೇಕು (2ನೇ ಜನವರಿ 1988)

**ಬಿ. ಬಸವಲಿಂಗಪ್ಪ (ಯಲಹಂಕ):–** ಮಾನ್ಯ ಅಧ್ಯಕ್ಷರೇ ಮಾನ್ಯ ಸದಸ್ಯರಾದ ಕೆ.ಹೆಚ್. ಶ್ರೀನಿವಾಸ್‌ರವರಿಗೆ ವಂದನೆಗಳನ್ನು ಅರ್ಪಿಸಬೇಕು, ಕಾರಣ ಅವರು ಸಕಾಲಿಕವಾದ ಖಾಸಗಿ ನಿರ್ಣಯವನ್ನು ತಂದಿದ್ದಾರೆ. ಇದರ ಬಗ್ಗೆ ಸಾಕಷ್ಟು ಚರ್ಚೆಯಾಗಿದೆ ಎಂದು ನಾನು ತಿಳಿದು ಹೇಳಿದ್ದೇನೆ. ನಾನು ಅಸೆಂಬ್ಲಿ ಸದಸ್ಯನಾಗಿ ಬಂದಿದ್ದರಂತ ಕಾಲದಿಂದಲೂ ಈ ರೀತಿಯ ಚರ್ಚೆ ನಡೆಯುತ್ತಿದೆ. ಈ ನಿರ್ಣಯದ ಮೇಲೆ ಚರ್ಚೆ ನಡೆದರೂ ಏನೇನು ಕೆಲಸ ಮಾಡಿದ್ದೇವೆನ್ನುವುದು ನಮ್ಮ ಕಣ್ಣು ಮುಂದೆ ಇದೆ. ಹಿಂದೆ ಈ ಒಂದು ಪಾನನಿರೋಧ ಜಾರಿಗೆ ತರಬೇಕು ಜಾರಿಗೆ ತರಬೇಕು ಎನ್ನುವ ಬಗ್ಗೆ ಸಾಕಷ್ಟು ಚರಿತ್ರೆ ಇದೆ. ಶ್ರೀಮಾನ್ ನಿಜಲಿಂಗಪ್ಪನವರು ಮುಖ್ಯ ಮಂತ್ರಿಯಾಗಿದಂಥ ಕಾಲದಲ್ಲಿ ಪಾನನಿರೋಧ ಜಾರಿಗೆ ತರಬೇಕೆ? ಬೇಡವೇ ಎನ್ನುವ ಬಗ್ಗೆ ಚರ್ಚೆ ಆಯಿತು. ಆಗ ಆ ಸರ್ಕಾರ ಒಂದು ನಿಲುವು ತೆಗೆದುಕೊಂಡಿತು. ಏನೆಂದರೆ ಪಾನನಿರೋಧ ಜಾರಿಗೆ ಬರುವುದು ಬೇಡವೆಂದು ಆಗ ಮಾನ್ಯ ರಾಚಯ್ಯನವರು ಮಂತ್ರಿಗಳಾಗಿದ್ದರು. ಅವರು ತಮ್ಮ ತಾಲ್ಲೂಕಿನ ಚಾಮರಾಜನಗರ ಮತ್ತು ಕೊಳ್ಳೆಗಾಲಗಳಿಗೆ ಸಂಬಂಧಪಟ್ಟ ಹಾಗೆ ಪಾನನಿರೋಧ ಜಾರಿಗೆ ಎತ್ತಿಕೊಂಡರು. ಇನ್ನುಳಿದ ಕಡೆಗಳೆಲೆಲ್ಲಾ ಬೇಡವೆಂದು ಮಾಡಿದರು.

**ಶ್ರೀ ಬಿ. ರಾಚಯ್ಯ:–** ಆ ಆರೋಪಣೆ ನನಗೆ ಸಲ್ಲತಕ್ಕಂತದ್ದು ಅಲ್ಲ. ಇಡೀ ರಾಜ್ಯದಲ್ಲಿ ಇರುವುದಕ್ಕೆ ಸಾಧ್ಯವಿತ್ತು. ಆದರೆ ತಮ್ಮ ಮನಸ್ಸು ನೋಯಿಸತಕ್ಕಂಥಾದ್ದು ಸರಿಯಲ್ಲವೆಂದು ಜಾರಿಗೆ ತರಲಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:–** ಅವರು ಹೇಳಿದ್ದುದು ಸರಿ. ಆಗ ತಮ್ಮ ಮಾತು ಯಾರು ಕೇಳುತ್ತಿರಲಿಲ್ಲ. ಅದಕ್ಕೆ ಜಾರಿಗೆ ತಂದರು.

**ಶ್ರೀ ಬಿ. ರಾಚಯ್ಯ:–** ತಾವು ಡೆಪ್ಯುಟಿ ಚೀಪ್ ಮಿನಿಸ್ಟರ್ ಆಗಿದ್ದವರು. ಆಗ ತಮ್ಮ ಮಾತು ಯಾರು ಕೇಳುತ್ತಿದ್ದರು. ಆ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಮೆಜಾರಿಟಿ ಓಪಿನಿಯನ್ ಯಾವ ರೀತಿ ಇರುತ್ತದೆಯೋ ಆ ರೀತಿ ಮಾಡಬೇಕು.

**ಶ್ರೀ ಬಿ. ಬಸವಲಿಂಗಪ್ಪ:–** ತಾವು ಏನು ವಿಷಯವನ್ನು ಸ್ಪಷ್ಟೀಕರಿಸುತ್ತಿದ್ದೀರೋ ಎಂದು ದಯಮಾಡಿ ಹೇಳುತ್ತೀರಾ? ನೀವು ಹೇಳಿದ್ದನೇ

ನಾನು ಹೇಳುತ್ತಿದ್ದೇನೆ ಸ್ವಾಮಿ. ನಾನು ಏನು ಹೇಳುತ್ತಿದ್ದೇನೆ ಎಂದರೆ, ಬ್ರಾಂದಿ, ಅಂಗಡಿಗಳಿಗೆ ಲೈಸನ್ಸ್‌ಗಳನ್ನು ಸರ್ಕಾರ ಕೊಡುತ್ತಿದೆ. ಸರ್ಕಾರಕ್ಕೆ ಹಣಬೇಕೆಂದು ಬ್ರಾಂದಿ ಅಂಗಡಿಗಳಿಗೆ ಲೈಸನ್ಸ್‌ಗಳನ್ನು ಕೊಡುವುದನ್ನು ಸರ್ಕಾರ ಜಾರಿಗೆ ತಂದಿದೆ. ಪಾನ ನಿರೋಧ ಯಾರಿಗೂ ಬೇಕಾಗಿಲ್ಲ. ಮೊದಲು ಒಂದು ತಾಲ್ಲೂಕಿನಲ್ಲಿ ಪಾನ ನಿರೋಧ ಜಾರಿಯಲ್ಲಿ ಇತ್ತು. ಈಗ ಆ ತಾಲ್ಲೂಕಿಗೂ ಲೈಸನ್ಸ್‌ಗಳನ್ನು ಕೊಡುವುದನ್ನು ವಿಸ್ತರಿಸಿದ್ದಾರೆ.

**ಶ್ರೀ ಕೆ.ಹೆಚ್. ಶ್ರೀನಿವಾಸ್:–** ಈಗ ಜಮಖಂಡಿ ತಾಲ್ಲೂಕಿನಲ್ಲಿ ಪಾನ ನಿರೋಧ ಕಾನೂನನ್ನು ಇಟ್ಟಿದ್ದಾರೆ. ಆದರೆ, ಈ ಕಾನೂನನ್ನು ರಿಲ್ಯಾಕ್ಸ್ ಸಡಿಲ ಮಾಡಿದ್ದಾರೆ. ತಾಂತ್ರಿಕವಾಗಿ ಅಲ್ಲಿ ಪಾನ ನಿರೋಧ ಜಾರಿಯಲ್ಲಿ ಇಟ್ಟಿದ್ದಾರೆ. ಪಾನ ನಿರೋಧ ಕಾನೂನು ಇದೆ. ಆದರೆ, ಅದರ ಅಡಿಯಲ್ಲಿ ಎಲ್ಲಾ ರಿಲ್ಯಾಕ್ಸ್ ಮಾಡಿದ್ದಾರೆ.

**ಶ್ರೀ ಬಿ. ಬಸವಲಿಂಗಪ್ಪ:–** ಹಿಂದೆ ಕಾಂಗ್ರೆಸ್ ಸರ್ಕಾರ ಇತ್ತು, ಇವೊತ್ತು ಜನತಾ ಸರ್ಕಾರ ಇದೆ ಎಂದು ನಾನು ಹೇಳುತ್ತಿಲ್ಲ. ಕಾಂಗ್ರೆಸ್ ಸರ್ಕಾರದವರು ಸ್ವಾತಂತ್ರ್ಯ ಹೋರಾಟ ಪೂರ್ವದಲ್ಲಿ ಪಾನ ನಿರೋಧವನ್ನು ಜಾರಿಗೆ ತರಬೇಕೆಂದು ಒತ್ತಾಯ ಮಾಡಿದ್ದರು. ಈ ವಿಷಯ ತಮಗೂ ಗೊತ್ತಿದೆ. ಕಾಂಗ್ರೆಸ್ ಸರ್ಕಾರವು ಪಾನ ನಿರೋಧವನ್ನು ರಾಷ್ಟ್ರದಲ್ಲಿ ಜಾರಿಗೆ ತರಬೇಕೆಂದು ಮಾಡಿದ್ದರು. ಆದರೆ, ಪೂರ್ಣವಾಗಿ ಪಾನ ನಿರೋಧವನ್ನು ರಾಷ್ಟ್ರದಲ್ಲಿ ತರಲಿಕ್ಕೆ ಆಗಲಿಲ್ಲ. ಸರ್ಕಾರಕ್ಕೆ ಹಣ ಬೇಕಾದ ಉದ್ದೇಶ ಇದ್ದುದರಿಂದ ಪಾನ ನಿರೋಧ ಜಾರಿಗೆ ತರುವುದಕ್ಕಾಗಲಿಲ್ಲ. ಕಾಂಗ್ರೆಸ್ ಸರ್ಕಾರ ಇದ್ದಾಗ ಎಷ್ಟು ಬ್ರಾಂದಿ ಶಾಪ್‌ಗಳನ್ನು ತೆರೆದರೋ ಅದಕ್ಕಿಂತ ಹೆಚ್ಚು ಬ್ರಾಂದಿ ಶಾಪ್‌ಗಳನ್ನು ಇವರು ತೆರೆದಿದ್ದಾರೆಂದು ಅಂಕಿ ಅಂಶಗಳನ್ನು ನೋಡಿದರೆ ಗೊತ್ತಾಗುತ್ತದೆ. ಕಾಂಗ್ರೆಸ್ ಸರ್ಕಾರ ಇಷ್ಟೊಂದು ಪ್ರಮಾಣದಲ್ಲಿ ಶಾಪ್‌ಗಳನ್ನು ಮಾಡುವುದಕ್ಕೆ ಹೋಗಲಿಲ್ಲ. ಕಾಂಗ್ರೆಸ್ ಸರ್ಕಾರದವರು ಎಷ್ಟು ಮಿತಿಯಲ್ಲಿ ಬ್ರಾಂದಿ ಶಾಪ್‌ಗಳನ್ನು ತೆರೆಯಬೇಕಾಗಿತ್ತೋ ಆ ಮಿತಿಯಲ್ಲಿ ಮಾತ್ರ ತೆರೆಯಲಾಗಿತ್ತು. ಆದಾಯದ ಮೇಲೆ ಕಣ್ಣಿಟ್ಟು ಕಾಂಗ್ರೆಸ್ ಸರ್ಕಾರದವರು ಕೆಲಸ ಮಾಡಲಿಲ್ಲ. ಜನತಾ ಸರ್ಕಾರ ಆಡಳಿತಕ್ಕೆ ಬಂದ ಮೇಲೆ ಪ್ರತಿಯೊಂದು ಹಳ್ಳಿಗಳಲ್ಲೂ ಬ್ರಾಂದಿ ಶಾಪ್‌ಗಳು ಆಗಿವೆ. ಬೆಂಗಳೂರು ನಗರ ಒಂದರಲ್ಲೇ 1 ಸಾವಿರ ಬ್ರಾಂದಿ ಅಂಗಡಿಗಳು ಇವೆ. ಈ ಅಂಗಡಿ ಹೆಂಡದ ಅಂಗಡಿ ಮತ್ತು ಸಾರಾಯಿ ಅಂಗಡಿಗಳು ಬೇರೆ

ಇವೆ. ಹಳ್ಳಿಗಳ ಮಟ್ಟದಲ್ಲೂ ಬ್ರಾಂದಿ ಅಂಗಡಿಗಳೂ ಇಲ್ಲದೆ ಇಲ್ಲ. ತಾಲ್ಲೂಕು ಮಟ್ಟದಲ್ಲಿ ಈ ಹಿಂದೆ 10 ಬ್ರಾಂದಿ ಅಂಗಡಿ ಇದ್ದರೆ, ಈಗ 100 ಅಂಗಡಿಗಳು ಇರುತ್ತವೆ. ಹೋಬಳಿ ಹೆಡ್ ಕ್ವಾರ್ಟರ್‌ನಲ್ಲಿ ಮೊದಲು ಅಥವಾ ಐದು ಬ್ರಾಂದಿ ಅಂಗಡಿಗಳು ಇದ್ದರೆ, ಈಗ ಹತ್ತು ಅಥವಾ ಹದಿನೈದು ಬ್ರಾಂದಿ ಅಂಗಡಿ ಇವೆ.

ಶ್ರೀ ಬಿ. ರಾಚಯ್ಯ:– ನಾನು ಮಂತ್ರಿ ಆಗಿಲ್ಲದಿದ್ದಾಗ ಮಾನ್ಯ ಬಸವಲಿಂಗಪ್ಪನವರು ಮಾನ್ಯ ಮಲ್ಲಿಕಾರ್ಜುನ ಖರ್ಗೆಯವರು ಗುಂಡೂರಾಯರ ಮಂತ್ರಿಮಂಡಲದಲ್ಲಿ ಸಚಿವರು ಅವರೇ ಪಾನ ನಿರೋಧವನ್ನು ಜಾರಿಗೆ ತರಬಹುದಾಗಿತ್ತು, ಮಾನ್ಯ ಅರಸುರವರ ಕಾಲದಲ್ಲಿ ಪಾನ ನಿರೋಧದ ಕೆಲಸವನ್ನು ಮಾಡಲಿಲ್ಲ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:– ಅವರ ಕಾಲದಲ್ಲಿ ಮಾಡಿಲ್ಲ. ಇವರ ಕಾಲದಲ್ಲಿ ಮಾಡಿಲ್ಲ ಎಂದು ಹೇಳುವುದು ಸರಿಯಲ್ಲ. ನಮ್ಮ ಕಾಲದಲ್ಲಿ ನಾವು ಏನು ಮಾಡಿದ್ದೆವು, ನಿಮ್ಮ ಕಾಲದಲ್ಲಿ ಮಾಡಿದ್ದೀರಿ ಎನ್ನುವ ಬಗ್ಗೆ ಒಂದು ವೈಟ್ ಪೇಪರ್‌ವನ್ನು ಬೇಕಾದರೆ ಪಬ್ಲಿಕ್ ಮಾಡಿ ಸುಮ್ಮನೆ ಇಲ್ಲಿ ವಾದ ಮಾಡುವುದು ಬೇಡ.

ಶ್ರೀ ಬಿ. ರಾಚಯ್ಯ:– ಕುಡಿಯಬೇಡಿರಿ ಎಂದು ಬಾಯ್–ಕಾಟ್ ಮಾಡಿದರೆ ನನ್ನ ಅಭ್ಯಂತರವಿಲ್ಲ. ಆದರೆ, ನೀವು ಇದ್ದಾಗ ಏನು ಮಾಡಿದಿರಿ ಎಂದು ಕೇಳಿದೆ ಅಷ್ಟೇ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:– ನಾವು ಆ ಕಡೆ ಕುಳಿತರೆ ಹಾಗೆಯೇ ಹೇಳುವುದಿಲ್ಲ.

ಶ್ರೀ ಬಿ. ಬಸವಲಿಂಗಪ್ಪ:– ಮಾನ್ಯ ರಾಚಯ್ಯನವರಿಗೆ ಯಾವ ಕಡೆ ಚುಚ್ಚುತ್ತಿದೆ ಕಾಣುತ್ತಿಲ್ಲ. ತಾವು ಕುಡಿಯುವುದಿಲ್ಲ. ನೀವು ಏಕೆ ಇದರ ಬಗ್ಗೆ ಮಾತನಾಡುತ್ತೀರಿ? ಕುಡಿದು ಅಭ್ಯಾಸ ಇದ್ದವರು ಮಾತನಾಡಲಿ. ಇವತ್ತು ಏನಾಗಿದೆ ಎಂದರೆ, ಮಾನ್ಯ ಮಂತ್ರಿಗಳಾದ ಶ್ರೀ ಜಿ.ಹೆಚ್. ಪಟೇಲರು ಬಂದರು, ಅವರು ಇದರ ಮೇಲೆ ಮಾತನಾಡುವುದಕ್ಕೆ ಸರ್ವ ಅಧಿಕಾರ ಅವರು ಮಾತನಾಡಲೇ ಬೇಕು. ಅದಕ್ಕೆ ಕಾರಣ ಬೇಡ.

**ಶ್ರೀ ಬಿ. ಬಸವಲಿಂಗಪ್ಪ:–** ಈಗ ಮಾನ್ಯ ಜೆ.ಹೆಚ್. ಪಟೇಲ್‌ರವರು ಬರುತ್ತಾ ಇರುವ ಮಾನ್ಯ ಮಂತ್ರಿಗಳವರಿಗೆ ಇದರ ಮೇಲೆ ಮಾತನಾಡಲಿಕ್ಕೆ ಸರ್ವ ಅಧಿಕಾರ ಉಂಟು. ಹಕ್ಕೂ ಮಾಡುವ ಅವರು ಮಾತನಾಡಲೇ ಬೇಕು, ಮಾತನಾಡುತ್ತಾರೆ. ಆದರೆ ಅದು ಏಕೆ ಎಂದು ಕಾರಣ ಕೇಳಿ ನಿಮಗೂ ಗೊತ್ತು. ಅವರಿಗೂ ಗೊತ್ತು.

**ಶ್ರೀ ಬಿ. ರಾಚಯ್ಯ:–** ಹಾಗಾದರೆ ನಾನು ಹೋಗುತ್ತೇನೆ...

**ಶ್ರೀ ಬಿ. ಬಸವಲಿಂಗಪ್ಪ:–** ಇಲ್ಲ ಸ್ವಾಮಿ, ತಾವು ಕುಳಿತುಕೊಳ್ಳಬೇಕು. ಬರೇ ಲಾಭ ಆದಾಯಕ್ಕಾಗಿ ಈ ಅಬಕಾರಿ ಇಲಾಖೆ ಏನಿದೆ, ಅದಕ್ಕೆ ಇಲ್ಲದ ಕೆಲಸ ಜಾಸ್ತಿ ಕೊಟ್ಟಿದ್ದೀರಿ. ಅದು ಕಾನೂನು ವಿಪರೀತ ಮಾಡಿದ್ದೀರಿ. ಮತ್ತೆ ಎರಡು ಮೂರು ವರ್ಷಗಳಿಂದ ಈ ಮಾತನ್ನು ಹೇಳಿದ ಮಾನ್ಯ ಬಂಗಾರಪ್ಪನವರು ಇರಬೇಕಾಗಿತ್ತು. ಅವರು ಕುಡಿಯದೇ ಹೋದರೂ ಕೂಡ ಈ ವಿಷಯದಲ್ಲಿ ಅವರು ಪ್ರವೀಣರಿದ್ದಾರೆ. ಹಾಗೆಯೇ ಮಾನ್ಯ ಜಾಲಪ್ಪನವರೂ ಕೂಡ ಅಷ್ಟೇ ಪ್ರವೀಣರು.

**ಶ್ರೀ ಆರ್.ಎಲ್. ಜಾಲಪ್ಪ:–** ಏನು ಸ್ವಾಮಿ? ನಾನು ಅದರಲ್ಲಿ ಪ್ರವೀಣ ಎಂದು ನಿಮಗೆ ಹೇಗೆ ಗೊತ್ತು?

**ಶ್ರೀ ಬಿ. ಬಸವಲಿಂಗಪ್ಪ:–** ಇದನ್ನೆಲ್ಲಾ ಇಲ್ಲಿ ಹೇಳುವುದು ಬೇಡ....

**ಶ್ರೀ ಕೆ.ಹೆಚ್. ಶ್ರೀನಿವಾಸ್:–** ಮಾನ್ಯ ಜಾಲಪ್ಪನವರು ಮಂತ್ರಿಪದವಿಗೆ ರಾಜೀನಾಮೆ ಕೊಟ್ಟು ವ್ಯಾಪರ ಮಾಡುತ್ತೇನೆ ಎಂದು ಹೇಳುತ್ತಾ ಇದ್ದರು.

**ಶ್ರೀ ಬಿ. ಬಸವಲಿಂಗಪ್ಪ:–** ಆದಾಯಕ್ಕಾಗಿ ಬ್ರಾಂದಿ, ಶೇಂದಿ, ಸಾರಾಯಿ ಎಂದು ಸಾವಿರ ಸಂಖ್ಯೆಯಲ್ಲಿ ಅಂಗಡಿಗಳಿಗೆ ಲೈಸೆನ್ಸನ್ನು ಕೊಟ್ಟಿದ್ದೀರಿ ಚುನಾವಣೆ ಬಂತೆಂದರೆ ಹಳ್ಳಿಗಳಲ್ಲಿ ಕೂಡ ಕುಡಿಯದೇ ಇರತಕ್ಕಂಥ ರಾಜಕಾರಣಿಗಳೇ ಇಲ್ಲ. ಎಲ್ಲರೂ ಕುಡಿಯುತ್ತಾರೆ.

**ಶ್ರೀ ಬಿ.ಜಿ. ಕೊಟ್ರಪ್ಪ:–** ಹಾಗೆ ಕುಡಿಯುವ ಚಟ ಇದ್ದವರಿಗೆ, ಕುಡಿಯಲು ದೂರ ಹೋಗುವುದು ಬೇಡ ಎಂದು ಅಲ್ಲಲ್ಲಿ ಹತ್ತಿರವೇ ಅಂಗಡಿಗಳನ್ನು ಮಾಡಿದ್ದೇವೆ.

**ಶ್ರೀ ಬಿ. ಬಸವಲಿಂಗಪ್ಪ:–** ಚುನಾವಣೆಯ ಸಂದರ್ಭಗಳಲ್ಲಿ, ಅದು ಸಣ್ಣ ಚುನಾವಣೆಯೇ ಆಗಲಿ ದೊಡ್ಡ ಚುನಾವಣೆಯೇ ಆಗಲಿ, ಅಲ್ಲಿಯೂ ಇದೇ ಕೆಲಸ. ಲಾರಿಗಳಲ್ಲಿ ಬ್ರಾಂದಿಗಳನ್ನು ಸಾರಾಯಿಯನ್ನು ತುಂಬಿಸಿಕೊಂಡು ಹೋಗಿ ಕೊಟ್ಟಿರುವುದನ್ನು ನಾನು ನೋಡಿದ್ದೇನೆ. ಚುನಾವಣೆಯಲ್ಲಿ ನಾವುಗಳು ರಾಜಕೀಯ ಧ್ಯೇಯ ಧೋರಣೆಗಳ ಬಗ್ಗೆ ವಿಶ್ವಾಸ ಇಟ್ಟುಕೊಂಡಿದ್ದೇವೆ. ಹಾಗೆಯೇ ಅದನ್ನು ನಾವು ಸಾರ್ವಜನಿಕವಾಗಿ ವ್ಯಕ್ತಪಡಿಸುತ್ತಾ ಇದ್ದೇವೆ. ಆದರೆ ಯಾರೂ ಹಾಗೆ ಮಾಡಿಕೊಳ್ಳುತ್ತಾ ಇಲ್ಲ. ಈವೊತ್ತಿನ ದಿವಸ ಕುಡಿಯದೇ ಇರತಕ್ಕಂಥವರನ್ನು ನಾವು ಹುಡುಕಿಕೊಂಡು ಹೋಗಬೇಕಾಗಿದೆ. ಎಲ್ಲವೂ ಸರಕಾರಿ ದುಡ್ಡಿನಲ್ಲಿಯೇ ಹೊರತು ಅವರವರ ಸ್ವಂತ ದುಡ್ಡಿನಲ್ಲಿ ಕುಡಿಯುವುದಿಲ್ಲ.

ಇಂಥ ಸಂದರ್ಭದಲ್ಲಿ ನಮ್ಮ ರಾಜಕೀಯ ಜೀವನ ಶುದ್ಧವಾಗಿರಬೇಕು. ನಮ್ಮ ನಡೆನುಡಿಗಳು ಜನಗಳಿಗೆ ಮಾದರಿಯಾಗಿರುವಂತೆ ನಾವು ಜೀವನ ಮಾಡಬೇಕು. ಆದುದರಿಂದ ರಾಜಕಾರಣಿಗಳು, ಹೊಸ ಪಕ್ಷ ಅಧಿಕಾರಕ್ಕೆ ಬರುತ್ತದೋ ಅಂತಹವರು ಒಳ್ಳೆಯ ಧ್ಯೇಯಧೋರಣೆಗಳನ್ನು ಅನುಷ್ಠಾನಕ್ಕೆ ತರಬೇಕು.

ಜನತಾ ಪಕ್ಷದವರು 1977ನೇ ಇಸವಿಯಲ್ಲಿ ಮಹಾತ್ಮಾಗಾಂಧೀಜಿಯವರ ಸಮಾಧಿಗೆ ಹೋಗಿ ಕಟ್ಟೆಯನ್ನು ಮುಟ್ಟಿ, ಬಡಿದು, "ನಾವು ಹೇಳುವುದನ್ನು ಜಾರಿಗೆ ಕೊಡುತ್ತೇವೆ" ಎಂದು ಶಪಥ ತೆಗೆದುಕೊಂಡರು. ಆದರೆ ಅವರು ಕೃತಿಯಲ್ಲಿ ಬೇರೆಯದನ್ನೇ ಮಾಡಿದರು. ನನಗನ್ನಿಸುತ್ತದೆ. ಎಲ್ಲಾ ರಾಜಕಾರಣಿಗಳು ಅಧಿಕಾರಕ್ಕೆ ಬರುವುದಕ್ಕೆ ಮುಂಚಿತವಾಗಿ. ಎಲ್ಲರೂ ಆಕಾಶದಿಂದ ತತ್ವಗಳನ್ನು ಹೇಳುತ್ತಾರೆ. ಹಾಗೆ ಮಾಡುತ್ತೇವೆ ಹೀಗೆ ಮಾಡುತ್ತೇವೆ ಎಂದೆಲ್ಲಾ ಹೇಳುತ್ತಾರೆ ಅಧಿಕಾರಕ್ಕೆ ಬಂದ ನಂತರ ಎಲ್ಲವನ್ನೂ ಮರೆತುಬಿಡುತ್ತಾರೆ. ಹೀಗೆಯೇ ಜನತಾ ಪಕ್ಷದವರು ಮಾಡಿದರು. ಇವರೂ ಕೂಡ ಮಹಾತ್ಮಾಗಾಂಧೀಜಿಯವರು ಹೇಳಿದ್ದನ್ನು ಜಾರಿಗೆ ತರುತ್ತೇವೆ ಎಂದು ಒಂದು ನೀತಿಯನ್ನು ಇಟ್ಟುಕೊಂಡಿದ್ದೇವೆ ಎಂದು ಹೇಳಿದ್ದಾರೆ. ಹಾಗಾದರೆ ಮಹಾತ್ಮಾಜೀಯವರು ಬ್ರಾಂದಿ, ವಿಸ್ಕೀ, ಸಾರಾಯಿ, ಶಾಪ್‌ಗಳನ್ನು ಬೇಕಾದಷ್ಟು ಓಪನ್ ಮಾಡಿ ಎಂದು ಹೇಳಿದ್ದಾರೆಯೇ? ಎಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ನೀವು ಇಂದು ಶಾಪ್‌ಗಳನ್ನು ಪ್ರಾರಂಭ ಮಾಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದೀರಿ? ಎಲ್ಲಿ ನೋಡಿದರೂ ವೈನ್‌ಶಾಪ್‌ಗಳೇ ತುಂಬಿವೆ? ಇದು ಸರಕಾರದ ರೀತಿಯೇ?

ಕೊನೆಗೆ ಏನು ಮಾಡಬೇಕೆಂದಿದ್ದೀರಿ, ಇದನ್ನು ದ್ವಿಗುಣ ಮಾಡುತ್ತೀರಾ ಈಗ 2000 ಇದೆ ಸಿಟಿಯಲ್ಲಿ ಅದನ್ನು 4,000ಕ್ಕೆ ಏರಿಸುತ್ತೀರಾ? ನಮ್ಮಲ್ಲಿ ಅನೇಕರು ಕೂಲಿಗಾರರಿದ್ದಾರೆ. ಬಡವರಿದ್ದಾರೆ ಅವರು ಕಷ್ಟಪಟ್ಟು ಬೆವರು ಸುರಿಸಿ ಜೀವನ ಮಾಡುತ್ತಿದ್ದಾರೆ ಅಂತಹವರ ಹಣವನ್ನು ದೋಚಿಕೊಳ್ಳುವುದಕ್ಕೋಸ್ಕರ ಇನ್ನೂ ಎಷ್ಟು ಶಾಪ್‌ಗಳನ್ನು ಓಪನ್ ಮಾಡುತ್ತೀರಿ. ಸಾಹುಕಾರರು ಕುಡಿದುಕೊಂಡು ಹೋಗಲಿ ಬೇಡವೆಂದು ಹೇಳುವುದಿಲ್ಲ ಆದರೆ ಬಡವನು ಉದ್ದಿಮೆ ಮಾಡಿ, ಕೈ ಕಸುಬಿನಿಂದ ಶ್ರಮದಿಂದ ತರತಕ್ಕಂತಹ ಹಣವನ್ನು ಕಸಿದುಕೊಳ್ಳತಕ್ಕಂತಹ ಪ್ರವೃತ್ತಿ ಇವತ್ತಲ್ಲಾ ಸಾವಿರಾರು ವರ್ಷಗಳಿಂದ ಇದೆ. ಇವತ್ತು ಅದನ್ನು ಜಾಸ್ತಿ ಏಕೆ ಮಾಡಿದ್ದೀರಿ ಎಂದು ಕೇಳುತ್ತಿದ್ದೇನೆ. ಆಯಿತು ಮತ್ತೆ ಜಾಸ್ತಿ ಮಾಡಿದ್ದೀರಿ ಆದ್ದರಿಂದ ಆದಾಯ ಪಡೆದುಕೊಳ್ಳುತ್ತಿದ್ದೀರಿ ಅದರ ಮೇಲೆಯೇ ಸರಕಾರವನ್ನು ನಡೆಸಿಕೊಳ್ಳಲಿ, ಅದು ಬೇರೆ ವಿಚಾರ. ಪಾನನಿರೋಧ ಅನ್ನತಕ್ಕಂತಹ ಕಾರ್ಯಕ್ರಮವನ್ನು ನಿಮ್ಮ ಸರಕಾರದಲ್ಲಿ ಏಕೆ ಇಟ್ಟುಕೊಂಡಿದ್ದೀರಿ? ಮಾನ್ಯ ಕೆ.ಹೆಚ್. ಶ್ರೀನಿವಾಸ್‌ರವರು ಇದರ ಬಗ್ಗೆ ಬಹಳ ಚೆನ್ನಾಗಿ ಭಾಷಣ ಮಾಡಿದರು. ಇವತ್ತಿನ ದಿವಸ ನಾನು ಮಾತನಾಡಬಾರದೆಂದು ಇದ್ದೆ ತಮ್ಮ ಆದೇಶದ ಮೇಲೆ ಇವತ್ತು ನಾನು ಮಾತನಾಡುತ್ತಿದ್ದೇನೆ. ಅವರು ಏಕೆ ಮಾತನಾಡಿದರು ನನಗೆ ಅರ್ಥವಾಗಲಿಲ್ಲ ಅವರ ಉದ್ದೇಶ ಏನು ಎಂದು ನನಗೆ ಗೊತ್ತಿಲ್ಲ. ಹೈಪವರ್ ಕಮಿಟಿ ಮಾಡಿ ಜಾಸ್ತಿ ಶಾಪ್‌ಗಳನ್ನು ಓಪನ್ ಮಾಡಬೇಕೆಂಬ ಉದ್ದೇಶ ಇದೆಯೋ ಏನೋ ಗೊತ್ತಾಗಲಿಲ್ಲ.

**Sri K.H. Srinivas:-** ಕಾಂಗ್ರೆಸ್, ಜನತಾ ಎಲ್ಲಾ ಒಂದು ಕಡೆಗೆ ಇದಕ್ಕೆ .... ಗಾಂಧಿಯವರು ಪ್ರಾಹಿಬಿಷನ್ ಮಾಡಬೇಕೆಂದು ಹೇಳಿದರು ಅದರ ಕಾರ್ಯ ಸಾಧ್ಯವಿಲ್ಲವೆಂದು ಭಾವಿಸಿ ಯಾವುದೋ ಒಂದು ದಾರಿಯಲ್ಲಿ ಹೋಗಿದ್ದೇವೆ ಆ ದಾರಿಯಲ್ಲಿ ಹೋಗುವುದಕ್ಕೆ ಇನ್ನೂ ಯಾವುದಾದರೂ ಇರಬಹುದು ಆ ದಾರಿಯಲ್ಲಿ ತುಂಬಾ ಮುಂದಕ್ಕೆ ಹೋಗಿದ್ದೇವೆ. ಎಂದು ಸರಕಾರಕ್ಕೂ ಕೂಡ ಇದರಿಂದ Major source of income. It has get the interest in the increased income from the Department of exise ಜನರಿಗೆ ಕುಡಿಸುತ್ತಿರುವವರು. ಡಬಲ್ ಡಿಸ್ಟಿಲ್ಡ್ ಆಲ್ಕೋಹಾಲ್ ಇದೆ ಇನ್ನೊಂದು ಯಾವ ಮರದಿಂದ ಸ್ವಲ್ಪವನ್ನು ತೆಗೆದುಕೊಂಡು ಉಳಿದಿದ್ದಕ್ಕೆ ನೀರು ಕ್ಲೋರಲ್ ಹೈಡ್ರೈಟ್ ಹಾಕಿ ತುಂಬಿಸಿ ಯಾರ ಮೂಲಕ ಆಪರೇಟ್

ಮಾಡುತ್ತಿದ್ದೇವೆಂದರೆ ದೊಡ್ಡ ದೊಡ್ಡ ಕಂಟ್ರಾಕ್ಟರ್ ಕೊಡಿಸುತ್ತಿದ್ದೇವೆ. ಅಂದರೆ ಅವರಿಗೆ ಕುಡಿಸುವ ಗುತ್ತಿಗೆಯನ್ನು ಕೊಡುತ್ತಿದ್ದೇವೆ. ಕುಡಿಸುವ ಮೂಲಕ ಆದಾಯ ಕೆಲಸವನ್ನು ಮಾಡುತ್ತಿದ್ದಾರೆ. ಜಾಸ್ತಿ ಜಾಸ್ತಿ ಕುಡಿಸಬೇಕೆ. ಆಲ್ಟರೇಷನ್ ಮಾಡಬೇಕು ಅದರಿಂದ ನಮಗೆ ಆದಾಯ ಹೆಚ್ಚಾಗಬೇಕು? 13 ಕೋಟಿ ರೂಪಾಯಿ ಇನ್‌ಕಂ 272 ಕೋಟಿ ರೂಪಾಯಿ ಬರುತ್ತದೆ ಎಕ್ಸೈಸ್ ಕಂಟ್ರಾಕ್ಟರ್ಸ್‌ಗೆ 50.60 ಕೋಟಿ ರೂಪಾಯಿ ಇನ್ನೂ ಉಳಿದದ್ದು ಸರಕಾರಕ್ಕೆ ಸೇರುತ್ತದೆ. ಬೇರೆ ಯಾವ ಅರಿಕೆಯಲ್ಲಿಯೂ ಎಷ್ಟು ಪ್ರಾಫಿಟ್ ಇಲ್ಲ ಇದರಲ್ಲಿ ಮಾತ್ರ 400 ಪರ್ಸೆಂಟ್ ಪ್ರಾಫಿಟ್ ಇದೆ. ಇದು ಕೊನೆಗೆ ಎಲ್ಲಿಗೆ ಮುಟ್ಟುತ್ತದೆಂದರೆ ರಾಜ ಕಾರಣ ಮನೆಗೆ ಹೊಗುತ್ತದೆ, ನಮ್ಮ ಸಮಾಜವೂ ಮನೆಗೆ ಹೋಗಲ್ಲ ಸಮಾಜ ಕಲ್ಯಾಣ ಇಲಾಖೆ ಇನ್ನಿತರ ಇಲಾಖೆಗಳು ಮನೆಗೆ ಹೋಗುತ್ತದೆ. ಉದಾಹರಣೆಗೆ ಹೇಳುವುದಾದರೆ ರಷ್ಯದಲ್ಲಿ ಒಂದು ಎಕ್ಸ್‌ಪಿರಿಮೆಂಟ್ ಇದೆ ಖಾಸಗಿ ಸಂಸ್ಥೆಗಳನ್ನು ನಿಯಂತ್ರಣ ಮಾಡುತ್ತಿದ್ದಾರೆ ಈ ಪಾನ ನಿಯಂತ್ರಣವನ್ನು ತರುವುದಕ್ಕೆ ಕಾನೂನನ್ನು ಮಾಡಿದ್ದಾರೆ ಅವನು ........ ಬಾಟಲ್ ತೆಗೆದುಕೊಳ್ಳಬೇಕಾಗದರೆ ಇಷ್ಟು ಆಹಾರವನ್ನು ಕೊಂಡುಕೊಳ್ಳಬೇಕು ಅದು ಇಲ್ಲದೆ ಹೋದರೆ ಬಾಟಲ್‌ನ್ನು ಕೊಡುವುದೇ ಇಲ್ಲಾ ಚೈನಾದೇಶದಲ್ಲಿ ಫ್ರಾನ್ಸ್ ದೇಶದಲ್ಲಿ ಬೇರೆ ದೇಶದಲ್ಲಿ. ಆ ಪರಿಸ್ಥಿತಿ ಇವತ್ತು ಬಂದಿದೆ. ಅವರನ್ನು ನೋಡಿಯಾದರೂ ನಾವು ಕಲಿತುಕೊಳ್ಳದೆ ಹೋದರೆ ಆ ಸ್ಥಿತಿಗೆ ಹೋದಾಗ ಕೊನೆಗೆ ನಮ್ಮನ್ನು ರಿಪೇರಿ ಮಾಡುವುದಕ್ಕೆ ಸಾಧ್ಯವಿಲ್ಲದೇ ಇರತಕ್ಕಂಥ ಪರಿಸ್ಥಿತಿ ಬರುತ್ತದೆ. ಲಂಬಾಣಿ ತಂಡದ ಮಧ್ಯದಲ್ಲಿ ಕೂಡ ಹೆಂಡದ ಅಂಗಡಿ ಇಟ್ಟಿದ್ದಾರೆ ಅದನ್ನು ತಪ್ಪಿಸುವುದಕ್ಕೆ ಸಾಧ್ಯವಿಲ್ಲ. Contractor has direct rapport with ... Government ಸಂಪುಟ ದರ್ಜೆ ಸಚಿವರೆಲ್ಲ ಡೈರೆಕ್ಟ್ ಮಾನ್ಯ ಮುಖ್ಯ ಮಂತ್ರಿಗಳ ಆದೇಶವನ್ನು ಅದನ್ನು ತೆಗೆಸುವುದಕ್ಕಾಗುವುದಿಲ್ಲ. ನಮ್ಮ ಊರಿನಲ್ಲಿ ಒಂದು ರೆಸಲ್ಯೂಷನ್ ಪಾಸ್ ಮಾಡಿ ಹೆಂಡದ ಅಂಗಡಿ ಬೇಡ ಎಂದು. ಇಷ್ಟೆಲ್ಲಾ ಹೇಳಿದರೂ ಕೂಡ ಕಡ್ಡಾಯವಾಗಿ ಅಲ್ಲಿ ಅಂಗಡಿಯನ್ನು ಹಾಕಿಸುತ್ತಾರೆ. It is a state promotion of drinking compulsory ಕುಡಿಯ ಬೇಕು ನಮ್ಮ ಪಾಲಿಸಿ ಕೊನೆಗೆ ಅಲ್ಲಿಗೆ ಹೋಗಿ ಮುಟ್ಟುತ್ತದೆ. ಇದನ್ನು ಏನು ಮಾಡಬೇಕು ಎಂಬುದರ ಬಗ್ಗೆ ಭಾಷಣ ಮಾಡುವುದರ ಬದಲು ಸರಿಯಾದಂತಹ ತಜ್ಞರು ಇರುವಂತಹ ಮತ್ತು ಪರಿಸ್ಥಿತಿಯನ್ನು ತಿಳಿದುಕೊಂಡಿರತಕ್ಕಂತಹ ವಿಧಾನ ಮಂಡಲದ ಸದಸ್ಯರೂ ಕೂಡ ಸೇರಿದಂತಹ ಒಂದು ಸಮಿತಿಯನ್ನು ಮಾಡಿ

ಅದು ಇದರ ಬಗ್ಗೆ ಚರ್ಚೆ ಮಾಡಿ ಅಧ್ಯಯನ ಮಾಡಲೀ, ಇದೇ ಒಂದು ರಾಷ್ಟ್ರದ ಪ್ರಶ್ನೆ ಇದೆ ಇಡೀ ರಾಷ್ಟ್ರಕ್ಕೆ ಇದು ಮಾದರಿಯಾಗುತ್ತದೆ. ಹೆಂಡದ ಅಂಗಡಿ ಮಾಡತಕ್ಕಂಥಾದ್ದು ಅನಿವಾರ್ಯವಾದರೆ, ಕುಡಿಯುವುದು ಅನಿವಾರ್ಯವಾದರೆ ಅದಕ್ಕೆ ಏನು ಇರಬೇಕೆ ಹಾಗೂ ಅದು ಅನಿವಾರ್ಯವಲ್ಲವೆಂದಾದರೆ ಅದನ್ನು ತೆಗೆದುಹಾಕುವುದಕ್ಕೆ ಏನು ಮಾಡಬೇಕು ಎಂಬುದನ್ನು ಅದರಲ್ಲಿ ಪರಿಶೀಲನೆ ಮಾಡಬೇಕು.

**ಶ್ರೀ ಬಿ. ಬಸವಲಿಂಗಪ್ಪ:–** ಮಾನ್ಯ ಸದಸ್ಯರು ಬಹಳ ಚೆನ್ನಾಗಿ ವಿವರಣೆಯನ್ನು ಕೊಟ್ಟಿದ್ದಾರೆ ನನ್ನದು ಅದೇ ಅಭಿಪ್ರಾಯ. ನಾನು ನನ್ನ ಭಾಷೆಯಲ್ಲಿ ಹೇಳಿದೆ. ನೀವು ಹೇಳುವುದು ಉದಾತ್ತವಾಗಿದೆ. ತಕ್ಕಂಥ ಧ್ಯೇಯ ಆದರೆ ಈಗ ನಡೆಯುತ್ತಿರುವುದು ಏನು? ನಾಳೆ ಆಗುವುದು ಏನು? ಇವತ್ತು ನಡೆಯುವುದು ದಿನೇ ದಿನೇ ಜಾಸ್ತಿಯಾಗುತ್ತಿದೆ, ನಾಳೆ ಇದಕ್ಕಿಂತ ಜಾಸ್ತಿಯಾಗುತ್ತದೆ ಎಂಬ ಸಂಬಂಧ ಇದೆ. ಅದಕ್ಕೆ ನಾನು ಹೇಳಿದ್ದು ಇಂಥ ಒಂದು ನಿರ್ಣಯದ ಉದ್ದೇಶ ಸಾರ್ಥಕವಾಗುವುದಿಲ್ಲ ಎಂದು 1983ನೇ ಇಸವಿಯಲ್ಲಿ ಆಯವ್ಯಯದ ಮೇಲೆ ಭಾಷಣ ಮಾಡುತ್ತಾ ಶ್ರೀಮಾನ್ ರಾಮಕೃಷ್ಣಹೆಗಡೆ ಅವರು ಒಂದು ವಾಕ್ಯವನ್ನು ಹೇಳಿದರು, ಅದನ್ನು ತಮ್ಮ ಗಮನಕ್ಕೆ ತರುತ್ತೇನೆ. ಕೋ–ಆಪರೇಟಿವ್ ಆಕ್ಟ್ ನಮ್ಮ ಕರ್ನಾಟಕ ರಾಜ್ಯದಲ್ಲಿ ಇದ್ದಾವಲ್ಲಾ, ಅವರು ಈ ಹೆಂಡವನ್ನು, ಬ್ರಾಂದಿಯನ್ನು, ವಿಸ್ಕಿಯನ್ನು ಸರಾಯಿಯನ್ನು ಮಾರಬೇಕು ಎಂದು ಅವರು ಭಾಷಣದಲ್ಲಿ ಹೇಳಿದ್ದಾರೆ. ಕಾರಣ ಏನು ಎಂದು ಹೇಳಿದರೆ ನಿಯಮಿತವಾಗಿ ಕೆಲವೇ ಜನಗಳಿಗೆ ಸಿಗುತ್ತದೆ, ಅವರ ಮುಖಾಂತರ ಬೇರೆಯವರಿಗೆ ಅನ್ಯಾಯ ಆಗಬಹುದು ಎಂದು. ಅದನ್ನು ನಾವೆಲ್ಲಾ ವಿರೋಧ ಮಾಡಿದೆವು. ಅದನ್ನು ಜಾರಿಗೆ ಮಾಡುವುದಕ್ಕೆ ಮಾನ್ಯ ಶ್ರೀ ಆರ್.ಎಲ್. ಜಾಲಪ್ಪನವರು ಮಾಡಿಬಿಟ್ಟಂಥ ಸಹಕಾರ ಇಲಾಖೆ ಏನು ಇದೆ ಆ ಸಂಸ್ಥೆಗಳು ಏನು ಇದ್ದಾವೆ, ಅವೆಲ್ಲವೂ ಹೆಂಡಕುಡುಕರಾಗುತ್ತಿದ್ದವು. ಆಗ ಇವರು ಏನು ಮಾಡುತ್ತಾ ಇರಲಿಲ್ಲ.

**ಶ್ರೀ ಆರ್.ಎಲ್. ಜಾಲಪ್ಪ:–** ಮಾನ್ಯ ಬಸವಲಿಂಗಪ್ಪನವರಿಗೆ ರಾಜಕೀಯ ಬಿಡಿ ಎಂದರೆ ಹೇಗೆ ಆಗುವುದಿಲ್ಲವೋ ಅಷ್ಟರಮಟ್ಟಿಗೆ ಕುಡಿಯುವವರು ಕೂಡಾ ಬಿಡುವುದಿಲ್ಲ. ನೀವು ಕೋ–ಆಪರೇಟಿವ್ ಸಮಾಜದ ಒಳಗೆ ಮಾರ್‍ರಿ ಅಥವಾ ಬಟ್ಟಿ ಸರಾಯಿಯಾದರೂ ಮಾರ್‍ರಿ, ಕುಡಿಯುವುದಕ್ಕೆ ಶುರು ಮಾಡಿದ್ದಾರೆ ಹೇಗಾದರೂ ಮಾಡಿ ಕುಡಿದೇ ಕುಡಿಯುತ್ತಾರೆ. ಪ್ರೊಹಿಬಿಷನ್ ತಂದು ಸತ್ತ ಹಾವುಗಳನ್ನು

ಹಾಕಿದರು ನವಸಾಗರವನ್ನು ಹಾಕಿದೆವು. ಯೂರಿಯಾವನ್ನು ಹಾಕಿದೆವು, ಆದರೆ ಕುಡಿಯುವುದನ್ನು ಬಿಟ್ಟಿ ಇಲ್ಲ. ಇದನ್ನು ಕುಡಿಯುವವರು ಸಾಯುವುದು ಬೇಡ ಎಂದು ರೀ–ಇಂಟ್ರಡ್ಯೂಸ್ ಮಾಡಿದೆವು ನಾನು ಕಂಟ್ರಾಕ್ಟರ್ ಆಗಿದ್ದೆ, ನಾನು ನೋಡಿದ್ದೇನೆ. ಏನು ಆಯಿತು ಆಗ? ಆಗ ಅವರುಗಳಿಗೆ ಪೋಲೀಸಿನವರಿಗೆ ಅನುಕೂಲವಾಯಿತು ಪ್ರೊಹಿಬಿಷನ್ ತಂದಾಗ ಅಧಿಕಾರಿಗಳ ಪ್ರೊಟೆಕ್ಷನ್‌ನಲ್ಲಿ ಪೋಲೀಸಿನವರು ಮತ್ತು ಕೆಲವು ಬೂಟ್‌ಲೆಗ್ಗರ್ಸ್‌ಗೆ ಬಹಳ ಅನುಕೂಲವಾಗಿ ಸುಖವಾಗಿ ಆರಾಮವಾಗಿದ್ದರು. ಆದ್ದರಿಂದ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿ ಆಲ್ಕೊಹಾಲ್‌ನಿಂದ ಏನು ತೊಂದರೆಯಾಗುತ್ತದೆ ಎನ್ನುವುದನ್ನು ತಿಳಿಸಬೇಕು. ರಿಸ್ಟ್ರಿಕ್ಷನ್ ಹಾಕಿದಷ್ಟೂ ಜಾಸ್ತಿಯಾಗುತ್ತದೆ. ಕ್ಲಬ್‌ಗಳನ್ನು ಎಂಟು ಗಂಟೆಗೆ – ಒಂಭತ್ತು ಗಂಟೆಗೆಲ್ಲಾ ಮುಚ್ಚಬೇಕು ಎಂದು ಹೇಳಿದರೆ ಒಳಗಡೆ ಬಾಗಿಲು ಹಾಕಿಕೊಂಡು ಪೇಪರ್ ಮುಚ್ಚಿಬೋಲ್ಟ್ ಹಾಕಿಕೊಂಡು ಹಿಂದುಗಡೆ ಯಿಂದ ಬಾಗಿಲು ಹಾಕಿಕೊಂಡಿರುತ್ತಾರೆ. ನಾವು ಒಂದಲ್ಲ ಹತ್ತು ಸಾರಿ ಹಿಡಿಯುತ್ತೇವೆ. ಆದರೂ ಕೂಡ ಅದು ಬೆಳೆದುಕೊಂಡು ಬಂದಿದೆ. ಆ ಕಾಲದಲ್ಲಿ ದೇವರೇ ಕುಡಿಯುತ್ತಿದ್ದರು ಎಂದು ಹೇಳುತ್ತಿದ್ದರು ಅದೆಲ್ಲಾ ಆಗಿಲ್ಲವೇ? ಪೂರ್ಣವಾಗಿ ನೀವು ಕುಡಿಯಲೇಬೇಡಿ ಎಂದು ಹೇಳುವುದಕ್ಕಾಗುವುದಿಲ್ಲ. ಈ ಪ್ರಪಂಚದಲ್ಲಿ ಯಾವ ರಾಜ್ಯದಲ್ಲಿಯೂ ಇದೂ ಅಗಿಲ್ಲ. ಆದರೆ ತಾವು ಹೇಳುವುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಯದ್ವಾತದ್ವಾ ಹೀಗೆ ಎಲ್ಲಾ ಓಪನ್ ಆಗಿ ಬಿಟ್ಟುಬಿಡಬೇಡಿ ಎಂದು ಹೇಳುವುದನ್ನು ಒಪ್ಪಿಕೊಳ್ಳುತ್ತೇವೆ. ಇದರ ಬಗ್ಗೆ ಏನಾದರೂ ಸಲಹೆಗಳು ಕೊಡಬಹುದೇ ವಿನಹಾ ಪೂರ್ಣವಾಗಿ ನಿಲ್ಲಿಸಬೇಕು ಎಂದು ಹೇಳುವುದು ನನಗಂತೂ ಗೊತ್ತಿದ್ದ ಹಾಗೆ ಇದು ಸಾಧ್ಯ ಇಲ್ಲ. ಅವರು ಹೇಳಿದ ಹಾಗೆ ತನಗೆ ಎರಡು ಅನುಭವ ಇದೆ. ಅವರು ಸ್ವಲ್ಪ ವೈನ್ ತೆಗೆದುಕೊಳ್ಳುತ್ತಾರೋ ಏನೋ ಗೊತ್ತಿಲ್ಲ. ಒಂದೊಂದು ಸಾರಿ ತೆಗೆದುಕೊಳ್ಳುತ್ತಿದ್ದರೋ ಏನೋ ಈ ವೈನ್ ಸ್ವಲ್ಪ ಸ್ಟ್ರಾಂಗ್ ಡೋಸ್ ಅದೆಲ್ಲಾ ನನಗೆ ಗೊತ್ತಿಲ್ಲ. ಶ್ರೀನಿವಾಸ್‌ರವರಿಗೂ ಸ್ವಲ್ಪ ಅನುಭವ ಇದೆ. ಅವರು ಈಗ ಬಿಟ್ಟುಬಿಟಿದ್ದಾರೆ.

**ಶ್ರೀ ಕೆ.ಹೆಚ್. ಶ್ರೀನಿವಾಸ್**:– ಉತ್ತಮವಾಗಿ ಎಷ್ಟೆಷ್ಟು ನನ್ನ ಜ್ಞಾನ ಸಮರ್ಥನೆಗೆ ತೆಗೆದುಕೊಳ್ಳಬೇಕೋ ಅವುಗಳನ್ನು ಮಾಡಿಕೊಂಡಿದ್ದೇನೆ.

**ಶ್ರೀ ಆರ್.ಎಲ್. ಜಾಲಪ್ಪ**:– ಅವುಗಳ ಬಗ್ಗೆ ಅನುಭವ ಮಾತನಾಡುವುದಕ್ಕೆ ಆಗುವುದಿಲ್ಲ. ಸ್ವಲ್ಪ ಅನುಭವ ಇರಲೇಬೇಕು ಆ ಅನುಭವವನ್ನು ಅವರು

ಸಂಪಾದನೆ ಮಾಡಿಕೊಂಡಿದ್ದಾರೆ. ಆದ್ದರಿಂದ ಅದನ್ನು ಪೂರ್ಣವಾಗಿ ರ್‍ಯಾಷನಲೈಸ್ ಮಾಡಬೇಕು ಇದರಿಂದ ಬಡವರೇ ಹೆಚ್ಚಾಗಿ ಹಾಳಾಗುತ್ತಿದ್ದಾರೆ. ಅವರೇ ಜಾಸ್ತಿಯಾಗುತ್ತಿದ್ದಾರೆ. ಅವರಿಗೆ ಮಾತನಾಡಿದರೆ ಸಿಟ್ಟು ಬರುತ್ತದೆ, ಲೋನ್ ಮೇಳಗಳಿಂದ ಬಂದು ಬಹಳವಾಗಿ ಜನರು ಆನಂದವಾಗಿಬಿಟ್ಟಿದ್ದಾರೆ. ನಾಲ್ಕು ವರ್ಷಗಳಿಂದ ಕ್ಷಾಮ ಇದ್ದರೂ ಇದು ಮಾತ್ರ ವರ್ಷ ವರ್ಷ ಜಾಸ್ತಿಯಾಗುತ್ತದೆ. I do welcome it because it contributing more and more income to the State. ಇದನ್ನು ರ್‍ಯಾಷನಲೈಸ್ ಮಾಡಬೇಕೇ ವಿನಹಾ ಸುಮ್ಮನೆ ಶ್ರೀನಿವಾಸ್‌ರವರು ಹೇಳಿದಹಾಗೆ ಬರೀ ಭಾಷಣ ಮಾಡುವುದು ಇದನ್ನು ಪೂರ್ಣವಾಗಿ ಸರಿ ಮಾಡುವುದಕ್ಕಾಗುವುದಿಲ್ಲ. ಇದು ನನ್ನ ಅಭಿಪ್ರಾಯ.

**ಶ್ರೀ ಬಿ. ಬಸವಲಿಂಗಪ್ಪ:**– ಮಾನ್ಯ ಅಧ್ಯಕ್ಷರೇ, ಜಾಲಪ್ಪನವರು ಮಾತನಾಡಿ, ಮಂತ್ರಿಗಳು ಎನ್ನುವುದನ್ನು ಮರೆತು ಬಿಡುತ್ತಾರೆ. ಇದು ನನಗೆ ಅಸಹ್ಯ ಆಗಿರತಕ್ಕ ಮಾತು ಮಂತ್ರಿಗಳು, ಜಾಲಪ್ಪ ಅಲ್ಲ, ತಾವು ಅದು ಆಗುವುದಿಲ್ಲ, ನೀವು ಜಾರಿ ಕೊಡುವುದಿಲ್ಲ. ನೀವು ಆಗುವುದಿಲ್ಲ ಎನ್ನುವ ನೀತಿ ನಿಮ್ಮದು ಯಾಕೆ ಹೇಳುತ್ತಿದ್ದೇನೆಂದರೆ ತಾವು ಮಂತ್ರಿಗಳಾಗಿದ್ದೀರಿ. ಸರ್ಕಾರದ ನೀತಿಯಂತೆ, ಸರ್ಕಾರದ ಒಂದು ನೀತಿಗೆ ಸರಿಸಮನಾಗಿ ಹೋಗುತ್ತಿರುವುದರಿಂದ ಎಲ್ಲರ ಯೋಗಕ್ಷೇಮವನ್ನು ನೋಡಿಕೊಳ್ಳಬೇಕು. ಬಡವರನ್ನು ರಕ್ಷಣೆ ಮಾಡಬೇಕು, ನೀವು ನಿಂತಿದ್ದೇವೆ ಎನ್ನುವುದಾದರೆ.......... ಕೋ ಆಪರೇಟಿವ್ ಯಾಕೆ ಮಾಡಬಾರದು ಇದನ್ನು ಯಾಕೆ ಮಾಡಬಾರದು........ ಏನು ಮಾತಿದು.

**ಶ್ರೀ ಆರ್.ಎಲ್. ಜಾಲಪ್ಪ:**– ಸ್ವಾಮಿ, ಕೋ ಆಪರೇಟೀವ್ ಸೊಸೈಟಿ ಮುಖಾಂತರ ಅದರ ಇದರ ಉದ್ದೇಶ ಸೆಕೆಂಡ್ಸ್ ಕಡಿಮೆ ಆಗುತ್ತದೆ. ಇದನ್ನು ತಾವು ಅರ್ಥ ಮಾಡಿಕೊಳ್ಳಬೇಕು. ಪ್ರೈವೇಟ್‌ನಲ್ಲಿ ರಾಮನ ಲೆಕ್ಕ ಒಂದು, ಕೃಷ್ಣನ ಲೆಕ್ಕ ಒಂದು ಇಡುತ್ತಾರೆ, ಜನತಾ ಬಜಾರ್ ಕನ್ಸೂಮರ್ಸ್ ಸೊಸೈಟಿ ಮುಖಾಂತರ ಸೆಕೆಂಡ್ಸ್ ಕಡಿಮೆ ಆಗುತ್ತದೆ. ಜನತಾ ಬಜಾರ್‌ನವರು ಇದನ್ನು ಮಾಡುವುದಿಲ್ಲ. ನೀವು ಆಪೋಸ್ ಮಾಡಿದಿರಿ. ಅದನ್ನು ನಾವು ಬಿಟ್ಟೆವು. ಹಿಂದೆ ನೀವು ಮಂತ್ರಿಗಳಾಗಿದ್ದಾಗ ಹೆಂಡ, ಸಾರಾಯಿ ವ್ಯಾಪಾರದವರು ಆಗ ಇರಲಿಲ್ಲವೇನು? ನೀವು ಯಶೋದಮ್ಮ ರಾಜೀನಾಮೆ ಕೊಟ್ಟ ಹಾಗೆ ನೀವೂ ಕೊಟ್ಟಿದ್ದರೆ....

**ಶ್ರೀ ಬಿ. ಬಸವಲಿಂಗಪ್ಪ:**– ಹೋಲಿಸಿ, ಹೋಲಿಸಿ ನಾವು ಮಾಡುವುದೇ ಸರಿ ಎಂದು ಹೇಳುತ್ತೀರಲ್ಲ. ಇದು ಸಲ್ಲದ ಮಾತು, ಮಾಡಬಾರದು, ನಾವು ವಿನಯ ಪೂರ್ವಕವಾಗಿ ತಮ್ಮನ್ನು ಕೇಳಿ ಕೊಳ್ಳುತ್ತೇನೆ, ಮಾನ್ಯ ಜಾಲಪ್ಪರವರೇ, ಕೆಟ್ಟ ಕೆಲಸ ಮಾಡಿದ್ದು ಸರಿ ಎಂದು ಹೇಳಬೇಡಿ.

**ಶ್ರೀ ಆರ್.ಎಲ್. ಜಾಲಪ್ಪ:**– ಕೆಟ್ಟ ಕೆಲಸ ನಿಮ್ಮ ಕಾಲದಲ್ಲೂ ಇತ್ತು. ನಮ್ಮಲ್ಲೂ ಇತ್ತು. ತಮ್ಮ ಕಾಲದಲ್ಲೂ ಮಾಡಿದ್ದೀರಿ. ನಾನು ಈ ರೀತಿ ಹೇಳದೇ ವಿಧಿಯಿಲ್ಲ. ನೀವು ರಾಜೀನಾಮೆ ಆಗ ನೀಡಿದ್ದೇ ಆಗಿದ್ದರೆ ನಿಮ್ಮ ಸಾಚಾತನಕ್ಕೆ ನಮಸ್ಕಾರ ಮಾಡುತ್ತಿದ್ದೆ. ನಿಮ್ಮವರಿಗೆ ಆಗ ತೊಂದರೆ ಆಗುತ್ತಾ ಇತ್ತು.

**ಶ್ರೀ ಬಿ. ಬಸವಲಿಂಗಪ್ಪ:**– ನಮ್ಮ ಯಶೋದಮ್ಮ ಕೊಡಲಿಲ್ಲವೇನು.

**ಶ್ರೀ ಬಿ.ಎಂ. ಉದಾಸಿ:**– ಮಾನ್ಯ ಅಧ್ಯಕ್ಷರೇ.

**ಅಧ್ಯಕ್ಷರು:**– ತಡೆಯಿರಿ, ಮಾನ್ಯ ಉದಾಸಿಯವರು ಏನು ಹೇಳುತ್ತಾರೆ ಕೇಳೋಣ.

**ಶ್ರೀ ಬಿ.ಎಂ. ಉದಾಸಿ:**– ಮಾನ್ಯ ಅಧ್ಯಕ್ಷರೇ, ನಾವು ಇಷ್ಟರವರೆಗೆ ಪಾನ ನಿರೋಧದ ಬಗ್ಗೆ ಎಲ್ಲಾ ರಾಜಕೀಯ ಪಕ್ಷಗಳವರು ಮಾತನಾಡಿದ್ದಾರೆ. ಎಲ್ಲರೂ ಚುನಾವಣೆಯಲ್ಲಿ ಗೆಲ್ಲಲ್ಲಿಕ್ಕೆ ಎಂದು, ಎನ್ನುವ ಪ್ರಶ್ನೆ. ಮೂಲಭೂತವಾದ ತತ್ವ ಇದರಲ್ಲಿ ಏನಿರಬಹುದು. ಕುಡಿಯುವುದಕ್ಕೆ ಎಂದು ಪ್ರತಿಭಟನೆ ಅಥವಾ ಘೋಷಣೆ ಇದ್ದರೆ ಮಾತ್ರ ಇದು ಏನಾದರೂ ಕಾರ್ಯರೂಪಕ್ಕೆ ತರುತ್ತಿತ್ತೋ ಏನೋ. ಚುನಾವಣೆ ಕ್ಷೇತ್ರದಲ್ಲಿ ಕುಡಿಯದವರು. ಚುನಾವಣೆಗೆ ನಿಂತರೆ ಬಾಟ್ಲಿಯನ್ನು ಇಟ್ಟುಕೊಂಡಿದ್ದರೆ ಕುಡಿಯುವವರೆ ಓಟು ಹಾಕುತ್ತಾರೋ ಏನೋ. ಇದರ ಬಗ್ಗೆ ದೃಢ ನಿರ್ಧಾರ ಇದ್ದರೆ ಮಾತ್ರ ಒಂದು ತೀರ್ಮಾನಕ್ಕೆ ಬರಲಿಕ್ಕೆ ಸಾಧ್ಯ ಎನ್ನುವ ವಿಚಾರವನ್ನು ಹೇಳುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ:**– ಈಗ ಪಾನ ನಿರೋಧದ ಬಗ್ಗೆ ಮಾತನಾಡಿದ್ದನ್ನು ಕೇಳಿದರೆ ಕುಡಿಯುವರ ಭಾಷಣ ಕೇಳಿದ ಹಾಗೆ ಇದೆ. ಕುಡಿಯುವವರಿಗೆ ಬೆಂಬಲ ಕೊಟ್ಟ ಹಾಗಿದೆ. ಭಾಷಣ ಮಾಡುವವರ ರೀತಿ.

**ಶ್ರೀ ಆರ್.ಎಲ್. ಜಾಲಪ್ಪ:**– ಅವರು ಕುಡಿಯುವುದಿಲ್ಲ.

**ಅಧ್ಯಕ್ಷರು:**– ರಮೇಶ್ ಕುಮಾರ್ ಏನು ಹೇಳುತ್ತಾರೋ.

**ಶ್ರೀ ರಮೇಶ್ ಕುಮಾರ್:**– ನಾನು ಶ್ರೀನಿವಾಸ್‌ರವರ ಭಾಷಣವನ್ನು ಪ್ರಾರಂಭದಿಂದ ಕೇಳಿದೆ. ಅವರಿವರ ಬಗ್ಗೆ ಮಾತನಾಡಿದ್ದನ್ನೂ ಕೇಳಿದೆ. ಆದರೆ ನಮ್ಮ ದುರ್ಭಾಗ್ಯ ಯಾವ ರೀತಿ ಇದೆ ಎಂದರೆ ವ್ಯಾಪಾರ ಮಾಡುವವನೂ, ಶ್ರೀಮಂತರೂ ಇದರಲ್ಲಿದ್ದಾರೆ. ಇಬ್ಬರಲ್ಲೂ ಈ ವೃತ್ತಿ ಇದೆ ಶ್ರೀಮಂತರಿಗೆ ಇನ್‌ಫ್ಲುಯೆನ್ಸ್ ಇದ್ದು ಇಡೀ ರಾಜ್ಯದ ಎರಡೂ ರಾಜಕೀಯ ಪಕ್ಷಗಳ ಬೆಂಬಲ ಬಲವಾದ ಪರಿಣಾಮ ಬೀರುತ್ತಾರೆಂದರೆ ಎಲ್ಲ ಪಕ್ಷಗಳು ಅಂದರೆ ನಾವುಗಳು ಅವರುಗಳ ದಾಸರಾಗಿದ್ದೇವೆ ನಮ್ಮ ಭವಿಷ್ಯ ಅವರ ಕೈಯಲ್ಲಿದೆ. ಕೆಲವರು ಕುಡಿಯಬಹುದು, ಇನ್ನೊಬ್ಬನು ಇನ್ನೊಂದಕ್ಕೆ ಕುಡಿಯಬಹುದು. ಎಲ್ಲರ ಹತೋಟಿಯಲ್ಲಿನ ವ್ಯವಸ್ಥೆಯ ಹತೋಟಿ ಇವರ ಮೇಲೆ ಇರುತ್ತದೆ. ಯಾವ ರೀತಿ ಇರುತ್ತದೆ ಅಂದರೆ ಪಾರ್ಲಿಮೆಂಟಿನ ಪ್ರತಿನಿಧಿಗಳು, ರಾಜ್ಯ ಸಭೆಯ ಪ್ರತಿನಿಧಿಗಳು, ವಿಧಾನ ಸಭೆಯಲ್ಲಿ ಪ್ರತಿನಿಧಿಗಳು ಒಟ್ಟಾರೆ, ಮಂತ್ರಿಮಂಡಲದಲ್ಲೂ ಬರುತ್ತಾರೆ. ಎಲ್ಲ ಚರ್ಚೆಗಳೂ ತೀರ್ಮಾನಗಳು ಇವರಿಗೆ ಗುರಿಯಾಗುತ್ತದೆ. ಸರ್ಕಾರವನ್ನು ನಡೆಸತಕ್ಕ ಒಂದು ಶಕ್ತಿ ಇವರಲ್ಲಿರುತ್ತದೆ. ನಮಗೆ ಮತ್ತು ನಿಮಗೆ ಬೆಂಬಲ ಇರುವುದಾದರೆ ಯಾವ ಜನರು ನಮ್ಮನ್ನು ಇಲ್ಲಿಗೆ ಆರಿಸಿ ಕಳುಹಿಸಿಕೊಟ್ಟಿದ್ದಾರೆ, ಅವರ ಋಣ ತೀರಿಸಲು ನಾವು ಈ ಬಗ್ಗೆ ಒಂದು ನೈಜವಾದಂಥ ತೀರ್ಮಾನ ಕೈಕೊಳ್ಳಬೇಕು. ಅಂತಹ ಒಂದು ತೀರ್ಮಾನವನ್ನು ನಾವು ಮಾಡದಿದ್ದರೆ.... Let us take a decision to refuse accepting funds are those excise lobby. Are you having the courage. You please take This first in your party and take a decision. We will also take a position In our party and tell them that we are not going to accept bill From them. We will go before the people on our merits. We will face the elections on our merits and we will not bow down to the Contractors.... ಎಂದು ಹೇಳುತ್ತೀರಾ? ನೀವು ಇದರ ಮೇಲೆ ಮಾತನಾಡಿ. ಅದನ್ನು ಮಾಡಲು ನೀವು ಬೇರೆಯದನ್ನೆಲ್ಲಾ ಏತಕ್ಕೆ ಮಾತನಾಡುತ್ತೀರಿ? ನೀವು ಸಹ ಮಂತ್ರಿಗಳಾಗಿ ಕೆಲಸ ಮಾಡಿದ್ದೀರಿ. ಇದು ಆಗಿನಿಂದಲೂ ನಡೆಯುತ್ತಿದೆ. ಈ ವಿಚಾರದಲ್ಲಿ ನಿಮ್ಮ ನಿಜವಾದ ಅನಿಸಿಕೆಗಳು ಯಾವುದು ಎಂಬುದನ್ನು ಹೇಳಿ. ಈ ಹಿಂದೆ ನೀವು ಕೆಲವು ವಿಚಾರಗಳು ಬಂದಾಗ ನಿಮ್ಮ ಪ್ರಾಮಾಣಿಕವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೀರಿ.

ಆದ್ದರಿಂದ ಈಗಲೂ ಸಹ ಈ ವಿಚಾರದಲ್ಲಿ ನಿಮ್ಮ ನಿಲುವನ್ನು ಮರೆತು ನೀವು ಬಸವಲಿಂಗಪ್ಪನವರು ಎಂಬ ಒಂದೇ ಅಂಶವನ್ನು ಗಮನದಲ್ಲಿಟ್ಟುಕೊಂಡು ಮಾತನಾಡಿ.

**ಶ್ರೀ ಬಿ. ಬಸವಲಿಂಗಪ್ಪ:**– ಮಾನ್ಯ ರಮೇಶ್ ಕುಮಾರ್ ಅವರು ನನ್ನ ಕಿರಿಯ ಸ್ನೇಹಿತರು. ಆದ್ದರಿಂದ ಇದರ ಮೇಲೆ ಇಲ್ಲಿ ಚರ್ಚೆ ಮಾಡುವಾಗ ಇರತಕ್ಕಂಥ ವಾಸ್ತವಾಂಶಗಳನ್ನು ಒಬ್ಬರಿಗೊಬ್ಬರು ಹಂಚಿಕೊಳ್ಳಬಹುದು. ಇರತಕ್ಕಂಥ ವಿಷಯಗಳನ್ನು ಮತ್ತು ಅಭಿಪ್ರಾಯಗಳನ್ನು ಒಬ್ಬರಿಗೊಬ್ಬರು ಹಂಚಿಕೊಂಡು ಮುಂದುವರಿಯುವುದರಲ್ಲಿ ತಪ್ಪೇನಿಲ್ಲ ಈಗ ಮಾನ್ಯ ಜಾಲಪ್ಪನವರು ಏನು ಹೇಳಿದರೆಂದರೆ ಈ ಸೆಕೆಂಡ್ಸ್ ಮಾರಾಟವನ್ನು ತಡೆಯಲು ಕೋ ಆಪರೇಟಿವ್ ಸೊಸೈಟಿಗಳ ಮುಖಾಂತರ ಮಧ್ಯದ ಮಾರಾಟವನ್ನು ಮಾಡಲು ಯೋಚಿಸಿದ್ದೆವು. ಆದರೆ ನಂತರ ಆ ಯೋಚನೆಯನ್ನು ಬಿಡಲಾಯಿತೆಂದು ಹೇಳಿದರು. ಇಲ್ಲಿ ಸೆಕೆಂಡ್ಸ್ ಮಾರಾಟ ಎಂದರೆ, ಟ್ಯಾಕ್ಸ್ ಇಲ್ಲದೆ ಮಾರಾಟ ಮಾಡುವುದು. ಒಂದು ಬಾಟಲ್ ಬ್ರಾಂದಿಯನ್ನು ತಯಾರು ಮಾಡಲು 25 ರೂಪಾಯಿಗಳು ಖರ್ಚಾದರೆ ಅದನ್ನು ಗ್ರಾಹಕರಿಗೆ 97 ರೂಪಾಯಿಗಳಿಗೆ ಮಾರಾಟ ಮಾಡಲಾಗುತ್ತದೆ. ಇದರಲ್ಲಿ ಬ್ರಾಂದಿಯನ್ನು ತಯಾರು ಮಾಡುವವರ ಲಾಭ ಮಾರಾಟ ಮಾಡುವವರ ಲಾಭ, ಹಾಗೂ ಸೇಲ್ಸ್ ಟ್ಯಾಕ್ಸ್ ಸರ್‌ಚಾರ್ಜ್ ಹಾಗೂ ಇತರೇ ಸೆಸ್‌ಗಳನ್ನೆಲ್ಲಾ ಸೇರಿಸಿ ಇಷ್ಟು ಹಣಕ್ಕೆ ಮಾರಾಟ ಮಾಡುತ್ತಾರೆ. ಕೆಲವು ಸಲ ಈ ಎಲ್ಲ ರೀತಿಯ ಟ್ಯಾಕ್ಸ್‌ಗಳನ್ನು ಬಿಟ್ಟು ಅರ್ಧಬೆಲೆಗೆ ಮಾರಾಟ ಮಾಡುವುದು ಉಂಟು. ಅದಕ್ಕೆ ಸೆಕೆಂಡ್ಸ್ ಮಾರಾಟ ಎಂದು ಹೇಳುತ್ತಾರೆ. ಈ ಸೆಕೆಂಡ್ಸ್ ಮಾರಾಟ ನಡೆಯುತ್ತಿರುವುದು ಸರ್ಕಾರಕ್ಕೂ ಗೊತ್ತು ಮತ್ತು ಅಬಕಾರಿ ಇಲಾಖೆಯ ಅಧಿಕಾರಿಗಳಿಗೂ ಗೊತ್ತು. ಇವರಿಗೆಲ್ಲಾ ಗೊತ್ತಿಲ್ಲದೆ ಇದು ನಡೆಯುತ್ತಿಲ್ಲ. ಸರ್ಕಾರ ಇದಕ್ಕೆ ಉತ್ತೇಜನ ಕೊಡದಿದ್ದರೆ ಅವರು ಯಾವ ರೀತಿ ಸೆಕೆಂಡ್ಸ್ ಮಾರಾಟ ಮಾಡುತ್ತಾರೆ? ಮಾನ್ಯ ರಮೇಶ್‌ಕುಮಾರ್ ಅವರು ಏನು ಸೇಂದಿ ಕಂಟ್ರಾಕ್ಟರ್‌ಗಳಿಗೂ ಮತ್ತು ಸರ್ಕಾರಕ್ಕೂ ಒಂದೇ ರೀತಿಯ ಸಂಬಂಧವಿದೆ ಅದನ್ನು ತಯಾರು ಮಾಡುವ ಡಿಸ್ಟಿಲರ್ಸ್‌ಗಳು ಮತ್ತು ಸರ್ಕಾರಕ್ಕೂ ಒಂದೇ ರೀತಿಯೇ ಎಂದು ಹೇಳಿದರು. ಇದು ನನಗೂ ಗೊತ್ತು. ಇದು ಆದಿ ಕಾಲದಿಂದಲೂ ನಡೆದುಕೊಂಡು ಬಂದೂ ಈಗಲೂ ನಡೆಯುತ್ತಿದೆ. ಈ ಕಂಟ್ರಾಕ್ಟರ್ಸ್ ಮತ್ತು ಡಿಸ್ಟಿಲರ್ಸ್ ಸೇರಿಕೊಂಡು ರಾಜಕೀಯ ಮಾಡುತ್ತಿದ್ದಾರೆಂದು ಅವರು ಹೇಳಿದ್ದು ನಿಜ. ಇವರುಗಳು ಎಲ್ಲ ರಾಜಕೀಯ

ಪಕ್ಷಗಳನ್ನೂ ಮಾಡುತ್ತಾರೆ. ಈ ಬಾಟ್ಲಿಂಗ್ ವ್ಯವಹಾರವನ್ನು ಬಡವರು ಮಾಡಲು ಸಾಧ್ಯವೇ? ಈ ಸೇಂದಿ ಕಂಟ್ರಾಕ್ಟ್‌ನ್ನು ಸಹ ಕಳೆದ ಇಪ್ಪತ್ತು ವರ್ಷಗಳಿಂದ ಯಾರು ಯಾರು ಮಾಡುತ್ತಿದ್ದರೋ ಅವರೇ ಈಗಲೂ ಇದ್ದಾರೆ. ಕೆಲವರಿಗೇ ಈ ಕಂಟ್ರಾಕ್ಟ್ ಕೊಡುವುದು ಸರಿಯಲ್ಲ. ಎಂದೂ ಛಿದ್ರಛಿದ್ರಗೊಳಿಸಿ ಹೆಚ್ಚಿನ ಜನರಿಗೆ ಕಂಟ್ರಾಕ್ಟ್ ಕೊಡಬೇಕೆಂದು ಸರ್ಕಾರ ವಿಚಾರ ಮಾಡಿ ಕಂಟ್ರಾಕ್ಟರ್‌ಗಳು ಅದನ್ನು ವಿರೋಧ ಮಾಡಿದರು ಈ ಕಂಟ್ರಾಕ್ಟರ್‌ಗಳಿಗೆ ಅನುಕೂಲ ಕರವಾದ ರೀತಿಯಲ್ಲಿ ಹರಾಜು ಬೇಕಾಗಿದೆ. ಇದಕ್ಕೆ ಹಲವಾರು ಕಾರಣಗಳು ಇವೆ. ಇದನ್ನೆಲ್ಲಾ ನೀವು ಹೇಗೆ ಕೊನೆಗೊಳಿಸುತ್ತೀರಿ? ವಿರೋಧಪಕ್ಷದಲ್ಲಿರುವ ನಾವು ಏನಿದ್ದರೂ ನಿಮಗೆ ಸಲಹೆಗಳನ್ನು ಕೊಡಬಹುದು. ಆದರೆ, ಅದನ್ನು ಕಾರ್ಯಗತ ಮಾಡುವವರು ನೀವು. ಆದ್ದರಿಂದ ಈ ಸೆಕೆಂಡ್ಸ್ ಸೇಲ್ಸ್ ಯಾವಾಗ ಕೊನೆಗೊಳಿಸುತ್ತೀರಿ ಮತ್ತು ಈ ಕಂಟ್ರಾಕ್ಟರ್ ರಾಜಕೀಯ ಪಕ್ಷಗಳ ಮೇಲೆ ಬಲೆಯನ್ನು ಏನು ಬೀಸುತ್ತಿದ್ದಾರೆ, ಅದನ್ನು ನೀವು ಯಾವಾಗ ಕಿತ್ತು ಹಾಕುತ್ತೀರಿ? ಮುಂದೆ ಇದಕ್ಕೆಲ್ಲಾ ನಿಮ್ಮಲ್ಲಿ ಮೊದಲು ಮನೋದಾರ್ಢ್ಯತೆ ಬರಬೇಕು. ಈ ವಿಚಾರದಲ್ಲಿ ನೀವು ತೀರ್ಮಾನಕ್ಕೆ ಬರಲೇಬೇಕು ಮತ್ತು ಒಂದು ಗುರಿಯನ್ನು ಮುಟ್ಟಲೇ ಬೇಕು. ಸಂಪೂರ್ಣವಾಗಿ ಕೊನೆ ಮಾಡಬೇಕು. ಈ ಡಿಸ್ಟಿಲರೀಸ್ ಏನಿದ್ದಾರೆ, ಅವರು ಅಧೀನರಾಗುವುದಿಲ್ಲ ಮತ್ತು ಹೇಳಿದಂತೆ ಕೇಳುವುದಿಲ್ಲ ಎಂಬತಕ್ಕಂಥ ತೀರ್ಮಾನಕ್ಕೆ ನೀವು ಬರಬೇಕು. ನಿಮಗೆ ಆ ಶಕ್ತಿ ಇದೆಯೇ ಎಂಬುದು ಇಲ್ಲಿರುವ ಪ್ರಶ್ನೆ.

ನಾನು ಯಾವಾಗ ರಾಜಕೀಯಕ್ಕೆ ಪ್ರವೇಶ ಮಾಡಿದೆ ಆವತ್ತಿನಿಂದ ಇವತ್ತಿನವರೆಗೆ ಅದೇ ಮನೆತನದವರು ಕಂಟ್ರಾಕ್ಟ್ ಮಾಡುತ್ತಿದ್ದಾರೆ. ಅವರದೇ, ವಿಸ್ಕಿ ಅವರದೇ, ಬ್ರಾಂದಿ ಅವರದೇ ಅವರೊಬ್ಬರೂ ಕುಡಿಯುತ್ತಾ ಇಲ್ಲ. ಬಡವರಿಗೆ ಮಾರಿಬಿಟ್ಟು ದುಡ್ಡು ಸಂಪಾದನೆ ಮಾಡತಕ್ಕಂಥಾದ್ದು. ಯಾವ ಯಾವ ಬಾಬಿಗೆ ಇದನ್ನು ಮಾಡಬೇಕೋ ಅದನ್ನು ಮಾಡುತ್ತಾ ಇರುತ್ತಾರೆ. ಈಗ ಇದಕ್ಕೆ ಎನ್‌ಕರೇಜ್ ಮಾಡುವವರು ಯಾರು? ಗೌರ್ನಮೆಂಟ್ ನೌಕರರು, ಮುಖ್ಯಸ್ಥರು ಅದರಲ್ಲೂ ಪಿ.ಡಬ್ಲೂ.ಡಿ ಯವರು ಇದ್ದಾರಲ್ಲ ಕಂಟ್ರಾಕ್ಟರ್ಸ್ ಆದಿಯಾಗಿ ಇಂಜಿನಿಯರ್ಸ್ ಆದಿಯಾಗಿ ಎನ್‌ಕರೇಜ್ ಮಾಡಿ ಈ ಇಂಜಿನಿಯರ್ಸ್ ಎಂತೆಂತಹವರು ಎಂದು ನಾನು ಹೇಳುವುದಿಲ್ಲ. ಅವರೆಲ್ಲಾ ಸೀನಿಯರ್ ಎಂಜಿನಿಯರ್ಸ್ ಗಳೂ, ಅವರಿಗೆಲ್ಲಾ ಡ್ರಿಂಕ್ಸ್ ಫಾರಿನ್‌ನಿಂದ ಬರಬೇಕು. ಇಲ್ಲಿನ ವಿಸ್ಕಿಯನ್ನು ಅವರು ಕುಡಿಯುವುದಿಲ್ಲ ಇವತ್ತಿನ ದಿವಸ ಯಾವ ಅಧಿಕಾರಿ

ಕುಡಿಯುವುದಿಲ್ಲ. ಎಲ್ಲರೂ ಕುಡಿಯುತ್ತಾರೆ. ಅದಕ್ಕೋಸ್ಕರ ಕಂಟ್ರಾಕ್ಟರಿಗೆ ಎನ್‌ಕರೇಜ್ ಪ್ರೋತ್ಸಾಹ ಅಧಿಕಾರಿಗಳಿಂದ ಸಿಕ್ಕಿತು ರಾಜಕೀಯ ಪಕ್ಷಗಳಿಂದ ಪ್ರೋತ್ಸಾಹ ಸಿಕ್ಕಿತು. ಯಾವಾಗ ಕೊನೆ ಮಾಡುತ್ತೀರಿ ಎನ್ನುವುದು ನನ್ನ ಪ್ರಶ್ನೆ. ಆ ಮೇಲೆ ಲಂಚ ತಾಂಡವವಾಡುತ್ತದೆ ಎಂದು ತಾವು ಹೇಳಬಹುದು.

**ಶ್ರೀ ರಮೇಶ್ ಕುಮಾರ್:–** ನೀವು ಅಲ್ಲಿ ಬಂದು ಕುಳಿತುಕೊಳ್ಳುವುದಕ್ಕೆ ಎಷ್ಟು ದಿನ ಅಷ್ಟು ಉಪಾಯವಾಗಿ ಮಾತನಾಡುತ್ತಿದ್ದೀರಿ. ನೀವು ಬಸವಲಿಂಗಪ್ಪನವರಾಗಿ ಮಾತನಾಡಿ ಎಂದು ನಾನು ಪ್ರಾರ್ಥನೆ ಮಾಡಿಕೊಳ್ಳುತ್ತಾ ಇದನ್ನು ನೀವು ಸ್ಟ್ರಾಜಿ ಮಾಡಬೇಡಿ.

**ಶ್ರೀ ಬಿ. ಬಸವಲಿಂಗಪ್ಪ:–** ರಾಜಕೀಯ ಪಕ್ಷಗಳು ತೀರ್ಮಾನ ಮಾಡಬಹುದು.

**ಶ್ರೀ ರಮೇಶ್ ಕುಮಾರ್:–** ನೀವು ಮುಖ್ಯ ಮಂತ್ರಿಯಾದರೂ, ಆಗದೇ ಹೋದರು ಈ ರಾಜ್ಯದ ಚರಿತ್ರೆಯಲ್ಲಿ ನಿಮಗೆ ಒಂದು ಸ್ಥಾನ ಇದೆ. ನೀವು ಕೆಲವು ತೀರ್ಮಾನಗಳನ್ನು ಮಾಡಿದ್ದೀರಿ ನಿಮ್ಮ ಕಡೇ ದಿವಸಗಳಲ್ಲಿ ನಿಮ್ಮ ಹೆಸರು ಇನ್ನೂ ಉಜ್ವಲವಾಗಿ ಬೆಳೆಯತಕ್ಕಂತೆ  ನೀವು ಮಾತನಾಡಬೇಕು. ಏನೋ ರಾಜ್ಯಕಬಳಿಕೆ ಮಾಡಿಕೊಳ್ಳುತ್ತಾ ಇದ್ದೀರಿ. ನಿಮಗೆ ಇಲ್ಲಿ ದಯಮಾಡಿ ಜನ ನಿಮ್ಮಿಂದ ಏನು ನಿರೀಕ್ಷೆ ಮಾಡುತ್ತಾರೋ ಅವರ ಮನಸ್ಸಿನಲ್ಲಿ ಅದು ನಿಲ್ಲತಕ್ಕ ರೀತಿಯಲ್ಲಿ ಮಾತನಾಡಿ. ಏಕೆ ಈ ರೀತಿ ಮಾತನಾಡುತ್ತಾ ಇದ್ದೀರಿ, ಏಕೆ ಭಯ ಆಗುತ್ತಿದೆಯೇ

**ಶ್ರೀ ಬಿ. ಬಸವಲಿಂಗಪ್ಪ:–** ಅವರು ಕೊನೇ ಕಾಲ ಎಂದು ಹೇಳುತ್ತಾ ಇದ್ದಾರೆ. ಮಾನ್ಯ ಅಧ್ಯಕ್ಷರೇ ಈ ಹೆಂಡ ಕುಡಿಸುವುದನ್ನು ತಪ್ಪಿಸಬೇಕು ಎನ್ನುವುದು ನನ್ನ ಇಚ್ಛೆ.

**ಶ್ರೀ ರಮೇಶ್ ಕುಮಾರ್:–** ಕಾಂಟ್ರಿಬ್ಯೂಷನ್ ವಿಚಾರ ಮಾತನಾಡಿ ಅಂದರೆ ನೀವು ಹೆಂಡದ ವಿಚಾರ ಮಾತನಾಡುತ್ತಾ ಇದ್ದೀರಿ. ನೀವು ಬಹಳ ಹುಷಾರಾಗಿ ಮಾತನಾಡುತ್ತಾ ಇದ್ದೀರಿ.

**ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:–** ನೀವಿಬ್ಬರೂ ಬಹಳ ಹುಷಾರಾಗಿ ಮಾತನಾಡುತ್ತಿದ್ದೀರಿ.

ಶ್ರೀ **ಕೆ.ಹೆಚ್.** ಶ್ರೀನಿವಾಸ್:- ಅಧ್ಯಕ್ಷರೆ, ಯಾವುದೇ ಲಾಬಿಯನ್ನು ಸಾಕಷ್ಟು ಬೆಳೆಸಿ ಬಿಟ್ಟು ಈಗ ಈಲ್ಡ್ ಆಗುವುದಿಲ್ಲ ಅಂದರೆ ಏನು ಅರ್ಥವಿಲ್ಲ. ಲಾಬಿಗಳನ್ನು ಬೆಳೆಸಿದ ಮೇಲೆ ಅದರ ಕೆಲಸ ಆಗುತ್ತದೆ ಲಾಬಿಗಳು ಇರಬೇಕಾದ ಅಗತ್ಯ ಇದೆಯೋ. ಜನ ಕುಡಿಯುವದನ್ನು ತಪ್ಪಿಸುವುದಕ್ಕೆ ಆಗುವುದಿಲ್ಲ ಎಂದು ಇದ್ದರೂ ಕೂಡ ಕುಡಿಯುವುದಕ್ಕೆ ಈಗಿರುವ ವ್ಯವಸ್ಥೆ ಇರಬೇಕು ಎಂದು ಏನೂ ಆಯ್ತು ಈಗ ಜನ ಕುಡಿಯುತ್ತಾರೆ ಎನ್ನುವುದಕ್ಕೂ ಸರ್ಕಾರ ಸರ್ಕಾರವೇ ಜನರಿಗೆ ಇಷ್ಟು ಹಂಚಿಸಿ ಬರುತ್ತದೆ. ಎನ್ನುವುದಕ್ಕೂ ಬಹಳ ವ್ಯತ್ಯಾಸವಿದೆ. ನೀವು ಸೆಟ್ಲಿಟಿಯನ್ನು ಇಟ್ಟುಕೊಂಡು ಚರ್ಚೆ ಮುಗಿದೇ ಹೋದರೆ ಅದು ಡಿರೇಲ್ ಆಗುತ್ತದೆ ಅಷ್ಟೆ.

ಶ್ರೀ ಬಿ. ಬಸವಲಿಂಗಪ್ಪ:- ಮಾನ್ಯ ಅಧ್ಯಕ್ಷರೇ, ಈಗ ನಮ್ಮದೊಂದು ನಿರ್ಧಾರ. ಏನೆಂದರೆ, ಅವರಿಗೆ ಕುಡಿಸಬಾರದು ಎಂಬ ನಿರ್ಧಾರ ಏನಿದೆ ಇದು ಅಚಲವಾಗಿರತಕ್ಕಂಥ ನಿರ್ಧಾರ. ಸಾಹುಕಾರರು, ಶ್ರೀಮಂತರು ಏನಿದ್ದಾರೆ ಅವರು ಕುಡಿಯುವುದಕ್ಕೆ ನಮ್ಮದೇನೂ ಅಭ್ಯಂತರವಿಲ್ಲ, ಅವರಿಗೆ ತೆರಿಗೆ ಹಾಕಿ ಕುಡಿಸಿ. ಇಗ ನೀವು ಏನು ಮಾಡುತ್ತಿದ್ದೀರಿ ಅಂದರೆ, ಬೆಲೆ ಕಡಿಮೆ ಮಾಡಿ 5 ರೂಪಾಯಿ 6 ರೂಪಯಿ. 10 ರೂಪಾಯಿ ಕಡಿಮೆ ಮಾಡಿ ನೀವು ಬಡವರಿಗೆ ಕುಡಿಸಿ, ಅವರು ಕುಡಿಯುವುದನ್ನು ಕಸಿದುಕೊಂಡು ಅವರ ಸಂಸಾರವನ್ನು ಹಾಳುಮಾಡುವಂಥ ಪ್ರವೃತ್ತಿ ಏನಿದೆ ಇದು ಸರ್ಕಾರಕ್ಕೆ ಇರಬಾರದು. ಇದಕ್ಕೆ ಸರ್ಕಾರ ನೇರವಾಗಿ ಪ್ರೋತ್ಸಾಹ ಕೊಡಕೂಡದು. ಸೆಕೆಂಡ್ಸ್ ಮಾರಾಟ ಡೈರೆಕ್ಟ್ ಆಗಲಿ, ಯಾವುದಾದರೂ ಆಗಲಿ ಪ್ರೋತ್ಸಾಹ ಮಾಡಲೇಬಾರದು. ಆದರೆ ನೀವು ಪ್ರೋತ್ಸಾಹ ಮಾಡಿದಿರಿ. ಆದ್ದರಿಂದ ದಯಮಾಡಿ ನಿಮ್ಮ ಜನತಾ ಪಕ್ಷದ ನೀತಿಯನ್ನು ಬದಲಾವಣೆ ಮಾಡಿ. ಇದು ಒಂದು ಇನ್ನು ಎರಡನೆಯದು, ದಲಿತರ ಕೇರಿಗಳಲ್ಲಿ ನೀವು ಹೆಂಡದ ಅಂಗಡಿಗಳನ್ನು ಬೀರು, ಬ್ರಾಂದಿ ಷಾಪುಗಳನ್ನು ಇಡಲಿಕ್ಕೆ ಒತ್ತಾಯಮಾಡಿ ಇಡುತ್ತಿದ್ದೀರಿ. ಇದಕ್ಕೆ ಏನು ಕಾರಣ. ನಾವು ಈ ಸದನದಲ್ಲಿ ಹಲವಾರು ಬಾರಿ ಹೇಳಿದ್ದೇವೆ. ಮಾನ್ಯ ಮುಖ್ಯ ಮಂತ್ರಿಗಳು ನಿಮ್ಮ ಸಲಹೆಯನ್ನು ಒಪ್ಪಿಕೊಂಡಿದ್ದೇವೆ. ಇನ್ನು ಮೇಲೆ ದಲಿತರ ಕೇರಿಗಳಲ್ಲಿ. ಬಡವರ ಕೇರಿಗಲ್ಲಿ ಇದು ಆಗ ಬಾರದು ಎಂದು ಹೇಳುತ್ತಾರೆ. ನಾನು ಒಂದು ಉದಾಹರಣೆ ಹೇಳುತ್ತೇನೆ. ಹಾಸನ ಜಿಲ್ಲೆಯ ಹೊಳೆನರಸೀಪುರದಲ್ಲಿ ದಲಿತರ ಕಾಲೋನಿ ಇದೆ. ಅಲ್ಲಿ ಸುಮಾರು 6 ಸಾವಿರ ಓಟುಗಳು ಇವೆ. ಅಲ್ಲಿ ಎಲ್ಲರೂ ಕಾಂಗ್ರೆಸ್‌ನವರೇ

ಇದ್ದಾರೆ. ಅಲ್ಲಿರತಕ್ಕ 2-3 ಜನ ದಲಿತ ಪ್ರತಿನಿಧಿಗಳನ್ನು ಹಿಡಿದುಕೊಂಡು ಅವರ ಮುಖಾಂತರ ದಲಿತರ ಕೇರಿಯಲ್ಲಿ ಶೇಂದಿ ಅಂಗಡಿ ಇಡುವ, ಬ್ರಾಂದಿ ಷಾಪ್ ಇಡುವ ಪ್ರಯತ್ನ ನಡೆಯಿತು. ಅದರಂತೆ ಕಂಟ್ರಾಕ್ಟ್‌ದಾರರಿಗೆ ಜಯ ಸಿಕ್ಕಿತು ಲೈಸೆನ್ಸ್ ಸಿಕ್ಕಿತು. ಅದಕ್ಕೆ ಅಲ್ಲಿನ ಪೋಲೀಸ್ ಅಧಿಕಾರಿಗಳು ಪ್ರೋತ್ಸಾಹ ಕೊಟ್ಟರು. ಆದರೆ, ಅಲ್ಲಿ ವಾಸ ಮಾಡುವ ವಿದ್ಯಾವಂತ ದಲಿತರು ನಮ್ಮ ಕೇರಿಯಲ್ಲಿ ಇಂಥ ಅಂಗಡಿಗಳನ್ನು ತೆಗೆಯಕೂಡದೆಂದು ಪ್ರತಿಭಟನೆ ಮಾಡಿದರು. ಆದರೆ ಸ್ಥಳೀಯ ಪೋಲೀಸರು ಕಂಟ್ರಾಕ್ಟ್‌ದಾರರ ಕಡೆಯಿಂದ ದೂರು ತೆಗೆದುಕೊಂಡು ಬಂದು, ಎಂ.ಎ. ಓದಿ, ಪಿ.ಹೆಚ್.ಡಿ. ಮಾಡಿರುವಂಥ ಪ್ರೊಫೇಸರುಗಳು ಇದ್ದಾರೆ. ಬ್ಯಾಂಕ್ ನೌಕರರುಗಳು ಇದ್ದಾರೆ, ಇವರೆನ್ನೆಲ್ಲಾ ಪೋಲೀಸ್ ವ್ಯಾನಿನಲ್ಲಿ ತುಂಬಿಕೊಂಡು ಹೋಗತಕ್ಕ ಸಾಹಸ ಮಾಡಿದರು. ಇದರ ಹಿನ್ನೆಲೆ ಏನು? ಹೊಳೆನರಸಿಪುರದಲ್ಲಿ ಎಕ್ಸೈಜ್ ಕಂಟ್ರಾಕ್ಟ್‌ದಾರರಿಗೆ ಅನುಕೂಲ ಮಾಡಿಕೊಡುವುದಕ್ಕಾಗಿ ವಿದ್ಯಾವಂತ ದಲಿತರನ್ನು ಅರೆಸ್ಟ್ ಮಾಡಿದ್ದೀರಿ. ನಂತರ ಅವರನ್ನು ಬೇಲ್ ಮೇಲೆ ಬಿಟ್ಟಿದ್ದಾರೆ. ಛಾರ್ಜ್‌ಷೀಟ್ ಹಾಕಿರಬಹುದು, ಛಾರ್ಜ್‌ಷೀಟ್ ಹಾಕಿದರೆ ಏನಾಗುತ್ತದೆ. ಕೇಸುಗಳನ್ನು ಹಾಕುತ್ತಾರೆ, ಹಿರಿಯರಿಗೆ ಹೋಗಬೇಕಾಗುತ್ತದೆ. ನೌಕರ ವರ್ಗದವರು ಕೆಲಸ ಬಿಟ್ಟು ಕೋರ್ಟಿಗೆ ಓಡಾಡುವುದಕ್ಕೆ ಕಷ್ಟವಾಗುವುದಿಲ್ಲವೆ? ಈ ಕೆಲಸ ದಯವಿಟ್ಟು ದಲಿತರು ಜನತಾ ಪಾರ್ಟಿಗೆ ಓಟು ಹಾಕಲಿಲ್ಲ ಎಂದು ಈ ರೀತಿ ಮಾಡಿದ್ದಾರೆ. ಜನತ ಪಾರ್ಟಿ 6-8 ಓಟು ಬಂದಿವೆ. ಯಾವ ರಾಜಕೀಯ ಪಕ್ಷಗಳೇ ಆಗಲಿ ತಮ್ಮ ಪಕ್ಷಕ್ಕೆ ಬೆಂಬಲ ಉದ್ದೇಶದಿಂದ ಇಂಥ ಪ್ರಯತ್ನ ಮಾಡುವುದು ಸಲ್ಲದ ಮಾತಾಗುತ್ತದೆ. ಅದನ್ನು ಮಾಡಿ ಇಂಥ ಕೆಲಸವನ್ನು ಸರ್ಕಾರದವರು ಖಂಡಿತವಾಗಿಯು ಮಾಡಲೇಬಾರದು. ಕೊನೆಯದಾಗಿ ಶ್ರೀನಿವಾಸ್ ಅವರು ಏನೊಂದು ನಿರ್ಣಯ ತಂದಿದ್ದಾರೆ, ಅದು ಸ್ವಾಗತಾರ್ಹವಾಗಿದೆ. ಪಾನ ನಿರ್ಮೂಲನಾ ಮಂಡಳಿಯನ್ನು ಈ ಸರ್ಕಾರ ತೆಗೆಯಬೇಕು, ಇಲ್ಲಿಯವರೆವಿಗೂ ಖಂಡಿಸತಕ್ಕ ಕೆಲಸವನ್ನು ಇವರು ಇಟ್ಟುಕೊಂಡು ಬಂದಿದ್ದಾರೆ. ಅದನ್ನು ಇವತ್ತೇ ಕೊನೆಮಾಡಬೇಕು. ಪಾನನಿರೋಧ ಮಾಡುವುದಕ್ಕೆ ಸಂಬಂಧಪಟ್ಟಂತೆ ನಿರ್ಧಾರ ಏನಾದರೂ ಇದ್ದರೆ ಅದಕ್ಕೆ ಸಂಬಂಧಪಟ್ಟಂತೆ ಪಾನನಿರೋಧ ಸಮಿತಿಯನ್ನಾಗಲೀ. ಹೈಪವರ್ ಸಮಿತಿಯನ್ನಾಗಲೀ ನೇಮಕ ಮಾಡಿ, ಅವರು ಏನು ಸಲಹೆ ಮಾಡುತ್ತಾರೆ. ಅದರ ಮೇಲೆ ನಿರ್ಣಯ ತೆಗೆದುಕೊಳ್ಳಿ ಮಾನ್ಯ ಶ್ರೀನಿವಾಸ್ ತಂದಿರುವ ವಿಚಾರಕ್ಕೆ ಶ್ರೀ ಮಾನ್ಯ ಜೆ.ಹೆಚ್. ಪಟೇಲರು ಉತ್ತರ

ಕೊಡುವುದು ಅನಿವಾರ್ಯ. ನಾನು ಕೊಟ್ಟಿರುವ ಸಲಹೆಗಳನ್ನು ಒಪ್ಪಿಕೊಂಡು ಉತ್ತರಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

## 13. ಹಾಲು ಒಕ್ಕೂಟದಲ್ಲಿ ನಿಮ್ಮ ವರ್ಗದವರಿಗೆ ಪ್ರಾತಿನಿಧ್ಯ (11ನೇ ಜುಲೈ 1990)

ಶ್ರೀ ಬಿ. ಬಸವಲಿಂಗಪ್ಪ:- (ಅರಣ್ಯ ಮತ್ತು ಪಶುಸಂಗೋಪನೆ ಮಂತ್ರಿಗಳು) ಮಾನ್ಯ ಅಧ್ಯಕ್ಷರೇ, ಮಾನ್ಯ ವಿರೋಧಪಕ್ಷದ ನಾಯಕರ ಮಾತುಗಳನ್ನು ಆಲಿಸಿದ್ದೇನೆ. ನಿಮಗೆ ಮೆಚ್ಚಿಗೆಯನ್ನು ಕೂಡ ವ್ಯಕ್ತಪಡಿಸುತ್ತೇನೆ. ಎಲ್ಲೆಲ್ಲಿ ಕೆಟ್ಟುಹೋಗಿವೆ, ಅಲ್ಲೆಲ್ಲಾ ಸರಿಪಡಿಸುವುದು ನಮ್ಮ ಕರ್ತವ್ಯ ಅದನ್ನು ತಾವು ಒಪ್ಪುತ್ತೀರಿ ಎಂದು ಕಾಣುತ್ತವೆ.

ಶ್ರೀ ಡಿ.ಬಿ. ಚಂದ್ರೇಗೌಡ:- ಚೆನ್ನಾಗಿರುವ ಕಡೆ ಕೆಡಿಸುವುದಕ್ಕೆ ಹೋಗಬೇಡಿ.

ಶ್ರೀ ಬಿ. ಬಸವಲಿಂಗಪ್ಪ:- ಅದಕ್ಕೆ ನೀವು ನನಗೆ ಸಾಕಷ್ಟು ಸಮಯ ಕೊಡಬೇಕು. ಬೆಂಗಳೂರು ಮಿಲ್ಕ್ ಡೈರಿ ಬಗ್ಗೆ ಮಾತನಾಡಿದ್ದಾರೆ. ಬಹಳ ವಿಷಯಗಳನ್ನು ಸಭೆಯ ಮುಂದಿಟ್ಟಿದ್ದಾರೆ. ಇದು ಮಾಮೂಲಾಗಿ ಬಂದಿರತಕ್ಕದ್ದು ಸ್ಟ್ರೈಕ್ ಬಗ್ಗೆ, ವಿರೋಧಪಕ್ಷದ ನಾಯಕರು ಮಾತನಾಡಿರತಕ್ಕದ್ದು ಇಂತಹ ವ್ಯವಹಾರಗಳ ಬಗ್ಗೆ. ನಾನು ಎಲ್ಲವನ್ನೂ ಈಗಲೇ ಹೇಳುತ್ತೇನೆ. ಮೊದಲು ಸ್ಟ್ರೈಕ್ ಬಗ್ಗೆ. ಏನು ಮಾತು ಕೇಳಿ, ಮುಂದೆ ತಮಗೆ ಉತ್ತರ ಕೊಡುತ್ತೇನೆ. ಅವರು ಸ್ಟ್ರೈಕ್ ನೋಟೀಸ್ ಕೊಟ್ಟಿದ್ದು ನಿಜ. ಹೋದ ತಿಂಗಳು 27ನೇ ತಾರೀಖು ಸ್ಟ್ರೈಕ್ ಆಗಬೇಕಾಗಿತ್ತು. ಸ್ಟ್ರೈಕ್ ನೋಟೀಸ್ ಕೊಟ್ಟವರೇ ಮುಂದಕ್ಕೆ ಹಾಕಬೇಕೆಂದು ಹೇಳಿ, ಮುಂದಕ್ಕೆ ಹಾಕಿಸಿಕೊಂಡಿದ್ದಾರೆ. ಸೂಕ್ತ ಕ್ರಮ ತೆಗೆದುಕೊಳ್ಳಬೇಡಿ ಎಂದು ಹೇಳಿದ್ದಾರೆ. ಅದು ಅಲ್ಲಿಗೆ ಬಿಟ್ಟು ಹೋಯಿತು. ಅದರಲ್ಲಿ ಮಾರ್ಕ್ಸಿಸ್ಟ್ ಪಕ್ಷದ ಯೂನಿಯನ್‌ನವರು ಇದ್ದರು. ಅವರು ತುಮಕೂರು ಯೂನಿಯನ್‌ನಲ್ಲಿ ಸಹ ಆದೇಶ ಮಾಡಿದರು. ತುಮಕೂರು ಯೂನಿಯನ್‌ನಲ್ಲಿ ಯಾವ ರೈತರು ವ್ಯವಹಾರ ನಡೆಸುತ್ತಿದ್ದರು ಇವರು ಬಹಳ ನಷ್ಟ ಮಾಡಿದರು. ನಂತರ ಬೆಂಗಳೂರು ಯೂನಿಯನ್‌ನಲ್ಲಿ ಕೈಹಾಕಿದರು. ಯಾರು ಇಲ್ಲಿ ಕೈ ಹಾಕಿ ಮತ್ತೆ ಇದನ್ನು ಸಹ ಕೆಡಿಸತಕ್ಕ ಪ್ರವೃತ್ತಿ ನಮಗೆ ಕಂಡುಬಂದಿದ್ದರಿಂದ ಸ್ವಲ್ಪ ನಾವು ನಿಲುವು ತಳೆದಿದ್ದೇವೆ. ಈ ಕೆ.ಎಂ.ಎಫ್. ಆರ್ಗನೈಸೇಷನ್ ಇಡೀ ಇಂಡಿಯಾ

ದೇಶದಲ್ಲಿಯೇ ಮೊಟ್ಟ ಮೊದಲನೇ ಸಂಸ್ಥೆ, ಸುಮಾರು ಇದರ ವ್ಯವಹಾರ 255 ಕೋಟಿ ರೂಪಾಯಿಗಳು. ಇಷ್ಟು ದಾಖಲೆಯಾಗಿ ನಡೆಯತಕ್ಕ ಸಂಸ್ಥೆ ಇನ್ನೊಂದಿಲ್ಲ. ಈಗ ಇದರ ವ್ಯವಹಾರ 9 ಜಿಲ್ಲೆಗಳಲ್ಲಿ ಮಾತ್ರ ನಡೆಯುತ್ತದೆ. ಹೆಚ್ಚಿನ ಹಣವನ್ನು ತಂದು ಎಲ್ಲ ಜಿಲ್ಲೆಗಳಲ್ಲಿಯೂ ಈ ಸಂಸ್ಥೆಯನ್ನು ಕಟ್ಟುವ ಉದ್ದೇಶವನ್ನು ಸರ್ಕಾರ ಇಟ್ಟುಕೊಂಡಿದೆ. ಇದರಲ್ಲಿ ದುರುದ್ದೇಶ ಏನೂ ಇಲ್ಲ. ಅದಕ್ಕೋಸ್ಕರ ವಿಶೇಷ ಘಟಕ ಯೋಜನೆಯಲ್ಲಿ ನಾವು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ. ಇದನ್ನು ಯಾವ ರೀತಿ ವಿಸ್ತರಣೆ ಮಾಡಬೇಕೆಂದು ಯೋಚನೆ ಮಾಡಿದ್ದೇವೆ. ಆದ್ದರಿಂದ ತಾವು ಸರ್ಕಾರದ ಉದ್ದೇಶದ ಬಗ್ಗೆ ಯಾವ ರೀತಿಯಲ್ಲಿಯೂ ಅನ್ಯಥಾ ಯೋಚನೆ ಮಾಡಬೇಡಿ. ಅದರಲ್ಲಿಯೂ ನನ್ನಲ್ಲಿ ನಿಮಗೆ ನಂಬಿಕೆ ಇದ್ದರೆ. ನನ್ನ ವ್ಯವಹಾರದಲ್ಲಿ ನಂಬಿಕೆ ಇದ್ದರೆ ದಯಮಾಡಿ ಅನ್ಯಥಾ ಯೋಚನೆ ಮಾಡಬೇಡಿ. ಸ್ಟ್ರೈಕ್ ಇಲ್ಲ. ತಾವು ಒಂದು ವಿಚಾರ ಹೇಳಿದ್ದೀರಿ. ನಾಳೆ ಹೇಳಿದ್ದರೆ ಚೆನ್ನಾಗಿತ್ತು. ನಾನು ಮಂತ್ರಿಯಾದ ಮೇಲೆ ಬೆಂಗಳೂರು ಮಿಲ್ಕ್ ಯೂನಿಯನ್‌ಗೆ ಭೇಟಿ ಕೊಟ್ಟಿದ್ದೇನೆ. ಅಲ್ಲಿನ ನಡವಳಿಕೆಗಳ ಬಗ್ಗೆ ನಾನು ತನಿಖೆ ಮಾಡಿದ್ದೇನೆ. ಈ ಬಗ್ಗೆ ನನ್ನ ಹತ್ತಿರ ಒಂದು ನೋಟೀಸ್ ಇದೆ. ಹಾಗೂ ಅದನ್ನು ಕಳುಹಿಸುತ್ತೇನೆ. ತಾವು ಹೇಳಿದ ಹಾಗೆ ಒಂದು ವರ್ಷಕ್ಕೆ ಸುಮಾರು 90 ಕೋಟಿ ರೂಪಾಯಿಗಳ ವ್ಯವಹಾರ ಇದೆ ಈ ವ್ಯವಹಾರದ ಬಗ್ಗೆ ಏನು ಲೆಕ್ಕಗಳು ಇವೆ. ಅವುಗಳನ್ನು ಪರಿಶೀಲನೆ ಮಾಡಿದಾಗ ಕಳೆದ ಮೂರು ವರ್ಷಗಳ ಆಡಿಟ್ ರಿಪೋರ್ಟ್ ಇಲ್ಲ. ಜೊತೆಗೆ ಅಲ್ಲಿರತಕ್ಕ ನೌಕರರು ಲೆಕ್ಕಪತ್ರಗಳನ್ನು ಸರಿಯಾಗಿ ಇಟ್ಟಿರಲಿಲ್ಲ, ಇದೊಂದೇ ಅಲ್ಲ. ಅಲ್ಲಿ ಕೆಲಸ ಮಾಡಲು ಸುಮಾರು 500 ಜನ ನೌಕರರು ಬೇಕು. ಈಗ ಎಷ್ಟು ಜನರು ಇದ್ದಾರೆ 1100 ಜನ ಇದ್ದಾರೆ ಲಾಭ ಹೇಗೆ ಆಗುತ್ತದೆ ಹೇಳಿ ಇದರಲ್ಲಿ ಈಗ ನಾವು ಅಲ್ಲಿಂದ ಸುಮಾರು 600–300 ಜಮ ತೆಗೆದರೆ ಹೆಚ್ಚಿನ ಲಾಭ ಸಂದಾಯವಾಗುತ್ತದೆ. ಈಗ ತೆಗೆಯುವುದು ಬಿಡುವುದು ಏನು ವಿಚಾರ ಅಂತ ಯೋಚನೆ ಮಾಡಿದ್ದೇನೆ ಇವರನ್ನು ಇಲ್ಲಿ ಇಟ್ಟುಕೊಂಡು ಇಷ್ಟು. ಅನಾವಶ್ಯಕವಾದ ಸಿಬ್ಬಂದಿ ಇಟ್ಟುಕೊಂಡು ಹೆಚ್ಚು ಲುಕ್ಸಾನನ್ನು ನಾವು ಈ ಕೆ.ಎಂ.ಎಫ್.ಗೆ ಈ ಸಂಸ್ಥೆಗೆ ಆಗುವುದನ್ನು ತಡೆಯಬೇಕಾದರೆ, ಈ ನೌಕರರು ಬೇರೆ ಯೂನಿಯನ್‌ಗೆ ವರ್ಗಾವಣೆ ಮಾಡಲೇಬೇಕು. ವರ್ಗಾವಣೆ ಯಾರು ಮಾಡುತ್ತಾರೆ? ಈಗ ಡಿಸ್ಟ್ರಿಕ್ಟ್ ಯೂನಿಯನ್ಸ್‌ನಲ್ಲಿ ಎಲ್ಲಾ ಅವರೇ ಸ್ವತಂತ್ರರು ಎಂದು ಇಟ್ಟುಕೊಳ್ಳೋಣ. ಇದು ಒಂದು ವ್ಯವಸ್ಥೆ. ಕೆ.ಎಂ.ಎಫ್. ಅಂದರೆ ಇದು ಒಂದು ಫೆಡರೇಷನ್

ವ್ಯವಸ್ಥೆಯಲ್ಲಿ ಎಲ್ಲಾ ಯುನಿಯನ್‌ಗಳು ಕೆಲಸ ಮಾಡಬೇಕು. ಒಂದು ವ್ಯವಸ್ಥೆ ಆದಮೇಲೆ ಇಲ್ಲಿರತಕ್ಕಂಥ ನೌಕರರನ್ನು ನಾವು ಬೇರೆ ಕಡೆಗೆ ವರ್ಗಾವಣೆ ಮಾಡಲಿಕ್ಕೆ ಇಲ್ಲಿರತಕ್ಕಂಥ ನೌಕರರನ್ನು ನಾವು ಬೇರೆ ಕಡೆಗೆ ವರ್ಗಾವಣೆ ಮಾಡಬಹುದಲ್ಲ. ವರ್ಗಾವಣೆ ಮಾಡಲಿಕ್ಕೆ ಯೂನಿಯನ್‌ನವರು ಒಂದು ನಿರ್ಣಯ ಮಾಡಬೇಕು. ಅವರು ಇಲ್ಲ ಅಂದರೆ ನಾವು ಸುಮ್ಮನೆ ಇರಬೇಕು. ಕೈಕಟ್ಟಿಕೊಂಡು ಕುಳಿತಿರಬೇಕು. ಈಗ ಅಲ್ಲಿನ ಮ್ಯಾನೇಜಿಂಗ್ ಡೈರೆಕ್ಟರ್ ಬಗ್ಗೆ ಬಹಳ ಪ್ರಸ್ತಾಪ ಮಾಡಿದ್ದೀರಿ. ಹೋದ ಮ್ಯಾನೇಜಿಂಗ್ ಡೈರೆಕ್ಟರ್ ಬಗ್ಗೆ ನಾನು ಹೇಳಿದ್ದೇನೆ. ಅದರ ನಂತರ ನಾನು ಮಾಡಿದ್ದೇನೆ. ನಾನು ಸುಮ್ಮನೆ ಬೇಕಾಬಿಟ್ಟಿ ಅವರನ್ನು ತರಬೇಕು, ಇವರನ್ನು ಕಳುಹಿಸಬೇಕು ಎಂದು ತಾನು ಏನೂ ಮಾಡಿಲ್ಲ. ಆ ರಿಪೋರ್ಟ್ ಬಂದಮೇಲೆ ಅವರಿಗೆ ನಾನು ಕಳುಹಿಸಿದ್ದೇನೆ. ನಾನು ಸ್ಟೋರ್‌ಗೆ ಹೋಗಿದ್ದೆ ಸ್ಟೋರ್‌ನಲ್ಲಿ ಸರಿಯಾಗಿರತಕ್ಕಂಥ ವ್ಯವಸ್ಥೆ ಇರಲಿಲ್ಲ. ಆಗಿಂದಾಗ್ಗೆ ಸ್ಟ್ರೈಕ್ ಮಾಡುವುದು ನಡೆಯುತ್ತಿತ್ತು. ಹೀಗಾಗಿ ನಾವು ಮಾಡಿದ್ದೇವೆ. ಈಗ ಬಂದಿರತಕ್ಕ ಮ್ಯಾನೇಜಿಂಗ್ ಡೈರೆಕ್ಟರ್ ಏನಿದ್ದಾರೆ ತಾವು ಅವರ ಬಗ್ಗೆ ಬಹಳ ದೂರುಗಳನ್ನು ಹೇಳಿದ್ದೀರಿ. ಡಿಪಾಸಿಟ್ಸ್ ಬಗ್ಗೆ ಹೇಳಿದ್ದೀರಿ. ಲುಕ್ಸಾನು ಬಗ್ಗೆ ಹೇಳಿದ್ದೀರಿ. ಎಲ್ಲಾ ಹೇಳಿದ್ದೀರಿ, ನಾನು ತಮಗೆ ಸದನದಲ್ಲಿ ಹೇಳಬೇಕು. ನಾನು ಒಂದು ವರ್ಗದಿಂದ ಹೇಳುತ್ತಿದ್ದೇನೆ. ಇವರಷ್ಟು ದಕ್ಷ ಮ್ಯಾನೇಜಿಂಗ್ ಡೈರೆಕ್ಟರ್ ಇನ್ನೊಬ್ಬರು ಇಲ್ಲ ಅವರಿಗೆ ಅಷ್ಟೇ ಕ್ವಾಲಿಫಿಕೇಷನ್ ಇದ್ದಾವೆ. ಮತ್ತೆ ಅದೇ ವ್ಯವಹಾರವು ಅಷ್ಟೇ ಚೆನ್ನಾಗಿದೆ. ಅವರು ಸತ್ಯಸಂಧತೆಯಿಂದ ಕೆಲಸ ಮಾಡುತ್ತಿದ್ದಾರೆ. ಅವರು ನುರಿತವರಿದ್ದಾರೆ. ಇಲ್ಲಿ ಏನಾಗಿದೆ, ಇಷ್ಟು ವ್ಯವಹಾರದಲ್ಲಿ ಕೆಲವರಿಗೆ ಹೊಟ್ಟೆಕಿಚ್ಚು ಬರುತ್ತದೆ. ಹೊಟ್ಟೆಯುರಿ ಬರುತ್ತದೆ. ಯಾರೋ ಒಬ್ಬ ಅನಾಮಧೇಯ ತನ್ನ ದಕ್ಷತೆಯ ಆಧಾರದ ಮೇಲೆ ಏನೋ ಒಂದು ಅಧಿಕಾರಕ್ಕೆ ಬರುತ್ತಾನೆ. ಅವರ ಬಗ್ಗೆ ದೂರು ಹೇಳತಕ್ಕಂಥಾದ್ದು ಹೊಟ್ಟೆಕಿಚ್ಚು ಪಡತಕ್ಕಂಥಾದ್ದು ವಾಸ್ತವ ಇರುತ್ತದೆ. ಅವರು ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ. ನಾನು ತಮಗೆ ಇಷ್ಟೇ ಹೇಳುತ್ತೇನೆ. ಈ ಅಧಿಕಾರಿ ದಕ್ಷರು ಎಂದುಕೊಂಡು ಮನವರಿಕೆಯಾಗಿದೆ. ಸರಿಯಾಗಿ ಕೆಲಸ ಮಾಡುತ್ತಿದ್ದಾರೆ. ಅವರು ಸರಿಯಾಗಿ ಕೆಲಸ ಮಾಡುವುದಿಲ್ಲ ಎಂದು ನನಗೆ ಮನವರಿಕೆಯಾದರೆ ಅವರನ್ನು ನಾನು ಅಲ್ಲಿ ಇಟ್ಟುಕೊಳ್ಳುವುದಿಲ್ಲ. ದಕ್ಷರಲ್ಲದವರನ್ನು ತೆಗೆಯಲೇಬೇಕಾಗುತ್ತದೆ. ಈಗ ಹಾಸನದಲ್ಲಿ ಮಿಲ್ಕ್ ಯೂನಿಯನ್ ಇದೆ ಅದರ ಬಗ್ಗೆ ನಾವು ವಿಚಾರ ಮಾಡುತ್ತೇವೆ. ಅದೆಷ್ಟು ದೂರುಗಳು, ಮಾನ್ಯ

ಹನುಮೇಗೌಡ ಇದ್ದಾರೋ ಇಲ್ಲವೋ ಗೊತ್ತಿಲ್ಲ. ಹನುಮೇಗೌಡ ಇಷ್ಟು ಗಾತ್ರದ್ದು ಒಂದು ಕಟ್ಟು ತಯಾರು ಮಾಡಿದ್ದಾರೆ. ಅದರ ಬಗ್ಗೆ ವಿಚಾರ ಮಾಡಿಸಿದೆ, ಅದರ ಬಗ್ಗೆ ಒಂದು ರಿಪೋರ್ಟ್ ಬಂದಿದೆ ನಾವು ಅವರನ್ನು ಅಲ್ಲಿ ಇಡಬೇಕೋ, ಅಥವಾ ಬೇರೆ ಕಡೆಗೆ ವರ್ಗಾವಣೆ ಮಾಡಬೇಕೋ ಎನ್ನತಕ್ಕ ಪ್ರಶ್ನೆ ಇದೆ. ಹೀಗೆ ಸರ್ಕಾರಕ್ಕೆ ಏನೂ ಅಧಿಕಾರ ಇಲ್ಲ. ಮತ್ತೆ ಅವರು ಸ್ವತಂತ್ರರು ಎಂದು ಹೇಳುವುದಾದರೆ ನಾನು ಒಂದು ಮಾತು ಹೇಳುತ್ತೇನೆ. ಎಲ್ಲಾ ಯೂನಿಯನ್ ಕಾಂಟ್ರಿಬ್ಯೂಷನ್ ಕೆ.ಎಂ.ಎಫ್.ಗೆ ಕೊಟ್ಟಿರತಕ್ಕಂತಾದ್ದು 33 ಲಕ್ಷ ಮಾತ್ರ. ಬಂಡವಾಳ ಎಷ್ಟು ಇದೆ ಸರ್ಕಾರಕ್ಕೆ ನಾವು ಗ್ಯಾರಂಟಿ ಕೊಟ್ಟಿರುವುದು. ಬೇರೆ ಒಂದು ಫೈನಾನ್ಷಿಯಲ್ ಇನ್ಸ್ಟಿಟ್ಯೂಷನ್‌ನಿಂದ ತಂದಿರತಕ್ಕದ್ದು ಸುಮಾರು 150 ಕೋಟಿ ರೂಪಾಯಿ ಇದೆ. ಈ 150 ಕೋಟಿ ರೂಪಾಯಿಗೆ ಸರ್ಕಾರ ಗ್ಯಾರಂಟಿ ಕೊಟ್ಟಿದೆ. ಅದರೂ ಸರ್ಕಾರಕ್ಕೆ ಏನು ಅಧಿಕಾರ ಇಲ್ಲ. ಯೂನಿಯನ್‌ಗೆ ಎಲ್ಲಾ ಸ್ವತಂತ್ರ ಕೊಡಬೇಕು, ಸಹಕಾರ ಸಂಸ್ಥೆ ಅಂದರೆ ಸರ್ವ ಸ್ವತಂತ್ರ್ಯ ಕೊಡಬೇಕು ಪ್ರಜಾಪ್ರಭುತ್ವ ಅಂದರೆ ಎಲ್ಲರಿಗೂ ಏನು ಬೇಕಾದರೂ ಮಾಡಲಿಕ್ಕೆ ಸ್ವೇಚ್ಛಾವೃತ್ತಿ ಮಾಡಲಿಕ್ಕೆ ಅವರಿಗೆ ಅವಕಾಶ ಕೊಡಬೇಕು ಎಂದು ತಮ್ಮ ಅಭಿಪ್ರಾಯ ಏನಿದೆ, ಅದಕ್ಕೆ ನಾನು ಒಪ್ಪುವುದಿಲ್ಲ. ನಮ್ಮ ಸರ್ಕಾರದ ಹಣ ಗ್ಯಾರಂಟಿ ಕೊಟ್ಟಿರತಕ್ಕ ಹಣ, ಅದನ್ನು ನಾವು ರಕ್ಷಣೆ ಮಾಡಲೇಬೇಕು. ಈಗ ನೀವು 33 ಲಕ್ಷ ಮಾತ್ರ ಕಾಂಟ್ರಿಬ್ಯೂಷನ್ ಮಾಡಿರತಕ್ಕವರು ಆದ್ದರಿಂದ ನಿಮಗೆ ಎಷ್ಟು ಅಧಿಕಾರ ಇರಬೇಕು ಎನ್ನುವುದರ ಬಗ್ಗೆ ತಾವು ಸಹಕಾರ ಸಂಸ್ಥೆಯ ಆಕ್ಟ್‌ಗಳನ್ನು ತಾವು ಓದಿರಬೇಕು. ಇದರಲ್ಲಿ ನಮ್ಮ ಪಾತ್ರ ಏನು ಬೇಕು ಸರ್ಕಾರದ ಪಾತ್ರ ಏನಿರಬೇಕು ಎಂಬುದೆಲ್ಲಾ ತಮಗೆ ಗೊತ್ತಿದೆ. ನಾನು ಅದನ್ನು ಹೇಳಲಿಕ್ಕೆ ಹೋಗುವುದಿಲ್ಲ. ನಾನು ಹೇಳುತ್ತಿದ್ದೇನೆ. ಈ ಕೆ.ಎಂ.ಎಫ್.ಗೆ ಅಂತ ನಾವು ಏನು ಸಾಲ ತೆಗೆದುಕೊಂಡಿದ್ದೇವೆ ಹಾಗೂ ಗ್ಯಾರಂಟಿ ಕೊಟ್ಟುಬಿಟ್ಟು ನಾವು ಸಾಲವನ್ನು ಪಡೆದಿದ್ದೇವೆ. ಅದನ್ನು ನೀವು ಯೂನಿಯನ್‌ನವರು ಎಲ್ಲಾ ಕಷ್ಟಪಟ್ಟು ಸಂಪಾದನೆ ಮಾಡಿ ಸಾಲ ವಾಪಸ್ಸು ಕೊಟ್ಟರೆ ಈ ಕೆ.ಎಂ.ಎಫ್. ನಿಮಗೆ ವಾಪಸ್ಸು ಕೊಡುತ್ತೇನೆ. ಅದನ್ನು ನಿಮಗೆ ಪರಭಾರೆ ಮಾಡುತ್ತೇವೆ. ನೀವೇ ತೆಗೆದುಕೊಳ್ಳಿ ಅಲ್ಲಿ ನಮಗೆ ಸ್ವಲ್ಪವೂ ಹಿಡಿತವಿಲ್ಲದಿದ್ದರೆ ಹೇಗೆ ಎಂಬುದನ್ನು ತಾವೇ ಹೇಳಬೇಕು. ನಾನು ತಮಗೆ ಒಂದು ಮಾತನ್ನು ಹೇಳುತ್ತೇನೆ. ಇಲ್ಲಿಯ ಯೂನಿಯನ್‌ಗಳಲ್ಲಿ ನೂರಾರು ಜನರನ್ನು ನೇಮಕಾತಿ ಮಾಡಿಕೊಳ್ಳುತ್ತಿದ್ದಾರೆ. ಆದರೆ ಬಡವರನ್ನು ನೇಮಕ ಮಾಡಬೇಕೆಂದು ಯಾರ

ಮನಸ್ಸಿನಲ್ಲೂ ಇಲ್ಲಿ ಯಾರು ಅಲ್ಲಿ ಅಧ್ಯಕ್ಷರಾಗಿರುತ್ತಾರೆ, ಅವರಿಗೆ ಬೇಕಾದವರನ್ನು ಅಲ್ಲಿ ನೇಮಕ ಮಾಡಿಕೊಳ್ಳುತ್ತಾರೆ. ಉದಾರಹಣೆ ಹೇಳುವುದಾದರೆ. ನಿಮ್ಮ ವರ್ಗದವರು ಯಾರಿದ್ದಾರೆ. ಅವರಿಗೆ ಶೇಕಡ 18 ರಷ್ಟು ಹುದ್ದೆಗಳನ್ನು ರೋಸ್ಟರ್ ಸಿಸ್ಟಮ್ ಪ್ರಕಾರ ನೀಡಬೇಕಾಗುತ್ತದೆ. ಆದರೆ ಅವರು ಒಬ್ಬರನ್ನು ನೇಮಕ ಮಾಡಿಕೊಳ್ಳದಿದ್ದರೆ ಏನು ಮಾಡಬೇಕು? ಅಂಥ ಜಾಗದಲ್ಲಿ ಕೋ ಆಪರೇಟಿವ್ ಸೊಸೈಟೀಸ್ ಆ್ಯಕ್ಟ್‌ನ ನಿಯಮ 30(ಬಿ) ಪ್ರಕಾರ ನಾವು ನಿರ್ದೇಶನವನ್ನು ಕೊಡಬೇಕಾಗುತ್ತದೆ. ಆದರೆ ನೀವು ನಿರ್ದೇಶನ ಕೊಡಬಾರದೆಂದು ಹೇಳಿ, ಒಂದು ವೇಳೆ ಕೊಟ್ಟರೆ ನಾವು ಕೋರ್ಟ್‌ಗೆ ಹೋಗುತ್ತೇವೆಂದು ಹೇಳುವುದಾದರೆ ಹೋಗಿ, ಸಹಕಾರ ಸಂಘಗಳ ಆ್ಯಕ್ಟ್ 54ರ ಪ್ರಕಾರ ನಾವು ಎಕ್ಸ್‌ಟ್ರಾರ್ಡಿನರಿ ಗೆಜೆಟ್ ನೋಟಿಫಿಕೇಷನ್‌ನ್ನು ಮಾಡಿ ಅಧಿಕಾರ ತೆಗೆದುಕೊಂಡಿದ್ದೇವೆ. ಮತ್ತೆ ಒಂದು ಯೂನಿಯನ್‌ನಲ್ಲಿ ಎಷ್ಟು ದಿನಗಳವರೆಗೆ ಒಬ್ಬ ಸರಳ ಮ್ಯಾನೇಜಿಂಗ್ ಡೈರೆಕ್ಟರ್ ಇರಬೇಕು. ಅವರನ್ನು ಟ್ರಾನ್ಸ್‌ಫರ್ ಮಾಡಬೇಕಾದರೆ ಕೆ.ಎಂ.ಎಫ್. ನವರೇ ಮಾಡಬೇಕು. ಅದನ್ನು ಯೂನಿಯನ್‌ನವರು ಮಾಡುವುದಿಲ್ಲ. ಮೊನ್ನೆ ಕೆ.ಎಂ.ಎಫ್. ನ ಎಲ್ಲ ಯೂನಿಯನ್ಸ್ ಪ್ರೆಸಿಡೆಂಟ್‌ಗಳೂ ಬಂದು ನನ್ನನ್ನು ಕಂಡರು ನಾನು ಅವರಿಗೆ ಒಂದು ಮಾತನ್ನು ಹೇಳಿದೆ ಯಾವ ಆರ್ಡರ್ ಏನೇ ಇರಲಿ. ಈಗ ನೀವು ಸೆಲೆಕ್ಟ್ ಆದ ನೀವು ಹೇಳಿದಂತೆ ನಾನು ಕೇಳುತ್ತೇನೆಂದು ಹೇಳಿದೆ. ಇನ್ನು 2 ದಿನ ಅವಕಾಶ ಕೊಡಿ ಎಂದು ಕೇಳಿದರು ಇವತ್ತು 11ನೇ ತಾರೀಖು. ಇವತ್ತಿನವರೆಗೂ ಅವರು ಬರಲಿಲ್ಲ. ಅವರು ಸಲಹೆ ಕೊಡಲಿಕ್ಕೆ ತಯಾರಿಲ್ಲ. ಅವರಿಗೆ ನಾವು ಬುದ್ಧಿ ಹೇಳಲಿಕ್ಕೆ ಆಗುತ್ತಿಲ್ಲ. ಅವರು ಕೋರ್ಟಿಗೆ ಹೋಗಲು ತಯಾರಿದ್ದಾರೆ. ನೀನು ಹೇಳುತ್ತೇನೆ. ನೀವು ಹೇಳುವುದಕ್ಕೆ ನಾನು ವಿರುದ್ಧವಾಗಿ ಹೋದರೆ ನೀವು ಎಲ್ಲಿಗೆ ಬೇಕಾದರೂ ಹೋಗಿ. ಎಲ್ಲ 19 ಜಿಲ್ಲೆಗಳಿಗೂ ವ್ಯಾಪಕವಾಗಿ ಈ ಸಂಸ್ಥೆಯನ್ನು ಸ್ಥಾಪನೆ ಮಾಡಿ ಬಡವರಿಗೆ ನಾವೆಲ್ಲರೂ ಸಹಾಯ ಮಾಡೋಣ, ಅವರ ಸೇವೆ ಮಾಡೋಣವೆಂದು ನಾನು ತಮಗೆ. ಕಳುಹಿಸಿದ್ದೇನೆ. ಆದರೆ ಅವರು ಇದುವರೆಗೂ ಬರಲಿಲ್ಲ. ಹೀಗಾದರೆ ನಾವು ಯಾವರೀತಿ ಅದನ್ನು ನಂಬಬೇಕು? ಏನು ಮಾಡಬೇಕು? ನೀವೇ ಹೇಳಿ. Do you admit that as have some responsibility? Do you admit that this Government administrative capacity?

**Sri D.B.Chandre Gowda:-** Yes. You have full responsibility at where that law permits.

**Sri B. Basavalingappa:-** I am going by the law. I am using the weapon of law. I will carry out the purpose of law to safe pard the interest of the K.M.F. and the property interests of the K.M.F. ಆದ್ದರಿಂದ ನಾನು ಹೇಳುತ್ತಿದ್ದೇನೆ. ನನ್ನಿಂದ ಏನಾದರೂ ಲೋಪವಾಗಬೇಕು. ಅಲ್ಲದಿದ್ದರೆ, ನಾನು ನಿಮ್ಮ ಮಾತನ್ನು ಕೇಳಲಿಲ್ಲ ಎಂದು ನಿದರ್ಶನವಾಗಬೇಕು ಅಲ್ಲವೆ? ನೀವು ತಿಳಿದಂತೆ ನಾನು ಕೇಳುತ್ತೇನೆಂದರೂ ಕೂಡ. ನೀವು ಕೋರ್ಟಿಗೆ ಹೋಗಿ ಸ್ಟೇ ಆರ್ಡರ್ ತಂದರೆ ಏನು ಮಾಡಬೇಕು? ಸರ್ಕಾರಕ್ಕೆ ಪ್ರತಿಷ್ಠೆ ಇಲ್ಲವೆ? ನನಗೆ ಪ್ರತಿಷ್ಠೆ ಇಲ್ಲವೆ? ನನಗೆ ಉಂಟು. ನಾನು ಅದನ್ನೇ ಜಾರಿ ಮಾಡುತ್ತೇನೆ. ನೀವು ಹೇಳಿದಂತೆ ಕೇಳುತ್ತೇನೆಂದು ಹೇಳಿದ್ದೇನೆ. ನಾನು ಹೇಳಿದಂತೆ ನೀವು ಕೇಳುವುದೂ ಇಲ್ಲ ಮತ್ತು ನಿಮ್ಮ ಮಾತಿಗೆ ತಕ್ಕಂತೆ ನೀವು ನಡೆಯುವುದೂ ಇಲ್ಲ ಎಂದರೆ ಹೇಗೆ? ಇದರಲ್ಲಿ ಏನು ಲೋಪ ಇದೆ? ಈಗ ನೀವು ವಿಚಾರಗಳನ್ನು ಹೇಳಿದ್ದೀರಿ. ಅವುಗಳ ಬಗ್ಗೆ ನಾಳೆ ಕೆಲವು ಮಾತನಾಡಿ. ಈಗ ಇಷ್ಟು ಸಾಕು, ಈಗ ಸ್ಟ್ರೈಕ್ ಬಗ್ಗೆ ನೋಟೀಸ್ ಕೊಟ್ಟಿದ್ದಾರೆ. ಅದನ್ನು ವಿತ್‌ಡ್ರಾ ಮಾಡಿದ್ದಾರೆ, ಅದರ ಬಗ್ಗೆ ನಾನು ಹೇಳಿದ್ದೇನೆ. ಪರಿಸ್ಥಿತಿ ಹೀಗಿದೆ. ನನ್ನ ಜವಾಬ್ದಾರಿ ಹೀಗಿದೆ. ಪ್ರಜಾಪ್ರಭುತ್ವದಲ್ಲಿ ಏನು ಸ್ವಾತಂತ್ರ್ಯ ಇದೆ. ಯೂನಿಯನ್‌ಗೆ ಏನು ಸ್ವಾತಂತ್ರ್ಯ ಇದೆ, ಅದರ ಪ್ರಕಾರ ನೀವು ಬಂದು ಚರ್ಚೆ ಮಾಡಿ. ನಾನು ನಿಮಗೇನಾದರೂ ವಿರುದ್ಧವಾಗಿ ಹೋದರೆ ನೀವು ಕೇಳಿದ್ದನ್ನು ಕೊಡುತ್ತೇನೆ. ನೀವು ಹೇಳಿದಂತೆ ನಾನು ಕೇಳುತ್ತೇನೆಂದು ಹೇಳಿದರೂ ಕೂಡ ಕೆಲವು ಕೋರ್ಟಿಗೆ ಹೋಗಿ ಸ್ಟೇ ತಂದು ಸರ್ಕಾರವನ್ನು ಇಕ್ಕಟ್ಟಿನ ಪರಿಸ್ಥಿತಿಗೆ ತಂದಾಗ, ನಾವು ನಿಲುವು ತೆಗೆದುಕೊಳ್ಳಬೇಕೆಂಬುದನ್ನು ತಾವೇ ಹೇಳಿ.

**ಶ್ರೀ ಡಿ.ಬಿ. ಚಂದ್ರೇಗೌಡ:-** ನೀವು ಪ್ರತಿಷ್ಠೆಯ ಬಗ್ಗೆ ಮಾತನಾಡಿದ್ದೀರಿ. ಆದರೆ ಇಲ್ಲಿ ಶಾಸನಬದ್ಧವಾಗಿ ಕೆಲಸಬೇಕಾಗಿದೆಯೇ ಹೊರತು ವ್ಯಕ್ತಿಯ ಪ್ರತಿಷ್ಠೆಯ ಮೇಲಲ್ಲ. ಇಂಥ ಪ್ರತಿಷ್ಠೆಗಳನ್ನೇ ಹಿಂದಿನ ಜಿಲ್ಲಾ ಪರಿಷತ್ತು ಮತ್ತು ಪಂಚಾಯತ್ ರಾಜ್ಯಗಳ ಬಗ್ಗೆ ಪ್ರದರ್ಶನ ಮಾಡಲಿಕ್ಕೆ ಪ್ರಯತ್ನವನ್ನು ಮಾಡಿದ್ದೀರಿ. ಇಲ್ಲಿ ಚುನಾಯಿತ ಪ್ರತಿನಿಧಿಗಳಿದ್ದಾರೆ. ಅವರಿಗೆ ಬೇಕಾಗಿರತಕ್ಕ ಶಾಸನ ಇದೆ. ಆ ಶಾಸನಕ್ಕೆ ವಿರುದ್ಧವಾಗಿ ನಿಮ್ಮ ಪ್ರತಿಷ್ಠೆಯ ಉತ್ತರವನ್ನು ಕೇಳಲಿಕ್ಕೆ ನಾವು ಇಲ್ಲಿಗೆ ಬಂದಿಲ್ಲ. ಶಾಸನ ಸಭೆಯಲ್ಲಿ ನಾವು ಇರತಕ್ಕದ್ದು ಏತಕ್ಕೆ ಗೊತ್ತೆ? ಶಾಸನ ಬದ್ಧವಾದ ಅಧಿಕಾರವನ್ನು ಮಾತ್ರ ಮಾನ್ಯ ಮಂತ್ರಿಗಳು ನಡೆಸಬೇಕೇ ಹೊರತು ಶಾಸನಕ್ಕೆ ಮೀರಿ ಅಹಿತವಾಗಿ ಮಾಡತಕ್ಕ ನಿಮ್ಮ

ಪ್ರಯತ್ನ ಏನಿದೆ. ಅದನ್ನು ನಾವು ಖಂಡಿಸಲೇಬೇಕಾಗುತ್ತದೆ. ತಾವು ಕೆಲವು ವಿಚಾರಗಳನ್ನು ಹೇಳಿದ್ದೀರಿ. ನಮಗೆ ಇದು ವಿಚಾರ ಗೊತ್ತಿಲ್ಲ. ಆಡಿಟ್ ಆಗಿಲ್ಲವೆಂದು ಹೇಳಿದ್ದಿರಿ, ನಾನು ಇದರಲ್ಲಿ ಇಂಟರ್‌ಫೀಯರ್ ಆಗುವುದಿಲ್ಲ ಆದರೆ ಸರ್ಕಾರಕ್ಕೆ ಯಾವ ಪ್ರತಿಷ್ಠೆ ಇರಬೇಕಾಗಿಲ್ಲ. ಜನಾಭಿಪ್ರಾಯದ ಬಗ್ಗೆ ನಿಮಗೆ ಪ್ರತಿಷ್ಠೆ ಇರಬೇಕು. ಆ ಪ್ರತಿಷ್ಠೆಯಲ್ಲಿ ತಾವು ಯಶಸ್ವಿಯಾಗಿದ್ದೀರಿ. ಈಗ ಜನರ ವಿರುದ್ಧವಾದಂಥ ಕಾನೂನಿನ ಬಗ್ಗೆ ಪ್ರತಿಷ್ಠೆ ಇರಬೇಕೇ ಹೊರತು, ಜನರ ವಿರುದ್ಧವಾದಂಥ, ಅಥವಾ ಚುನಾಯಿತ ಪ್ರತಿನಿಧಿಗಳಿಗೆ ವಿರುದ್ಧವಾದಂಥ ಹಾಗಿದ್ದರೆ ಕೋ ಆಪರೇಟಿವ್ ಆಕ್ಟ್ ಅನ್ನೇ ಶ್ರೀಮಾನ್ ಬಸವಲಿಂಗಪ್ಪನವರ ಪ್ರತಿಷ್ಠೆಗಾಗಿ ವಜಾ ಮಾಡಿಬಿಡಿ. ಇದಕ್ಕೆ ಒಂದು ತನಿಖೆಯಾಗಲಿ. 30 ಎಕರೆ ಜಮೀನನ್ನು ಮುಳುಗಿಸಿದ್ದಾರೆ. ಅದು ನಿಮ್ಮ ಇಲಾಖೆಗೆ ಸೇರಿದೆ, ಈ ಬಗ್ಗೆ ತನಿಖೆಯಾಗಲಿ. ಮತ್ತು ಈ ಇಲಾಖೆಯ ಬಗ್ಗೆ ಹೀಗೆ ಹೇಳುವಾಗ ನೀವು ಏನು ಹೇಳಿದಿರಿ. ಅವ್ಯವಹಾರ ಹಾಸನ ಜಿಲ್ಲೆಯಲ್ಲಿ ನಡೆದಿದೆ. ಎಂದು, ಅನಿಸಿದರೆ ನಡೆದಿದ್ದರೆ ತನಿಖೆ ಮಾಡಿಸಿ ನಾನು ಅದಕ್ಕೆ ಅಡ್ಡಿ ಬರುವುದಿಲ್ಲ. 1 ಕೋಟಿ ಇಪ್ಪತ್ತೊಂಭತ್ತು ಸಾವಿರ ರೂಪಾಯಿ ಲಾಭ ಬಂದಿರತಕ್ಕಂಥದ್ದರಲ್ಲಿ ಏನು ಅವ್ಯವಾಹರ ನಡೆದಿತ್ತು. ಇದು ಮೊದಲು ಆಡಿಟ್ ಆಗಬೇಕು. ಆಡಿಟ್ ಆಗದಿದ್ದರೆ ಆಡಿಟ್ ಮಾಡಿಸತಕ್ಕಂಥ ಕೆಲಸ ನಿಮ್ಮದು. ಆದರೆ ನೀವು ಅಧಿಕಾರ ಇಲ್ಲದಿರುವ ಕಡೆ, ನಿಮಗೆ ಅಧಿಕಾರವೇ ಇಲ್ಲವೆಂದು ಕೋರ್ಟ್ ಹೇಳಿದೆ. ಅದೂ ಹೇಳಿದ್ದರ ಮೇಲೂ ನಿಮಗೆ ಪ್ರತಿಷ್ಠೆ ಇದ್ದರೆ, ಮಾಡಿ. ಆದರೆ ನೀವು ಶಾಸನ ಮೀರಿ ಹೋಗಿದ್ದೀರಿ ಎನ್ನುವುದಕ್ಕೆ ಕೋರ್ಟ್ ಸ್ಟೇ ಆರ್ಡರ್ ಕೊಟ್ಟಿದೆ. ಕೋರ್ಟ್ ಸ್ಟೇ ಆರ್ಡರ್ ಕೊಟ್ಟಿರುವುದರಿಂದ 22ನೇ ಮೇಗೆ ಮತ್ತು 32ನೇ ಜೂನ್‌ಗೆ ನೀವು ಮಾಡಿದ ಎರಡೂ ಆಜ್ಞೆಗಳು ರದ್ದಾದವು ಹೀಗಿದ್ದರೂ ಕೂಡ ನಿಮ್ಮ ಪ್ರತಿಷ್ಠೆಗೋಸ್ಕರ ಮಾಡುತ್ತೇವೆಂದರೆ, ಆ ಪ್ರತಿಷ್ಠೆಗೆ ಉತ್ತರವನ್ನು ಬೇರೆ ಕಡೆ ನಿಜ 120 ಜನ ನೌಕರರು ಇದ್ದಾರೆ, ಇದರಲ್ಲಿ 600 ಜನ 700 ಜನರನ್ನು ರಿಟ್ರೆಂಚ್ ಮಾಡುತ್ತೇನೆಂದು ಹೇಳಿದ್ದೀರಿ. ಮಾಡಿ ನೋಡೋಣ? ನಿಮಗೆ ತಾಕತ್ತಿದ್ದರೆ ಮಾಡಿ ನೋಡೋಣ, ಯಾವ ಒಂದು ರೂಪದಲ್ಲಿ ನೀವು ಮಾಡಬೇಕೆಂದ್ದೀರಿ, ಅದನ್ನು ನೀವು ಮಾಡಿ?

**ಶ್ರೀ ಬಿ. ಬಸವಲಿಂಗಪ್ಪ:**– ನಾನು ಹೇಳಿದ್ದೇನೆಂದರೆ, ಜಾಸ್ತಿಯಾಗಿ 600 ಜನ ಇದ್ದಾರೆ ಅವರನ್ನು ಬೇರೆ ಕಡೆಗೆ ವರ್ಗಾವಣೆ ಮಾಡಿ ಅವರಿಗೂ ಕೂಡ ಒಂದು ಅವಕಾಶವನ್ನು ಮಾಡಿಕೊಡಬೇಕು. ಅದಕ್ಕೆ ನಮಗೆ....

ಶ್ರೀ ಡಿ.ಬಿ. ಚಂದ್ರೇಗೌಡ:– ನಿಮಗೆ ಅಧಿಕಾರ ಇದ್ದರೆ ಮಾಡಿ ಆದರೆ ಅಧಿಕಾರ ಇಲ್ಲವೆಂದು ತಿಳಿದು ಏತಕ್ಕೆ ಮಾಡುವುದಕ್ಕೆ ಹೋಗುತ್ತೀರಿ. ಸಹಕಾರಿ ಸಂಸ್ಥೆಗಳಲ್ಲ ಏತಕ್ಕೆ ನೀವು ತಲೆ ಹಾಕುತ್ತೀರಿ. ಪ್ರತಿಷ್ಠೆ ನಿಮಗೆ ಏನಿದೆ? ಸುಮಾರು 50 ಲಕ್ಷ ಜನ ಬೆಂಗಳೂರಿನ ನಾಗರೀಕರಿದ್ದಾರೆ. ಬೆಂಗಳೂರು ಸುತ್ತಮುತ್ತಲೂ ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕಂಥ 50 ಲಕ್ಷ ಜನ ರೈತರಿದ್ದಾರೆ. ಆ 50 ಲಕ್ಷ ಜನ ರೈತರು ಹಾಲು ತಂದು ಇಲ್ಲಿ ಮಾರುತ್ತಿದ್ದಾರೆ. ಬೆಂಗಳೂರು ಡೈರಿಯನ್ನು ಸರಿಯಾಗಿ ನಡೆಸಿಕೊಂಡು ಹೋಗುತ್ತಿಲ್ಲವೆನ್ನತಕ್ಕಂಥ ದೂರು ಏನಾದರು ನಿಮಗೆ ಬಂದಿದೆಯೇ? ಈಗ ನಿಮಗೆ ಹಾಸನ ಡೈರಿ ಬಗ್ಗೆ ದೂರು ಬಂದಿದೆ. ತನಿಖೆ ಮಾಡಿ. ಆದರೆ ಬೆಂಗಳೂರು ಡೈರಿ ಬಗ್ಗೆ ದೂರು ಯಾರು ಕೊಟ್ಟಿದ್ದರು? ದೂರು ಇರತಕ್ಕಂಥ ಹಾಸನ ಡೈರಿಗೆ ಕೈಹಾಕುವುದಿಲ್ಲ, ಆದರೆ ಇಲ್ಲಿ ಏತಕ್ಕೆ ಕೈ ಹಾಕುತ್ತೀರಿ? ಹಾಗಾದರೆ ಏನೋ ಆಸಕ್ತಿ ಇದೆ. ನಿಮ್ಮದು ಏನೋ ಪ್ರತಿಷ್ಠೆ ಇದೆ. ನಿಮ್ಮ ಪ್ರತಿಷ್ಠೆಗಾಗಿ ನಾವು ಇಲ್ಲಿ ಚರ್ಚೆ ಮಾಡುವುದಕ್ಕೆ ಕುಳಿತಿಲ್ಲ. ನಿಮಗೆ ಅಧಿಕಾರವಿಲ್ಲದ ವರ್ಗಾವಣೆಯನ್ನು ಏತಕ್ಕೆ ಮಾಡಿದ್ದೀರಿ? ಆ ಮೇಲೆ ಅಲ್ಲಿನ ಅಧ್ಯಕ್ಷರನ್ನು ನಾನೇನು ಅಧ್ಯಕ್ಷರೆಂದು ಹೇಳಿಲ್ಲ ಆದರೆ ಅವರ ಮೇಲೆ ಚಾರ್ಜಸ್ ಇದ್ದರೂ ಸಹ ಅವರು ಪ್ರಾಮಾಣಿಕರೆಂದು ಹೇಳಿದ್ದೀರಿ. ನೀವು ರಾಜ್ಯದ ಒಬ್ಬ ಮಂತ್ರಿಯಾಗಿ ಇಲ್ಲಿ ಸರ್ಟಿಫಿಕೇಟ್ ಕೊಟ್ಟು ಬಿಟ್ಟರೆ ಮುಂದೆ ನಾನು ಯಾರ ಜೊತೆಗೆ ವಿಚಾರಿಸಬೇಕು. ನಾವು ಮಾಡಿದ ಚಾರ್ಜ್‌ಗಳನ್ನು ಯಾರ ಮುಂದೆ ಹೇಳಬೇಕು. ಈಗ ನೀವು ಸರ್ಟಿಫಿಕೇಟ್ ಕೊಟ್ಟಾಯಿತು. ಯಾವ ಕೋ ಆಪರೇಟಿವ್ ಯೂನಿಯನ್ ಇದೆ, ಆ ಯೂನಿಯನ್ ಮಾಡಿರತಕ್ಕಂಥ ತೀರ್ಮಾನದ ವಿರುದ್ಧ ಬೇರೆ 5 ಬ್ಯಾಂಕ್‌ಗಳಲ್ಲಿ ದುಡ್ಡನ್ನು ಇಟ್ಟಿದ್ದಾರೆಂದರೆ, ಏತಕ್ಕೆ ಇಡಬಾರದೆಂದು ತಾವು ಕೇಳಿದರೆ ಏನು ಹೇಳಬೇಕು? ನನಗೆ ಗೊತ್ತಿರತಕ್ಕಂಥ ವಸ್ತು ಸ್ಥಿತಿ ಏನು? ಈಗಿರತಕ್ಕಂಥ ವ್ಯವಸ್ಥೆಯಲ್ಲಿ ನಾವು ಚುನಾಯಿತ ಸಭೆಯನ್ನು ನಡೆಸುತ್ತಿದ್ದೇವೆ. ನೀವು 185 ಜನ ಕುಳಿತು ತೀರ್ಮಾನ ಮಾಡುತ್ತೀರಿ. ನಮ್ಮ ವಿರುದ್ಧ ತಾವು ಹೋಗುತ್ತೀರೆಂದರೆ, ನಾವು ಎಲ್ಲಿಗೆ ಹೋಗಬೇಕು ಅದೇ ರೀತಿ ಸಹಕಾರಿ ಸಂಸ್ಥೆಗಳಲ್ಲಿ ಚುನಾಯಿತ ಪ್ರತಿನಿಧಿಗಳು ಇರುತ್ತಾರೆ. ಯೂನಿಯನ್‌ಗಳಿಗೆ ಕ್ರಮಬದ್ಧವಾಗಿ ಶಾಸನಬದ್ಧವಾಗಿ ಆಯ್ಕೆಯಾಗಿ ಬಂದಿರುತ್ತಾರೆ. ಅವರು ಮಾಡಿರತಕ್ಕ ಕೆಲವು ತೀರ್ಮಾನದ ವಿರುದ್ಧವಾಗಿ ನಾನು ಪ್ರವೇಶ ಮಾಡುತ್ತೇನೆಂದರೆ ಯಾವ ಆಧಾರದ ಮೇಲೆ ನೀವು ಪ್ರವೇಶ ಮಾಡುತ್ತೀರಿ ಎನ್ನುವುದನ್ನು ಹೇಳಬೇಕು. ಇಲ್ಲಿ ಸ್ವೇಚ್ಛಾವೃತ್ತಿ

ಯಾರದ್ದು? ಇಷ್ಟು ವರ್ಷಗಳವರೆಗೆ ಮಿಲ್ಕ್ ಯೂನಿಯನ್ ಕಟ್ಟಿ 87 ಕೋಟಿ ರೂಪಾಯಿ ವ್ಯವಹಾರ ಮಾಡಿದರಲ್ಲ ಅವರದ್ದು ಸ್ವೇಚ್ಛಾವೃತ್ತಿ ನೀವು ಮಂತ್ರಿಯಾಗಿ ಬಂದ ಮೇಲೆ ಮ್ಯಾನೇಜಿಂಗ್ ಡೈರೆಕ್ಟರ್ ಆಗುವುದು ಬಹಳ ಸಮೃದ್ಧಿಯಾದ ವೃತ್ತಿ, ಯಾವುದು ಸ್ವೇಚ್ಛಾವೃತ್ತಿ? ಕಳೆದ 16 ವರ್ಷಗಳಿಂದ ಈ ಬೆಂಗಳೂರಿನ ಮಿಲ್ಕ್ ಯೂನಿಯನ್ ಕಟ್ಟುವುದಕ್ಕೆ ಬಹಳ ಜನ ಹೊರಗಡೆ ದುಡಿದಿದ್ದಾರೆ. ಅವರಿಗೆ ಪ್ರತಿಷ್ಠೆ ಇಲ್ಲವೆ? ನಿಮಗೆ ಮಾತ್ರ ಇದೆ ಏನು? ಪ್ರತಿಷ್ಠೆ, ಸಂಸ್ಥೆ ಕಟ್ಟಿದವರಿಗೆ ಹೆಚ್ಚು ಇದೆಯೇ ಅಥವಾ ಮಂತ್ರಿ ಆದ ತಕ್ಷಣ ನಾವು ಅಧಿಕಾರ ಚಲಾಯಿಸುವುದರಲ್ಲಿ ಪ್ರತಿಷ್ಠೆ ಹೆಚ್ಚೋ? ಇಂತಹ ಪ್ರವೃತ್ತಿಯನ್ನು ಪ್ರತಿಭಟಿಸದೆ ಬೇರೆ ಮಾರ್ಗವೇ ಇಲ್ಲ. ಆದ್ದರಿಂದ ಮಾನ್ಯ ಅಧ್ಯಕ್ಷರಲ್ಲಿ ಮನವಿ ಮಾಡುತ್ತೇನೆ ಇದರ ಬಗ್ಗೆ ಸಮಗ್ರವಾದ ತನಿಖೆಯಾಗಲಿ. ನಾನು ಅಪರಾಧ ಮಾಡಿದ್ದರೆ ನಾನು ಶರಣಾಗುತ್ತೇನೆ. ಅಲ್ಲಿ ನಡೆಯುವ ವ್ಯವಹಾರವನ್ನು ತಮ್ಮ ಮೂಲಕ ಶಾಸನ ಸಭೆಗೆ, ಶಾಸನ ಸಭೆಯ ಮುಖಾಂತರ ಕರ್ನಾಟಕ ರಾಜ್ಯದ ನಾಗರೀಕರಿಗೆ ಇದನ್ನು ಹೇಳಬೇಕಾಗಿದೆ. ಯಾರದೋ ಪ್ರತಿಷ್ಠೆ ಬಗ್ಗೆ ಚರ್ಚೆ ಆಗುವುದಾದರೆ ಪ್ರತಿಷ್ಠೆ ಚುನಾಯಿತ ಸಭೆಗಳದ್ದು, ಚುನಾಯಿತ ಪ್ರತಿನಿಧಿಗಳದ್ದು, ಮತ್ತು ಶಾಸನಬದ್ಧವಾದ ಅಧಿಕಾರ ಇರತಕ್ಕಂಥ ಸಂಸ್ಥೆಗಳ ಪ್ರತಿಷ್ಠೆಯೇ ಹೊರತು ಇಲ್ಲಿ ವ್ಯಕ್ತಿಯ ಪ್ರತಿಷ್ಠೆ ಇರಕೂಡದು. ಇಂತಹ ಪ್ರತಿಷ್ಠೆಯನ್ನು ನಾನು ಮಾಡುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ:–** ಶ್ರೀಮಾನ್ ಚಂದ್ರೇಗೌಡರು ನನಗೆ ಸಣ್ಣ ಹುಡುಗರು ಇದ್ದಾಗಿನಿಂದಲೂ ಗೊತ್ತು.

**ಶ್ರೀ ಎಸ್.ಹೆಚ್. ಕೌಜಲಗಿ:–** ಮಾನ್ಯ ಮಂತ್ರಿಗಳು ವಿಷಯವನ್ನು ಡೈವರ್ಟ್ ಮಾಡುತ್ತಿದ್ದಾರೆ.

**ಶ್ರೀ ಬಿ. ಬಸವಲಿಂಗಪ್ಪ:–** ನನ್ನ ಅವರ ಸಂಬಂಧ ನಿಮಗೆ ಏನು ಗೊತ್ತು? ಎಂದೆಂದೂ ನನ್ನ ಬಾಯಲ್ಲಿ ಅವರ ಮಾತನ್ನು ಕೇಳಿಲ್ಲ. ರೆಲವೆನ್ಸಿ ಅನ್ನುತ್ತಾರಲ್ಲ ಯಾವುದು ಸರಿ ಯಾವುದು ಅಲ್ಲ ಅನ್ನುವುದನ್ನು ಅವರು ರೆಲವೆನ್ಸಿ ಬಿಟ್ಟು ಮಾತನಾಡಿದ್ದನ್ನು ನಾನು ಎಂದು ಸಹ ಕೇಳಿಲ್ಲ. ಅವರು ಅದನ್ನು ಹೇಳಿದಾಗ ನನಗೆ ಆತಂಕ ಇಲ್ಲ. ಆದರೆ ಇವತ್ತು ಏಕೋ, ದಾರಿ ಬಿಟ್ಟು ಮಾತನಾಡಿದ್ದೇ ಮಾತನಾಡಿದ್ದು. ನಾನು ಹೇಳಿದ್ದನ್ನೇ ಒಂದು ತರಹ ತಿರುಗಿಸಿಕೊಂಡು ಮಾತನಾಡಿದರು.

**ಶ್ರೀ ಡಿ.ಬಿ. ಚಂದ್ರೇಗೌಡ:–** ನಿಮ್ಮ ಪರವಾಗಿ ಮಾತನಾಡಿದರೆ ದಾರಿ ಸರಿ. ನಿಮಗೆ ಅನುಕೂಲವಾಗಿ, ಸಂಸತ್ತಿನ ಪರವಾಗಿ, ಶಾಸನಬದ್ಧವಾಗಿ ಮಾತನಾಡಿದರೆ ದಾರಿ ಬಿಟ್ಟು ಹೋಗಿದ್ದೇನೆಂದು ಹೇಳುವುದು. ಈ 30 ಕೋಟಿ ರೂಪಾಯಿನ ವ್ಯವಹಾರ ಇದೆಯಲ್ಲ, ನಿಮ್ಮ ಆಸ್ತಿಯನ್ನು ಮನೆ ಕಟ್ಟಿಕೊಳ್ಳಲು ಬಿಸಾಕಿದ್ದೀರಲ್ಲ, ಅದನ್ನು ವಿಚಾರಣೆ ಮಾಡಿಸಿ, ಯಾರ್‍ಯಾರ ಕೈವಾಡ ಇದೆ ಎಂದು ಗೊತ್ತಾಗುತ್ತದೆ.

**ಶ್ರೀ ಬಿ.ಹೆಚ್. ಬನ್ನೀಕೋಡ್:–** ವಿಚಾರಣೆ ಮಾಡಿಸಿ ಎನ್ನುತ್ತಾರೆ, ಅದನ್ನು ದಯಮಾಡಿ ಬಿಚ್ಚಿಕೊಳ್ಳಿ ಇರುವ ವಿಚಾರ ಜನತೆಗೆ ಗೊತ್ತಾಗಲಿ, ಸದನಕ್ಕೆ ಗೊತ್ತಾಗಲಿ, ವಿಚಾರಣೆ ಮಾಡಿಸಿ.

**ಶ್ರೀ ಬಿ. ಬಸವಲಿಂಗಪ್ಪ:–** 30 ಎಕರೆ ಜಮೀನಿನ ಬಗ್ಗೆ ಮಾತನಾಡಿದ್ದಾರೆ. ಅವರು ಹೇಳಿದ್ದು 3–4 ತಿಂಗಳ ಹಿಂದೆ ನನ್ನ ಗಮನಕ್ಕೆ ಬಂದಿದೆ. ಬಿಡಿಎ ಅಧಿಕಾರಿಗಳನ್ನು ಮತ್ತು ಸಂಬಂಧಪಟ್ಟ ಅಧಿಕಾರಿಗಳನ್ನು ಕರೆಸಿ ಮಾತನಾಡಿದ್ದಾರೆ. ನಿರ್ಣಯ ನಾವು ಮಾಡಿಲ್ಲ. ಕೆಎಂಎಫ್ ನವರು ಅಕ್ವೈರ್ ಮಾಡಿದ್ದು ನಿಜ. ನಾಗಶೆಟ್ಟಿ ಹಳ್ಳಿಯಲ್ಲಿ ಜಮೀನು ಇರುವುದು ನಿಜ. ಅದು ಸರ್ಕಾರದ ಆಸ್ತಿ ಅದನ್ನು ವಿ.ವ ಮುಖಾಂತರವೋ ಅಥವಾ ಯಾವರೀತಿ ವಿಲೇವಾರಿ ಮಾಡಬೇಕೆಂದು ಇನ್ನೂ ತೀರ್ಮಾನ ಮಾಡಿಲ್ಲ. ಅದು ಎಲ್ಲಿಯೂ ಹೋಗಿಲ್ಲ. ಅಲ್ಲೇ ಇದೆ. ಬೇರೆಯವರು ಅಲ್ಲಿ ಮನೆ ಕಟ್ಟಿಸಿದ್ದರೆ ಮತ್ತು ಗುಡಿಸಲು ಹಾಕಿಸಿದ್ದಾರೆಂದು ಹೇಳಿದರು. ಅವನ್ನು ಕಿತ್ತುಹಾಕಲಿಕ್ಕೆ ಸಾಧ್ಯ ಅದರ ಬಗ್ಗೆ ತಾವು ಚಿಂತೆ ಮಾಡಬೇಡಿ ಜಮೀನು ಮಾತ್ರ ಇದೆ. ಏನೇನು ಮಾಡಿದ್ದಾರೋ ನೋಡೋಣ. ಅನ್‌ಆಥರೈಸ್ಡ್ ಕನಸ್ಟ್ರಕ್ಷನ್ ಅಲ್ಲಿ ಬಂದಿದೆ ಎಂದು ಕೇಳಿದ್ದೇನೆ. ನಾನು ಹೋಗಿ ನೋಡಿಲ್ಲ. ನನ್ನ ಕ್ಷೇತ್ರವಾದರೂ ನೋಡುವುದಕ್ಕೆ ಆಗಿಲ್ಲ ವಿಲೇವಾರಿ ಅಂತೂ ಆಗಿಲ್ಲ, ಅದು ಹಾಗೆಯೇ ಇದೆ, ಈಗ ಚಂದ್ರೇಗೌಡರು ಏನೇನು ವಿಷಯವನ್ನು ಈ ಸದನದಲ್ಲಿ ಇಟ್ಟಿದ್ದಾರೆ ಅದು ಆಧಾರ ರಹಿತವಾದುದು. ಏನೇನು ಕೆಲಸ ಮಾಡಿದರೂ ನಾನು ಕಾನೂನು ರೀತ್ಯಾ ಮಾಡುತ್ತೇನೆಯೇ. ವಿನಹ ಕಾನೂನು ಬಿಟ್ಟು ಹೋಗುವುದಿಲ್ಲ. ಕಾನೂನು ರೀತ್ಯಾ ಮಾಡುವುದಿಲ್ಲ ಅಂದರೆ ಸೆಕ್ಷನ್ 54ರ ಪ್ರಕಾರ ಏತಕ್ಕೆ ನೋಟಿಫಿಕೇಷನ್ ಮಾಡುತ್ತಿದ್ದೆ.

**ಶ್ರೀ ಡಿ.ಬಿ. ಚಂದ್ರೇಗೌಡ:–** ಅಧಿಕಾರ ಇಲ್ಲವೆಂದು ಗೊತ್ತಾಯಿತು, ತೆಗೆದುಕೊಳ್ಳಬೇಕಾಯಿತು ಮಾಡಿದ್ದೀರಿ.

**ಶ್ರೀ ಬಿ. ಬಸವಲಿಂಗಪ್ಪ:–** ಅಧಿಕಾರ ತೆಗೆದುಕೊಂಡು ಮಾಡೋಣವೆಂದು ಮಾಡಿದೆ. ಆದರೂ ತಮಗೆ ಸಿಟ್ಟಾಗಿದೆ. ನಾನು ಕಾನೂನು ಪ್ರಕಾರ ಮಾಡುತ್ತೇನೆ, ನಾನು ಕಾನೂನು ಬಿಟ್ಟು ಬರುವುದಿಲ್ಲ.

## 14. ದಲಿತರ ಮೇಲಿನ ದೌರ್ಜನ್ಯ ಕೊನೆಯಾಗಬೇಕು

**ಶ್ರೀ ಬಿ. ಬಸವಲಿಂಗಪ್ಪ:–** ಮಾನ್ಯ ಅಧ್ಯಕ್ಷರೇ, ನಿನ್ನೆ ಈ ಬಗ್ಗೆ ಮಾತನಾಡಿದ್ದೇನೆ. ಮುಖ್ಯಮಂತ್ರಿಗಳು ಸದನದಲ್ಲಿ ಇರಲಿಲ್ಲ. ಈ ಜನತಾ ಸರ್ಕಾರದ ಅವಧಿಯಲ್ಲಿ ಎರಡು ಭಾಗವಾಗಿ ವಿಂಗಡಿಸಿದರೆ, ಒಂದು ಶ್ರೀಮಾನ್ ಹೆಗಡೆಯವರ ಕಾಲದಲ್ಲಿ ಏನೇನು ಆದವು ಎಂಬುದು ಗೊತ್ತಾಗುತ್ತದೆ. ಮತ್ತೆ ಅವೇ ಪುನರ್ ಆವೃತ್ತಿ ಆಗಿವೆಯೇ ಅಥವಾ ನಿಂತಿವೆಯೇ ಎನ್ನುವುದು.

**ಪ್ರಶ್ನೆ:–** ನಾನು ಒಂದು ಪ್ರಶ್ನೆಯನ್ನು ಹೇಳುತ್ತಿದ್ದೇನೆ.

**ಅಧ್ಯಕ್ಷರು:–** ವಿಷಯಕ್ಕೆ ಬನ್ನಿ ಎಂದು ಹೇಳಿದೆ.....

**ಶ್ರೀ ಬಿ. ಬಸವಲಿಂಗಪ್ಪ:–** ಅದನ್ನೇ ಹೇಳುತ್ತಿದ್ದೇನೆ. ಏಕೆ ಇಷ್ಟು ಅವಸರ ಮಾಡುತ್ತಿದ್ದೀರಿ. ನೀವು ಏನು ಹೇಳಿಕೆಯನ್ನು ಕೊಟ್ಟಿದ್ದೀರಿ. ಇದರಲ್ಲಿ ಸವರ್ಣೀಯರು ಎಂಬ ಪದವನ್ನು ಉಪಯೋಗಿಸಿದ್ದೀರಿ. ಸವರ್ಣೀಯರು ಎಂದರೆ ಯಾರು? ವರ್ಣೀಯರು ಎಂದರೆ ಯಾರು? ಅವರ್ಣೀಯರು ಎಂದರೆ ಯಾರು? ಸ್ವಲ್ಪ ಹೇಳಬೇಕು. ಷೆಡ್ಯೂಲ್ಡ್ ಕಾಸ್ಟ್ ಎಂದು ಹೇಳಿದರೆ, ಈ ದೇಶದಲ್ಲಿ ಅವರ್ಣೀಯರೇ, ಸವರ್ಣೀಯರೇ ಅಥವಾ ವರ್ಣೀಯರೇ? ನಾನು ಹಿಂದೆ ಸ್ಟೇಟ್‌ಮೆಂಟ್ ಕೊಡುವಾಗ ನಾವು ಹಿಂದೂ ಸಮಾಜದ ಯಾವ ವರ್ಣಗಳ ವಾದಕ್ಕೂ ಸೇರಿಯೇ ಇಲ್ಲವೆಂದು ಹೇಳಿದೆ. ಅವರು ಸವರ್ಣೀಯರಾದರೆ, ನಮಗೆ ಏಕೆ ಅವರ್ಣೀಯರು ಎಂದು ಹೇಳುತ್ತಾರೆ, ನಮಗೆ ಏನಾದರೊಂದು, ಈ ಸಮಾಜದಿಂದ ದೂರ ಇಟ್ಟಿರತಕ್ಕಂಥವರು ಎಂದು ಕರೆಯಿರಿ. ಈ ಪದ ಉಪಯೋಗಿಸುವುದು ಸ್ವಾರ್ಥ ಮತ್ತು ತುಚ್ಛತನ ಎಂದು ಹೇಳುತ್ತೇನೆ.

**ಅಧ್ಯಕ್ಷರು:–** ಮಾನ್ಯ ಖರ್ಗೆಯವರು ಹೇಳಿದ ಹಾಗೆ, ಸರ್ಕಾರಕ್ಕೆ ತಾವು ಸಲಹೆ ಕೊಡಿ....

**ಶ್ರೀ ಬಿ. ಬಸವಲಿಂಗಪ್ಪ:**– ಪೋಲೀಸಿನವರನ್ನು ಇಟ್ಟುಕೊಂಡು, ಸಿವಿಲ್ ರೈಟ್ಸ್ ಎನ್‌ಫೋರ್ಸ್‌ಮೆಂಟ್ ಸೆಲ್ ಇಟ್ಟುಕೊಂಡು, ಇವರಿಗೆ ಏನೇನು ಅಧಿಕಾರಗಳನ್ನು ಕೊಟ್ಟಿದ್ದೀರಿ?

**ಅಧ್ಯಕ್ಷರು:**– ಉತ್ತರ ಕೊಟ್ಟಿದ್ದಾರೆ. ಅದರ ಮೇಲೆ ವಿವರಣೆ ಕೇಳಿರಿ.

**ಶ್ರೀ ಬಿ. ಬಸವಲಿಂಗಪ್ಪ:**– ಚಿಂಚೋಳಿ ಘಟನೆಯನ್ನು ಪ್ರಸ್ತಾಪ ಮಾಡಲೇ? ಅದನ್ನು ಪ್ರಸ್ತಾಪ ಮಾಡಿ ಅದಕ್ಕೆ ಎಲ್ಲಾ ಉತ್ತರ ನನಗೆ ಬೇಕೇ? ಉತ್ತರ ನನಗೆ ಬೇಕಾಗಿಲ್ಲ. ಕರ್ನಾಟಕ ರಾಜ್ಯದಲ್ಲಿ ದಲಿತರು ಏನಿದ್ದಾರೆ ಅವರ ಮೇಲೆ ಆಗತಕ್ಕಂಥ ದೌರ್ಜನ್ಯ ಮತ್ತು ಕ್ರೂರತನ ನಿಲ್ಲಬೇಕೆಂದು ನನ್ನ ಉದ್ದೇಶ. ಬೇರೆ ರಾಜ್ಯದಲ್ಲಿ ಜಾಸ್ತಿಯಾಗಿದೆ, ನಮ್ಮ ರಾಜ್ಯದಲ್ಲಿ ಕಡಿಮೆಯಾಗಿದೆ ಎಂಬುದು ಅಲ್ಲ. ಅದು ದೊಡ ಕಳ್ಳತನ ಇದು ಸಣ್ಣ ಕಳ್ಳತನವೇ? ಇದನ್ನು ಮಾಡಬಾರದು ಎಂದು ಹೇಳುವುದಕ್ಕೆ ನಾನು ನಿಂತಿದ್ದೇನೆ. ನೀವು ಮುಖ್ಯಮಂತ್ರಿಗಳಾದ ಮೇಲೆ ಇದು ನಿಲ್ಲಬೇಕು.

ನಾನೂ ಸಹ ಹಿಂದೆ ಐದು ವರ್ಷ ಡೆಪ್ಯುಟಿ ಹೋಮ್ ಮಿನಿಸ್ಟರ್ ಆಗಿದ್ದೆ. ಆ ನಾಲ್ಕೂವರೆ ವರ್ಷದ ಅವಧಿಯಲ್ಲಿ ಇಂಥ ದೌರ್ಜನ್ಯಗಳು ಇರಲಿಲ್ಲ. ಇಂತಹ ದೌರ್ಜನ್ಯ ನಡೆಯಬೇಕಾದರೆ ಅದಕ್ಕೆ ಅಧಿಕಾರದಲ್ಲಿರುವವರ ಸಹಕಾರ ಇರಲೇಬೇಕು. ಯಾರು ಮುಖ್ಯಮಂತ್ರಿ ಇರುತ್ತಾರೆ ಅಂತಹವರ ಬೆಂಬಲದಿಂದಲೇ ಕ್ರೂರತ್ವ ಮಾಡುತ್ತಿದ್ದಾರೆ. ಅಂತಹವರ ಬೆಂಬಲ ಇದಕ್ಕೆ ಇರಲೇ ಬೇಕು. ಇಲ್ಲದೇ ಹೋದರೆ ಇದು ಆಗುವುದೇ ಇಲ್ಲ.

ಯಾರು ಕ್ರೂರತ್ವಕ್ಕೆ ಒಳಪಟ್ಟಿದ್ದಾರೆ ಅವರಿಗೆ ಜಾಸ್ತಿ ಸಹಾಯ ಮಾಡಬೇಕು. ಪುನರ್ವಸತಿ ಕೊಡಬೇಕು. ಯಾರು ಯಾರು ದೌರ್ಜನ್ಯ ಮಾಡುತ್ತಿದ್ದಾರೆ ಅಂತಹವರ ಮೇಲೆ ಸರಿಯಾದ ಕ್ರಮ ತೆಗೆದುಕೊಳ್ಳಬೇಕು. ಸಡಿಲವಾದ ಕ್ರಮ ತೆಗೆದುಕೊಂಡರೆ ಇದನ್ನು ನಿಲ್ಲಿಸುವುದಕ್ಕೆ ಆಗುವುದಿಲ್ಲ. ಆದುದರಿಂದ ನೀವು ನಿನ್ನೆ ದಿವಸ ಏನು ಹೇಳಿಕೆ ಕೊಟ್ಟಿದ್ದೀರಿ ಅದು ಪತ್ರಿಕೆಯಲ್ಲಿ ಬಂದಿದೆ. ಏನೇನು ಮಾಡುತ್ತೇವೆಂದು ತಾವು ಹೇಳಿದ್ದೀರಿ ಅದು ಇವತ್ತು ಪತ್ರಿಕೆಯಲ್ಲಿ ಬಂದಿದೆ. ಆದರೆ ಪುನಃ ಇವತ್ತು ಇದು ಪುನರಾವೃತ್ತಿಯಾಗಿದೆ. ಇದೇನೂ ಹೊಸದಲ್ಲ, ಮುಖ್ಯಮಂತ್ರಿಯವರಿಗೆ ನಾನು ಹೇಳುತ್ತೇನೆ, ನೀವು ಎಲ್ಲಿಯವರೆಗೆ ಇರುತ್ತೀರಿ

ಅಲ್ಲಿಯವರೆ ದಲಿತರ ಮೇಲೆ ಕ್ರೂರತ್ವದ ವರ್ತನೆ ಏನಿದೆ ಅದು ನಿಲ್ಲಬೇಕು. ದಲಿತರು ಅಥವಾ ಎಸ್.ಸಿ.ಗಳ ಮೇಲೆ ದಲಿತರಲ್ಲದವರು ಏನು ಇವತ್ತು ದೌರ್ಜನ್ಯ ನಡೆಸುತ್ತಿದ್ದಾರೆ ಅದು ಕೊನೆಯಾಗಬೇಕು. ಕೊನೆಯಾಗದೇ ಹೋದರೆ ಸರಕಾರದ ಬೆಂಬಲ ಕ್ರೂರತ್ವ ಮಾಡುವವರಿಗೆ ಇದೆ ಎಂದು ನಾನು ಹೇಳಬೇಕಾಗುತ್ತದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:–** ಸಿದ್ಧಾಂತಗಳನ್ನು ಹೇಳತಕ್ಕಂಥಾದ್ದು ಬಹಳ ಸುಲಭ. ಬಸವಲಿಂಗಪ್ಪನವರ ಕಾಲದಲ್ಲೂ ಇದು ಹೆಚ್ಚಾಗಿ ಆಗಿದೆ, ನಾನು ಬೇಕಾದರೆ ಅಂಕಿ ಸಂಖ್ಯೆ ತೋರಿಸುತ್ತೇನೆ. ಹಿಂದಿನ ಸರಕಾರದಲ್ಲಿ ಎಷ್ಟಾಗಿದೆ ಅದರ ಅಂಕಿ ಸಂಖ್ಯೆ ಕೊಡುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ:–** ಕೊಡಿ. ನಾನು ಇದ್ದಾಗ ಏನಾಗಿದೆ ಕೊಡಿ.

**ಅಧ್ಯಕ್ಷರು:–** ಬಸವಲಿಂಗಪ್ಪನವರೇ ಕೇಳಿರಿ.

**ಶ್ರೀ ಎಸ್.ಆರ್. ಬೊಮ್ಮಾಯಿ:–** ನಾನು ಸತತವಾಗಿ ಹೇಳುತ್ತಿದ್ದೇನೆ. ಇದರಲ್ಲಿ ರಾಜಕೀಯ ಬೆರೆಸಬೇಡಿ. ಮಾನ್ಯ ಖರ್ಗೆಯವರು ಹೇಳಿದ್ದಾರೆ. ಜನತಾ ಸರಕಾರ ಬಂದ ಮೇಲೆ, ಜನತಾ ದಳದ ಸರಕಾರ ಬಂದ ಮೇಲೆ ಹೆಚ್ಚು ಆಗಿದೆ ಎಂದು. ಅದು ತಪ್ಪು. ಹಿಂದೆ ಇದಕ್ಕಿಂತ ಹೆಚ್ಚಾಗಿದೆ. ಬೇರೆ ರಾಜ್ಯದಲ್ಲಿ ಇದಕ್ಕಿಂತ ಹೆಚ್ಚಾಗಿದೆ. ಇದು ಆಗಕೂಡದು, ಒಂದು ಘಟನೆಯೂ ಆಗಕೂಡದು. ಒಂದು ಎರಡು ಮೂರು ಘಟನೆ ಆಗಬೇಕೆಂಬುದಲ್ಲ, ಆಗಲೇಬಾರದು. ನಮ್ಮ ಕಾಲದಲ್ಲೂ ಆಗಿದೆ. ಇದು ಸಹಸ್ರಾರು ವರ್ಷಗಳಿಂದ ಬಂದಂಥಾದ್ದು.

**ಶ್ರೀ ಬಿ. ಬಸವಲಿಂಗಪ್ಪ:–** ಹಿಂದಿನದಕ್ಕೆ ಹೋಲಿಕೆ ಮಾಡಿಕೊಂಡು ನಾವು ಚೆನ್ನಾಗಿ ಮಾಡಿದ್ದೀವಿ ಎಂದು ಹೇಳುವುದನ್ನು ಬಿಡಿ.

**ಶ್ರೀ ಎಸ್.ಆರ್. ಬೊಮ್ಮಾಯಿ:–** ನೀವು ಹೇಳಿದ್ದಕ್ಕೆ ಹೇಳಬೇಕಾಗುತ್ತದೆ. ನೀವು ಮಂತ್ರಿಗಳಾಗಿದ್ದಾಗ ಮಾಡಿದ್ದೂ ಗೊತ್ತಿದೆ.

**ಶ್ರೀ ಬಿ. ಬಸವಲಿಂಗಪ್ಪ:–** ನಾನು ಏನು ಮಾಡಿದ್ದೇನೆ ಹೇಳಿರಿ.

**ಶ್ರೀ ಎಸ್.ಆರ್. ಬೊಮ್ಮಾಯಿ:–** ಅನ್‌ಟಚಬಿಲಿಟಿ ಆಗಲೂ ಇತ್ತು. ನೀವು ಮಂತ್ರಿ ಆದ ಕೂಡಲೇ ಅದು ಹೋಗುತ್ತದೆ ಎಂದು ಅಲ್ಲ. ನಿಮ್ಮಂಥವರು

ಇದ್ದಾಗ ಹೆಚ್ಚಾಗಿದೆ. ನಿಮ್ಮಂಥವರಿಂದಲೇ ಇದು ಹೆಚ್ಚಾಗಿರುವುದು. I will prove it. ನಿಮ್ಮ ಚಾಂಪಿಯನ್‌ಷಿಪ್ ನನಗೆ ಗೊತ್ತಿದೆ.

**ಅಧ್ಯಕ್ಷರು:–** ತಾವು ಕೂಡಿರಿ ಬಸವಲಿಂಗಪ್ಪನವರೇ, ಏತಕ್ಕೆ ಇವತ್ತು ಇಷ್ಟು ಕೋಪವಾಗಿದ್ದೀರಿ?

**ಶ್ರೀ ಎಸ್.ಆರ್. ಬೊಮ್ಮಾಯಿ:–** ದಲಿತ ನಾಯಕರಿಗಿರತಕ್ಕಂಥ ಕಳಕಳಿಯನ್ನು ನಾನು ಮೆಚ್ಚಿಕೊಳ್ಳುತ್ತೇನೆ. ನನ್ನಲ್ಲೇನು ಅದಕ್ಕಿಂಥ ಕಡಿಮೆ ಕಳಕಳಿ ಇಲ್ಲ. ಅದಕ್ಕಿಂಥ ಹೆಚ್ಚಾಗಿದೆ. ನಾನು ಯುವಕನಾಗಿದ್ದಾಗಿನಿಂದ ಇದರ ಬಗ್ಗೆ ಹೋರಾಟ ಮಾಡಿದ್ದೇನೆ. ಸರಕಾರದಲ್ಲಿ ಇದ್ದಾಗಲೂ ಹೋರಾಟ ಮಾಡಿದ್ದೇನೆ. ಅದನ್ನು ತೋರಿಸುತ್ತೇನೆ. ರಾಜಕೀಯ ಭಾಷಣ ಬೇಡ. ಖರ್ಗೆಯವರೂ ಸಹ ಚೆನ್ನಾಗಿ ಹೇಳಿದ್ದಾರೆ.

**ಶ್ರೀ ಬಿ. ಬಸವಲಿಂಗಪ್ಪ:–** ರಾಜಕೀಯ ಯಾರದ್ದು ಇಲ್ಲಿ ಇಲ್ಲ.

**ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:–** Why the chief minister is taking personally. The man answer as a representative of the government.

**ಅಧ್ಯಕ್ಷರು:–** ಬಸವಲಿಂಗಪ್ಪನವರೇ ಕುಳಿತುಕೊಳ್ಳಿರಿ....

**ಶ್ರೀ ಎಸ್.ಆರ್. ಬೊಮ್ಮಾಯಿ:–** ಬಸವಲಿಂಗಪ್ಪನವರು ಹೇಳಿದರು, ನಾನು ಮುಖ್ಯಮಂತ್ರಿಯಾದ ಮೇಲೆ ಕ್ರೂರತ್ವ ಹೆಚ್ಚಾಗಿದೆ ಎಂದರು. ಅದನ್ನು ಹೇಳುವಾಗ ಬಹಳ ಎಚ್ಚರಿಕೆಯಿಂದ ಹೇಳಬೇಕು. ನೀವು ಇದ್ದಾಗ ಇದು ಹೆಚ್ಚಾಗಿದೆ.

**ಶ್ರೀ ಬಿ. ಬಸವಲಿಂಗಪ್ಪ:–** ನೀವು ಹೇಳಿ, ಚಿಂಚೋಳಿದು ಕ್ರೂರತನ ಅಲ್ಲವೇ?

**ಶ್ರೀ ಎಸ್.ಆರ್. ಬೊಮ್ಮಾಯಿ:–** ನಿಮ್ಮಿಂದ ದಲಿತರ ಸುಲಿಗೆ ಆಗಿದೆ.

**ಶ್ರೀ ಬಿ. ಬಸವಲಿಂಗಪ್ಪ:–** ನನಗೆ ಸುಲಿಗೆ ಮಾಡುವುದಕ್ಕೆ ಹಕ್ಕು ಉಂಟು. ನಿಮಗೆ ಏನು ಉಂಟು.

**ಶ್ರೀ ಎಸ್.ಆರ್. ಬೊಮ್ಮಾಯಿ:**– ಹೇಳುತ್ತೇನೆ. ಈ ರೀತಿ ಹೇಳುವುದನ್ನು ಬಿಟ್ಟುಬಿಡಿ. You are exploiting dalits.....

**ಶ್ರೀ ಬಿ. ಬಸವಲಿಂಗಪ್ಪ:**– Don't talk.

**ಶ್ರೀ ಪಿ.ಜಿ.ಆರ್. ಸಿಂಧ್ಯ:**– ಮುಖ್ಯಮಂತ್ರಿಗಳು ಏನು ರಬ್ಬಿಷ್ ಮಾತನಾಡಿದರು? Don't talk. What does he mean? It cannot go into record. ರಬ್ಬಿಷ್ ಎಂದು ಮುಖ್ಯಮಂತ್ರಿಗಳಿಗೆ ಈ ರೀತಿ ಹೇಳುವುದು ಸರಿಯೇ?

**ಶ್ರೀ ಬಿ. ಬಸವಲಿಂಗಪ್ಪ:**– ನನಗೆ ರೈಟ್ಸ್ ಇದೆ. ನೀವು ನನಗಿಂತ ಕಡಿಮೆ ಏನೂ ಸುಲಿಗೆ ಮಾಡಿಲ್ಲ.

**ಅಧ್ಯಕ್ಷರು:**– ಅದನ್ನು ಎಕ್ಸ್‌ಪಂಜ್ ಮಾಡಿದ್ದೇನೆ.

**ಬಸವಲಿಂಗಪ್ಪ:**– ಜಾತಿ ಮೀರಿದವರು (30ನೇ ಮೇ 1979, ಜೆ.ಹೆಚ್. ಪಟೇಲ್, ವಿಧಾನ ಸಭೆ)

ಮಾನ್ಯ ಬಸವಲಿಂಗಪ್ಪನವರು ಯಾವುದೇ ಜಾತಿಗೆ ಸೇರಿದವರು ಎಂದು ನಾನು ಭಾವಿಸುವುದಿಲ್ಲ. ಇವರಂತಹ ಕ್ರಿಯಾಶೀಲ ಚಿಂತಕರು ಯಾವುದೇ ಜಾತಿಯಲ್ಲಿ ಹುಟ್ಟಿದರೂ ಅದೊಂದು ಆಕಸ್ಮಿಕ ವಿಶೇಷ. ಬಸವಲಿಂಗಪ್ಪನವರಿಗೆ ಜಾತಿ ಎಂಬುದಿಲ್ಲ. ಇವರು ಜಾತಿ ಮೀರಿದವರು. ಇವರನ್ನು ನಾನು ಬಹುವಾಗಿ ಮೆಚ್ಚುತ್ತೇನೆ. ಮನಸಾರೆ ಅಭಿನಂದಿಸುತ್ತೇನೆ.

ಆಶೀರ್ವಾದ ಸಾಕು: ಕೆಲಸ ಮಾಡಿ (22ನೇ ಆಗಸ್ಟ್ 1985, ವಿಧಾನಸಭೆ ಕಲಾಪ)

**ಶ್ರೀ ಬಿ. ಬಸವಲಿಂಗಪ್ಪ (ಪ್ರತಿ ಪಕ್ಷದ ಶಾಸಕ):**– ಅಧ್ಯಕ್ಷರೇ ನಿನ್ನೆ ಸಂಜೆಯಿಂದ ಇವತ್ತು ರಾತ್ರಿಯವರೆಗೆ ಸದನದಲ್ಲಿ ಕೈಗಾರಿಕಾ ಇಲಾಖೆಯ ಕಾರ್ಯವಿಧಾನವನ್ನು ಕುರಿತ ಧೀರ್ಘ ಚರ್ಚೆಯನ್ನು, ಭಾಷಣಗಳನ್ನು ಕೇಳುತ್ತ ಕುಳಿತಿದ್ದೇನೆ. ಮಾನ್ಯ ಮಂತ್ರಿಗಳಾದ ಜೆ.ಹೆಚ್. ಪಟೇಲರು ಚರ್ಚೆಗೆ ಉತ್ತರವನ್ನೇನ್ನೊ ಹೇಳಿದ್ದಾರೆ. ಇಲ್ಲ ಎನ್ನುವುದಿಲ್ಲ. ಆದರೆ ಪಟೇಲರು ಕೊನೆಯಲ್ಲಿ ಹೇಳಿದ ಮಾತು, ತೀರಾ ಆಶ್ಚರ್ಯ ಎನ್ನುವಂತಿದೆ. ಉತ್ತರ

ಕೊಡುವಾಗ ಎಲ್ಲರಿಗೂ ಒಳ್ಳೆಯದಾಗಲಿ, ನಮಗೂ ಒಳ್ಳೆಯದಾಗಲಿ, ನಿಮಗೂ ಒಳ್ಳೆಯದಾಗಲಿ ಎಂದು ಆಶೀರ್ವಾದ ಮಾಡುವ ಶೈಲಿಯಲ್ಲಿ ಹೇಳಿದ್ದಾರೆ.

ಈ ಆಶೀರ್ವಾದದ ಕೆಲಸ ಮಾಡುವವರು ಸ್ವಾಮಿಗಳು, ಸನ್ಯಾಸಿಗಳು. ಪಟೇಲರನ್ನು ಮಂತ್ರಿಯಾಗಿ ಮಾಡಿರುವ ಉದ್ದೇಶ ಇದಲ್ಲ. ಬಿಗಿಯಾಗಿ, ಸರಿಯಾಗಿ, ಸಮರ್ಥವಾಗಿ ಕೈಗಾರಿಕೆಗಳನ್ನು ಮತ್ತು ಉದ್ದಿಮೆಗಳನ್ನು ನಡೆಸೀ ಅಂತ. ನಾವು ನಿಮ್ಮನ್ನು ಮಂತ್ರಿಗಳನ್ನಾಗಿ ಮಾಡಿರೋದು ಸ್ಪಿನ್ನಿಂಗ್ ಮಿಲ್‌ನಲ್ಲಿ ಇಳುವರಿ ಹೆಚ್ಚಿಸಿ ಅಂತ; ಉತ್ಪಾದನೆ ಜಾಸ್ತಿ ಮಾಡಿ ಅಂತ. ಆಶೀರ್ವಾದ ಮಾಡಕ್ಕಲ್ಲ... ಉದಾಹರಣೆಗೆ ಶಾಸಕ ಮಾನ್ಯ ನಾರಾಯಣ ಕುಮಾರ್ ಮಾತು. ನಮ್ಮ ರಾಜ್ಯದಲ್ಲಿರುವ ಉದ್ದಿಮೆಗಳಲ್ಲಿ ಕರ್ನಾಟಕದಲ್ಲಿ ಹುಟ್ಟಿದ ಜನರಿಗೆ ಮೊದಲು ನೌಕರಿ, ಆಮೇಲೆ ಬೇರೆಯವರಿಗೆ ಅಂತ ಹೇಳಿದ್ದಾರೆ. ಇದು ಒಪ್ಪುವ ಮಾತು.

ಸ್ವಾಮಿ ಪಟೇಲರೇ... ಕನ್ನಡಿಗರಿಗೆ ಆದ್ಯತೆ ಇದೆಯೋ ಹೇಳಿ...

**ಶ್ರೀ ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ):–** ನೀವು ಹೇಳಿದ ಪ್ರತಿಯೊಂದು ನುಡಿಯನ್ನೂ ನಾನು ಮಾನ್ಯ ಮಾಡುತ್ತೇನೆ. ಶಕ್ತಿಮೀರಿ ಉತ್ಪಾದನೆ ಹೆಚ್ಚಿಸುವ, ದಕ್ಷತೆ ಹೆಚ್ಚಿಸುವ ಕೆಲಸ ಮುಂದುವರೆಸಿದ್ದೇನೆ... ಈ ಅಧಿವೇಶನ ಮುಗಿದ ತಕ್ಷಣ ನಾನೇ ಪ್ರತಿಯೊಂದು ಉದ್ದಿಮೆ ಮತ್ತು ಕಾರ್ಖಾನೆಗೂ ಖುದ್ದಾಗಿ ಹೋಗಿ, ಪರಿಶೀಲನೆ ನಡೆಸಿ, ಪರಿಸ್ಥಿತಿಯನ್ನು ಉತ್ತಮಗೊಳಿಸುವ ಭರವಸೆ ಕೊಡುತ್ತೇನೆ...

ಧರ್ಮ ಕುರಿತು (6ನೇ ಫೆಬ್ರವರಿ 1986, ವಿಧಾನಸಭೆ ಕಲಾಪ)

**ಶ್ರೀ ಬಸವಲಿಂಗಪ್ಪ:–** Religion is not Dharma, Religion is Matha.

**ಶ್ರೀ ಜೆ.ಹೆಚ್. ಪಟೇಲ್:–** ಮತ ಎಂದರೆ ಕ್ಯಾಸ್ಟ್; ಮತ ಎಂದರೆ ಜಾತಿ – ಮತ ಕ್ಯಾಸ್ಟ್ ಅಂಡ್ ಕ್ರೀಡ್.

**ಶ್ರೀ ಬಿ. ಬಸವಲಿಂಗಪ್ಪ:–** ಇದರ ಮೇಲೆ ಬೇಕಾದಂತೆ ವ್ಯಾಖ್ಯಾನ ಮಾಡಬಹುದು. ರಿಲಿಜನ್ ಎಂದರೆ ಧರ್ಮ ಎನ್ನುವುದಕ್ಕೆ ಹೋಗಬೇಡಿ. ಧರ್ಮ ಎಂದರೆ ಕರ್ತವ್ಯ, ಡ್ಯೂಟಿ. Religion is Matha.

**ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:**– ಮಾನ್ಯ ಪಟೇಲರು ಇದನ್ನು ಒಪ್ಪಿಕೊಳ್ಳುತ್ತಾರೆ ಎಂದು ನಂಬುತ್ತೇನೆ. ಮನುಷ್ಯರಿಗಾಗಿ ಧರ್ಮ ಇದೆಯೇ ಹೊರತು, ಧರ್ಮಕ್ಕಾಗಿ ಮನುಷ್ಯ ಹುಟ್ಟಿಲ್ಲ.

## 'ಹರಿಜನ' ಪದ ಬಳಸಬೇಡಿ – ಎಚ್ಚರಿಕೆ
## (9ನೇ ಆಗಸ್ಟ್ 1985, ವಿಧಾನಸಭೆ ಕಲಾಪ)

**ಶ್ರೀ ಬಿ. ಬಸವಲಿಂಗಪ್ಪ:**– ನಾನು ಮಾನ್ಯ ಪಟೇಲರ ಭಾಷಣವನ್ನು ಕೇಳಿದ್ದೇನೆ. ಉಳಿದ ಹಲವು ಮಾನ್ಯ ಸದಸ್ಯರ ಭಾಷಣವನ್ನೂ ಕೇಳಿದ್ದೇನೆ. ನಾನು ಮಾತನಾಡಬಾರದು ಎಂದೇ ಇದ್ದೆ. ಇಂದಿನ ಎಲ್ಲ ಭಾಷಣಗಳ ಒಳ ಅರ್ಥ ಏನೆಂದರೆ, ಕುಡಿಯುವವರೆಲ್ಲಾ ಹರಿಜನರು, ಇವರೆಲ್ಲ 'ಹರಿಜನ' ಎಂಬ ಪದವನ್ನು ಬೇಕಾದಾಗಲೆಲ್ಲಾ ಬಳಸಿದ್ದಾರೆ.

**ಶ್ರೀ ಜೆ.ಹೆಚ್. ಪಟೇಲ್:**– ನಾನು ಎಂದೂ ಹಾಗೆ ಮಾತನಾಡಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:**– ಹರಿಜನರು ಎನ್ನುವ ಪದ ಹೇಯವಾದಂತಹ ಭಾಷೆ. ಈ ಭಾಷೆಯನ್ನು ಯಾರೂ ಉಪಯೋಗಿಸಬಾರದು.

**ಶ್ರೀ ಜೆ.ಹೆಚ್. ಪಟೇಲ್:**– ನಾನೆಂದೂ ಹೀಗೆ ಮಾತನಾಡಿದವನಲ್ಲ.

**ಶ್ರೀ ಆರ್. ವೆಂಕಟರಾಮಯ್ಯ:**– ನಮಗ್ಯಾರಿಗೂ ಅಂತಹ ಉದ್ದೇಶವಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:**– ಸಾರಾಯಿ ಇದೊಂದು ಜನತಾ ಪಕ್ಷದ ನೀತಿಯಾಗಿಬಿಟ್ಟಿದೆ. ನಿಮಗೆ ಬೇಕಾದಲ್ಲಿ ತಯಾರು ಮಾಡಿದ ಮೇಲೆ ಅದನ್ನು ಹೇಗೆ ಹಂಚಬೇಕು ಎಂದು ಒಂದು ನಿಯಮ ಮಾಡಿಕೊಳ್ಳಿ. ಅನುಕಂಪದ ಹಿನ್ನೆಲೆಯಲ್ಲಿ ಸಮಾಜದ ಹಿಂದುಳಿದ ವರ್ಗ ಮತ್ತು ಅನುಸೂಚಿತ ಜಾತಿ ವರ್ಗ ಮತ್ತು ಅವರ ಹೆಸರಿನಲ್ಲಿ ಸಾರಾಯಿ ಸರಬರಾಜು ನಡೆಸಬೇಡಿ. ಬೇಕಾದರೆ ಎಲ್ಲಾ ಕೇರಿಗಳಲ್ಲಿ ಮದ್ಯದ ಅಂಗಡಿ ತೆಗೆದುಕೊಳ್ಳಿ, ಇದು ಒಂದು ಸಮಾಜವಾದ, ಸಮತಾವಾದ ಆಗುತ್ತದೆ.

**ಶ್ರೀ ಜೆ.ಹೆಚ್. ಪಟೇಲ್:**– ನಾನು ಹರಿಜನರ ಬದುಕು, ಘನತೆ ಮತ್ತು ಗೌರವಕ್ಕೆ ಧಕ್ಕೆ ತರುವಂತಹ ಮಾತನ್ನು ಆಡಿಲ್ಲ. ಬೇರೆ ಯಾರಾದರೂ

ಮಾತನಾಡಿದರೆ ನನಗೆ ತಿಳಿಯದು. ಹೀಗಾಗಿ ಮಾನ್ಯ ಬಸವಲಿಂಗಪ್ಪನವರಿಗೆ ಸಿಟ್ಟು ಬಂದಿರಬಹುದು. ಸರ್ಕಾರದ ದೃಷ್ಟಿಯಲ್ಲಿ ಪರಿಶಿಷ್ಟ ಜನಾಂಗ ಇರುವ ಕಡೆ ಮದ್ಯದ ಅಂಗಡಿ ತೆರೆಯಬಾರದು ಎಂಬ ನಿಲುವು ಇದೆ. ಏಕೆಂದರೆ ಉಡುಪಿ ಹೋಟೆಲ್ ನಡೆಸುವವರಿಗೆ ಇಂತಹ ಕಡೆ ತೆರೆಯಬೇಕು ಇಲ್ಲವೇ ತೆರೆಯಬಾರದು ಎಂದು ಯಾರೂ ಲೈಸೆನ್ಸ್ ಕೊಡುವುದಿಲ್ಲ. ಉಡುಪಿ ಹೋಟೆಲುಗಳು ಅನುಸೂಚಿತ ಜಾತಿಯವರ ಕೇರಿಯಲ್ಲಿ ಇರಬೇಕು ಎಂದು ಆಶಿಸುವವನು ನಾನು.

**ಶ್ರೀ ಬಿ. ಬಸವಲಿಂಗಪ್ಪ:–** ಅವರು ತೆಗೆಯುವುದಿಲ್ಲ.

**ಶ್ರೀ ಆರ್. ವೆಂಕಟರಾಮಯ್ಯ:–** ತೆಗೆಯಬೇಕು ಎಂದು ಕಾನೂನು ಮಾಡಬೇಕು.

**ಶ್ರೀ ಜೆ.ಹೆಚ್. ಪಟೇಲ್:–** ಒಟ್ಟಿನಲ್ಲಿ ಉಡುಪಿ ಹೋಟೇಲುಗಳ ಮಾಲೀಕರನ್ನು ಕರೆಸಿ ಪರಿಶಿಷ್ಟ ಜಾತಿ ಜನಾಂಗದವರು ಇರುವ ಕಡೆ ಹೋಟೆಲ್ ತೆರೆಯಿರಿ.... ಇಡ್ಲಿ ದೋಸೆ ಜೊತೆ ಸಾರಾಯಿ ಮಾರಿರಿ ಎಂದು ಹೇಳಿದಂತಾಗುತ್ತದೆ – ಈ ನಮ್ಮ ಚಿಂತನೆ.

## ಸತ್ಯಕೋಸ್ಕರ, ನೀತಿಗೋಸ್ಕರ ಅಧಿಕಾರ ಕಳೆದುಕೊಂಡಿದ್ದೇನೆ (3ನೇ ಏಪ್ರಿಲ್ 1987, ವಿಧಾನ ಸಭೆ ಕಲಾಪ)

**ಶ್ರೀ ಜಿ. ನಾರಾಯಣಕುಮಾರ್:–** ಮಾನ್ಯ ಅಧ್ಯಕ್ಷರೇ, ಈ ಸಂದರ್ಭದಲ್ಲಿ ನಿನ್ನೆ ಮಾನ್ಯ ಬಸವಲಿಂಗಪ್ಪನವರು ಕನ್ನಡ ಪುಸ್ತಕವೊಂದನ್ನು ಹರಿದುಹಾಕಿದುದ್ದನ್ನು ಪ್ರಸ್ತಾಪಿಸಿದ್ದೇವೆ. ಒಮ್ಮೆ 'ಬೂಸಾ' ಎಂದು ಹೇಳಿ ಇವರು ಸ್ಥಾನ ಕಳೆದುಕೊಂಡರು.....

**ಅಧ್ಯಕ್ಷರು:–** ಹೀಗೆ ಮಾತನಾಡುವುದು ಸರಿಯಲ್ಲ. ಮುಂದೇನೂ ಹೇಳಬೇಡಿ, ದಾಖಲೆಯಾಗುವುದಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:–** ಮಾನ್ಯ ನಾರಾಯಣಕುಮಾರರಿಗೆ ಇರುವ ಕನ್ನಡ ಪ್ರೇಮವನ್ನು ನಾನು ಮೆಚ್ಚುತ್ತೇನೆ. ಅವರ ಬಗೆಗೆ ನಾನು ತಪ್ಪು ತಿಳಿದುಕೊಳ್ಳುವುದಿಲ್ಲ. ಸಾಹಿತ್ಯವನ್ನು 'ಬೂಸಾ' ಎಂದು ಹೇಳಿ ಅಧಿಕಾರ

ಕಳೆದುಕೊಂಡರು ಎಂದು ಹೇಳಿದರು. ಚಿಂತಿಲ್ಲ... ಸತ್ಯಕ್ಕೋಸ್ಕರ, ನೀತಿಗೋಸ್ಕರ ಅಧಿಕಾರ ಕಳೆದುಕೊಂಡಿದ್ದೇನೆ. ಬೂಸಾ ಸಾಹಿತ್ಯ ಬರೆದು, ಜನಗಳಲ್ಲಿರುವ ಬುದ್ದಿಯನ್ನು ಅಪಹರಿಸಿಬಿಟ್ಟು, ಸುಖವಾಗಿ ತಿಂದು, ತೇಗಿ, ಕೊಬ್ಬು ಬೆಳೆಸಿಕೊಂಡು, ಸಮಾಜದಲ್ಲಿ ಬೆಳೆಯುತ್ತಿದ್ದಾರಲ್ಲಾ ಅಂತಹವರನ್ನು ನಾನು ಬಿಡುವುದಿಲ್ಲ.

ಸನ್ಮಾನ್ಯ ಅಧ್ಯಕ್ಷರೇ, ಪುನಃ ನಾನು ಹೇಳುತ್ತೇನೆ. ಕೆಲವು ಜನ ಬೂಸಾ ಸಾಹಿತ್ಯ ಬರೆದು ಕೊಬ್ಬು ಬೆಳೆಸಿಕೊಂಡು ಸಮಾಜದಲ್ಲಿದ್ದಾರೆ. ಸಾಹಿತ್ಯ ಹೇಗಿರಬೇಕೆಂಬುದನ್ನು ನನಗೆ ತಿಳಿದಂತೆ ಹೇಳಿದ್ದೇನೆ. ಸಾಹಿತ್ಯದಿಂದ ಸಾಮಾಜಿಕ ಬದಲಾವಣೆಯಾಗಬೇಕು. ಜಾತೀಯ ಭಾವನೆ ಹೋಗಬೇಕು. ಎಲ್ಲರೂ ಅಣ್ಣ ತಮ್ಮಂದಿರಂತೆ ಬೆಳೆಯುವ ವಿಶಾಲ ದೃಷ್ಟಿಯ ಸಮಾಜ ರಚನೆಯಾಗಬೇಕು.

ಇದು ಬಿಟ್ಟು ಜಾತಿ ಬೇಧ, ಮೇಲು ಕೀಳು ಎಂದು ಹೇಳುವುದಿದೆಯಲ್ಲಾ ಅದೇ ಬೂಸಾ ಸಾಹಿತ್ಯ. ಇದನ್ನು ಸಾವಿರ ಸರ್ತಿ ಹೇಳುತ್ತೇನೆ. ಉತ್ತಮ ಚಿಂತನೆಯ ಸಾಹಿತ್ಯಬೇಕು ಎಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು. ಕನ್ನಡ ಭಾಷೆಗೆ ಎಂದೂ ನನ್ನ ವಿರೋಧವಿಲ್ಲ. ಕನ್ನಡ ಸಾಹಿತ್ಯಕ್ಕೆ ನನ್ನ ವಿರೋಧವಿಲ್ಲ. ನಾನೂ ಕನ್ನಡದವನು. ಸಮಾಜವನ್ನು ಹಾಳುಮಾಡುವ ವಿಷಯಗಳ ಸಾಹಿತ್ಯವೇನಿದೆ ಅದೇ ಬೂಸಾ ಸಾಹಿತ್ಯ. ಅದರ ಮೇಲೆ ನನ್ನ ಕಣ್ಣು.

**ಶ್ರೀ ವೈ.ಕೆ. ರಾಮಯ್ಯ:-** ಮಾನ್ಯ ಬಸವಲಿಂಗಪ್ಪನವರಿಗೆ ನೆಮ್ಮದಿ ತರುವಂತಹ ಒಂದು ಮಾತನ್ನು ಅವರ ಗಮನಕ್ಕೆ ತರುತ್ತೇನೆ. ನಿಮ್ಮ ಅಭಿಪ್ರಾಯವನ್ನು ಸತ್ಯವೆಂದು ಒಪ್ಪಿಕೊಂಡವರು ನಮ್ಮಲ್ಲಿ ಬಹಳ ಜನರಿದ್ದೇವೆ. ಹೀಗಾಗಿ ತಾವು ಅಧಿಕಾರಿ ಕಳೆದುಕೊಂಡಿರಿ ಎಂದು ವ್ಯಥೆ ಪಡುವುದು ಬೇಡ. ನಿಮ್ಮೊಂದಿಗೆ ನಾವಿದ್ದೇವೆ.

**ಖಾಸಗೀ ಕಾರ್ಯಕಲಾಪಗಳು**

ಮದ್ಯಪಾನಕ್ಕೆ ಸಂಬಂಧಿಸಿದಂತೆ ಅದರ ನಿಷೇಧಕ್ಕೆ ಒಂದು ಸಮಿತಿಯ ನೇಮಕ ಕುರಿತು 1986ನೇ ಫೆಬ್ರವರಿ 7 ರಂದು ಕೆ.ಹೆಚ್ ಶ್ರೀನಿವಾಸ್‌ರವರಿಂದ ಮಂಡಿಸಲಾದ ನಿರ್ಣಯದ ಮೇಲೆ ಚರ್ಚೆ ಮುಂದುವರಿಸುವುದು.

**ಅಧ್ಯಕ್ಷರು:-** ಈ ಖಾಸಗೀ ನಿರ್ಣಯದ ಬಗ್ಗೆ ಇದುವರೆವಿಗೂ ಕೇವಲ 13 ಜನ ಸದಸ್ಯರುಗಳು ಮಾತನಾಡಿದ್ದಾರೆ. ಈಗ ಯಾರಾದರೂ ಮಾತನಾಡುವವರಿದ್ದರೆ ಮಾತನಾಡಬಹುದು.

**ಶ್ರೀ ಬಿ. ಬಸವಲಿಂಗಪ್ಪ:-** ಮಾನ್ಯ ಅಧ್ಯಕ್ಷರೇ, ಮಾನ್ಯ ಸದ್ಯರಾದ ಕೆ.ಹೆಚ್. ಶ್ರೀನಿವಾಸ್‌ರವರಿಗೆ ವಂದನೆಗಳನ್ನು ಅರ್ಪಿಸಬೇಕು. ಕಾರಣ ಅವರು ಸಕಾಲಿಕವಾದ ಖಾಸಗೀ ನಿರ್ಣಯವನ್ನು ತಂದಿದ್ದಾರೆ. ಇದರ ಬಗ್ಗೆ ಸಾಕಷ್ಟು ಚರ್ಚೆಯಾಗಿದೆ. ಸದನದಲ್ಲಿ ಬಹು ಹಿಂದಿನ ಕಾಲದಿಂದಲೂ ಈ ರೀತಿಯ ಚರ್ಚೆ ನಡೆಯುತ್ತಿದೆ. ಈ ನಿರ್ಣಯದ ಮೇಲೆ ಚರ್ಚೆ ನಡೆದಿದ್ದರೂ ಏನೇನೂ ಕೆಲಸ ಮಾಡಿದ್ದೇವೆನ್ನುವುದು ನಮ್ಮ ಕಣ್ಣು ಮುಂದೆ ಇದೆ.

ಶ್ರೀಮಾನ್ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದಂಥ ಕಾಲದಲ್ಲಿ ಪಾನನಿರೋಧ ಜಾರಿಗೆ ತರಬೇಕೆ? ಬೇಡವೇ ಎನ್ನುವ ಬಗ್ಗೆ ಚರ್ಚೆ ನಡೆಯಿತು. ಆಗ ಆ ಸರ್ಕಾರ ಒಂದು ನಿಲುವು ತೆಗೆದುಕೊಂಡಿತು. ಏನೆಂದರೆ ಪಾನನಿರೋಧ ಜಾರಿಗೆ ತರುವುದು ಬೇಡವೆಂದು. ಆಗ ಮಾನ್ಯ ರಾಚಯ್ಯನವರು ಮಂತ್ರಿಗಳಾಗಿದ್ದರು. ಅವರು ತಮ್ಮ ತಾಲ್ಲೂಕಿನ ಚಾಮರಾಜನಗರ ಮತ್ತು ಕೊಳ್ಳೇಗಾಲಗಳಿಗೆ ಸಂಬಂಧಪಟ್ಟ ಹಾಗೆ ಪಾನನಿರೋಧ ಜಾರಿಗೆ ತರಿಸಿಕೊಂಡರು. ಇನ್ನುಳಿದ ಕಡೆಗಳೆಲ್ಲೆಲ್ಲಾ ಬೇಡವೆಂದು ಮಾಡಿದರು.

**ಶ್ರೀ ಬಿ. ರಾಚಯ್ಯ:-** ಆ ಆರೋಪಣೆ ನನಗೆ ಸಲ್ಲತಕ್ಕಂಥಾದ್ದು ಅಲ್ಲ. ಇಡೀ ರಾಜ್ಯದಲ್ಲಿ ತರುವುದಕ್ಕೆ ಸಾಧ್ಯವಿತ್ತು. ಆದರೆ ತಮ್ಮ ಮನಸ್ಸು ನೋಯಿಸತಕ್ಕಂಥಾದ್ದು ಸರಿಯಲ್ಲವೆಂದು ಜಾರಿಗೆ ತರಲಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:-** ಅವರು ಹೇಳಿದ್ದುದು ಸರಿ. ಆಗ ನಮ್ಮ ಮಾತು ಯಾರೂ ಕೇಳುತ್ತಿರಲಿಲ್ಲ. ಅದಕ್ಕೆ ಜಾರಿಗೆ ತಂದರು.

**ಶ್ರೀ ಬಿ. ರಾಚಯ್ಯ:-** ತಾವು ಡೆಪ್ಯುಟಿ ಹೋಂ ಮಿನಿಸ್ಟರ್ ಆಗಿದ್ದವರು. ಆಗ ತಮ್ಮ ಮಾತು ಎಲ್ಲರೂ ಕೇಳುತ್ತಿದ್ದರು. ಈ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಮೆಜಾರಿಟಿ ಓಪಿನಿಯನ್ ಯಾವ ರೀತಿ ಬರುತ್ತದೆಯೋ ಆ ರೀತಿ ಮಾಡಬೇಕು.

**ಶ್ರೀ ಬಿ. ಬಸವಲಿಂಗಪ್ಪ:-** ತಾವು ಏನು ವಿಷಯವನ್ನು ಸ್ಪಷ್ಟೀಕರಿಸುತ್ತಿದ್ದೀರೋ ಅದನ್ನೇ ನಾನು ಹೇಳುತ್ತಿದ್ದೇನೆ. ಬ್ರಾಂದಿ ಅಂಗಡಿಗಳಿಗೆ ಲೈಸೆನ್ಸ್‌ಗಳನ್ನು ಸರ್ಕಾರ ಕೊಡುತ್ತಿದೆ. ಸರ್ಕಾರಕ್ಕೆ ಹಣಬೇಕೆಂದು ಬ್ರಾಂದಿ ಅಂಗಡಿಗಳಿಗೆ ಲೈಸನ್ಸ್‌ಗಳನ್ನು ಕೊಡುವುದನ್ನು ಸರ್ಕಾರ ಜಾರಿಗೆ ತಂದಿದೆ. ಪಾನನಿರೋಧ ಬೇಕಾಗಿಲ್ಲ. ಮೊದಲು ಒಂದೆರಡು ತಾಲ್ಲೂಕಿನಲ್ಲಿ ಪಾನನಿರೋಧ ಜಾರಿಯಲ್ಲಿ ಇತ್ತು. ಈಗ ಆ ತಾಲ್ಲೂಕಿಗೂ ಲೈಸನ್ಸ್‌ಗಳನ್ನು ವಿಸ್ತರಿಸಿದ್ದಾರೆ.

**ಶ್ರೀ ಕೆ.ಹೆಚ್. ಶ್ರೀನಿವಾಸ್:-** ಈಗ ಜಮಖಂಡಿ ತಾಲ್ಲೂಕಿನಲ್ಲಿ ಪಾನನಿರೋಧ ಕಾನೂನನ್ನು ಇಟ್ಟಿದ್ದಾರೆ. ಆದರೆ ಈ ಕಾನೂನನ್ನು ರಿಲ್ಯಾಕ್ಸ್ ಸಡಿಲ ಮಾಡಿದ್ದಾರೆ. ತಾಂತ್ರಿಕವಾಗಿ ಅಲ್ಲಿ ಪಾನನಿರೋಧ ಕಾನೂನು ಇದೆ ಆದರೆ, ಅದರ ಅಡಿಯಲ್ಲಿ ಎಲ್ಲಾ ರಿಲ್ಯಾಕ್ಸ್ ಆಗಿದೆ.

**ಶ್ರೀ ಬಿ. ಬಸವಲಿಂಗಪ್ಪ:-** ಹಿಂದೆ ಕಾಂಗ್ರೆಸ್ ಸರ್ಕಾರ ಇತ್ತು. ಇವೊತ್ತು ಜನತಾ ಸರ್ಕಾರ ಇದೆ ಎಂದು ನಾನು ಹೇಳುತ್ತಿಲ್ಲ. ಕಾಂಗ್ರೆಸ್ ಸರ್ಕಾರದವರು ಸ್ವಾತಂತ್ರ್ಯ ಹೋರಾಟ ಪೂರ್ವದಲ್ಲಿ ಪಾನನಿರೋಧವನ್ನು ಜಾರಿಗೆ ತರಬೇಕೆಂದು ಒತ್ತಾಯ ಮಾಡಿದ್ದರು. ಈ ವಿಷಯ ತಮಗೂ ಗೊತ್ತಿದೆ. ಕಾಂಗ್ರೆಸ್ ಸರ್ಕಾರವು ಪಾನ ನಿರೋಧವನ್ನು ರಾಷ್ಟ್ರದಲ್ಲಿ ಜಾರಿಗೆ ತರಬೇಕೆಂದು ಮಾಡಿತ್ತು, ಆದರೆ, ಪೂರ್ಣವಾಗಿ ಪಾನನಿರೋಧವನ್ನು ರಾಷ್ಟ್ರದಲ್ಲಿ ತರಲಿಕ್ಕೆ ಆಗಲಿಲ್ಲ. ಸರ್ಕಾರಕ್ಕೆ ಇರಬೇಕಾದ ಉದ್ದೇಶ ಬೇರೆ ಇದ್ದ ಕಾರಣ ಪಾನನಿರೋಧ ಜಾರಿಗೆ ತರುವುದಕ್ಕಾಗಲಿಲ್ಲ. ಕಾಂಗ್ರೆಸ್ ಸರ್ಕಾರ ಇದ್ದಾಗ ಎಷ್ಟು ಬ್ರಾಂದಿ ಶಾಪ್‌ಗಳನ್ನು ತೆರೆದರೋ ಅದಕ್ಕಿಂತ ಹೆಚ್ಚು ಬ್ರಾಂದಿ ಶಾಪ್‌ಗಳನ್ನು ಈಗ ತೆರೆಯಲಾಗಿದೆ ಎಂದು ಅಂಕಿ-ಅಂಶಗಳನ್ನು ನೋಡಿದರೆ ಗೊತ್ತಾಗುತ್ತದೆ. ಕಾಂಗ್ರೆಸ್ ಸರ್ಕಾರ ಇಷ್ಟೊಂದು ಪ್ರಮಾಣದಲ್ಲಿ ಶಾಪ್‌ಗಳನ್ನು ಮಾಡುವುದಕ್ಕೆ ಹೋಗಲಿಲ್ಲ. ಕಾಂಗ್ರೆಸ್ ಸರ್ಕಾರ ಸಹಿತ ಎಷ್ಟು ಮಿತಿಯಲ್ಲಿ ಬ್ರಾಂದಿ ಶಾಪ್‌ಗಳನ್ನು ತೆರೆಯಬೇಕಾಗಿತ್ತೋ ಆ ಮಿತಿಯಲ್ಲಿ ಮಾತ್ರ ತೆರೆಯಿತು. ಆದಾಯದ ಮೇಲೆ ಕಣ್ಣಿಟ್ಟು ಕಾಂಗ್ರೆಸ್ ಸರ್ಕಾರದವರು ಕೆಲಸ ಮಾಡಲಿಲ್ಲ. ಜನತಾ ಆಡಳಿತಕ್ಕೆ ಬಂದ ಮೇಲೆ ಪ್ರತಿಯೊಂದು ಹಳ್ಳಿಗಳಲ್ಲೂ ಬ್ರಾಂದಿ ಶಾಪ್‌ಗಳು ಆಗಿವೆ.

ಬೆಂಗಳೂರು ನಗರ ಒಂದರಲ್ಲೇ 2 ಸಾವಿರ ಬ್ರಾಂದಿ ಅಂಗಡಿಗಳು ಇವೆ. ಈ ಅಂಗಡಿಗಳ ಜೊತೆಗೆ ಹೆಂಡದ ಅಂಗಡಿ ಮತ್ತು ಸಾರಾಯಿ ಅಂಗಡಿಗಳು

ಬೇರೆ ಇವೆ. ಹಳ್ಳಿಗಳ ಮಟ್ಟದಲ್ಲೂ ಕೂಡ ಈ ಬ್ರಾಂದಿ ಅಂಗಡಿಗಳು ಇಲ್ಲದೆ ಇಲ್ಲ. ತಾಲ್ಲೂಕು ಮಟ್ಟದಲ್ಲಿ ಈ ಹಿಂದೆ 10 ಬ್ರಾಂದಿ ಅಂಗಡಿಗಳು ಇದ್ದರೆ, ಈಗ 100 ಅಂಗಡಿಗಳು ಇರುತ್ತವೆ. ಹೋಬಳಿ ಹೆಡ್ ಕ್ವಾರ್ಟರ್‌ನಲ್ಲಿ ಮೊದಲು ನಾಲ್ಕು ಅಥವಾ ಐದು ಬ್ರಾಂದಿ ಅಂಗಡಿಗಳು ಇದ್ದರೆ, ಈಗ ಹತ್ತು ಅಥವಾ ಹದಿನೈದು ಬ್ರಾಂದಿ ಅಂಗಡಿಗಳು ಇವೆ.

**ಶ್ರೀ ಬಿ. ರಾಚಯ್ಯ:-** ನಾನು ಮಂತ್ರಿ ಆಗಿಲ್ಲದಿದ್ದಾಗ ಮಾನ್ಯ ಬಸವಲಿಂಗಪ್ಪನವರು ಮತ್ತು ಮಾನ್ಯ ಮಲ್ಲಿಕಾರ್ಜುನ ಖರ್ಗೆಯವರು ಗುಂಡೂರಾಯರ ಮಂತ್ರಿಮಂಡಲದಲ್ಲಿ ಸಚಿವರಾಗಿದ್ದರು. ಅವರೇ ಪಾನನಿರೋಧವನ್ನು ಜಾರಿಗೆ ತರಬಹುದಾಗಿತ್ತು. ಮಾನ್ಯ ಅರಸುರವರ ಕಾಲದಲ್ಲೂ ಸಹ ಪಾನನಿರೋಧದ ಕೆಲಸವನ್ನು ಮಾಡಲಿಲ್ಲ.

**ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:-** ಅವರ ಕಾಲದಲ್ಲಿ ಮಾಡಿಲ್ಲ, ಇವರ ಕಾಲದಲ್ಲಿ ಮಾಡಿಲ್ಲವೆಂದು ಹೇಳವುದು ಸರಿಯಲ್ಲ. ನಮ್ಮ ಕಾಲದಲ್ಲಿ ನಾವು ಏನು ಮಾಡಿದ್ದೆವು, ನಿಮ್ಮ ಕಾಲದಲ್ಲಿ ಏನು ಮಾಡಿದ್ದೀರಿ ಎನ್ನುವ ಬಗ್ಗೆ ಒಂದು ವೈಟ್ ಪೇಪರ್‌ವನ್ನು ಬೇಕಾದರೆ ತರೋಣ. ಸುಮ್ಮನೆ ಇಲ್ಲಿ ವಾದ ಮಾಡುವುದು ಬೇಡ.

**ಶ್ರೀ ಬಿ. ರಾಚಯ್ಯ:-** ಕುಡಿಯಬೇಡಿರಿ ಎಂದು ಬಾಯ್-ಕಾಟ್ ಮಾಡಿದರೆ ನನ್ನದೇನು ಅಭ್ಯಂತರವಿಲ್ಲ. ಆದರೆ, ನೀವು ಇದ್ದಾಗ ಏನು ಮಾಡಿದಿರಿ ಎಂದು ಕೇಳಿದೆ ಅಷ್ಟೇ.

**ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ:-** ನಾವು ಆ ಕಡೆ ಕುಳಿತರೆ ಹಾಗೆ ಹೇಳುವುದಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:-** ಮಾನ್ಯ ರಾಚಯ್ಯನವರೇ, ತಾವು ಕುಡಿಯುವುದಿಲ್ಲ. ನೀವು ಏಕೆ ಇದರ ಬಗ್ಗೆ ಮಾತನಾಡುತ್ತೀರಿ? ಕುಡಿಯುವ ಅಭ್ಯಾಸ ಇದ್ದವರು ಮಾತನಾಡಲಿ. ಇವತ್ತು ಏನಾಗಿದೆ ಎಂದರೆ, ಮಾನ್ಯ ಮಂತ್ರಿಗಳಾದ ಶ್ರೀಮಾನ್ ಜೆ.ಹೆಚ್.ಪಟೇಲರಿಗೆ ಇದರ ಮೇಲೆ ಮಾತನಾಡುವುದಕ್ಕೆ ಸರ್ವ ಅಧಿಕಾರ ಉಂಟು. ಅವರು ಮಾತನಾಡಲೇಬೇಕು. ಅದಕ್ಕೆ ಕಾರಣ ಬೇಡ... (ಸದನದೊಳಕ್ಕೆ ಜೆ.ಹೆಚ್. ಪಟೇಲ್ ಪ್ರವೇಶ)

ಈಗ ಮಾನ್ಯ ಜೆ.ಹೆಚ್. ಪಟೇಲ್‌ರವರು ಬರುತ್ತಾ ಇದ್ದಾರೆ, ಮಾನ್ಯ ಮಂತ್ರಿಗಳವರಿಗೆ ಇದರ ಮೇಲೆ ಮಾತನಾಡಲಿಕ್ಕೆ ಸರ್ವ ಅಧಿಕಾರ ಉಂಟು. ಹಕ್ಕು ಉಂಟು, ಅವರು ಮಾತನಾಡಲೇ ಬೇಕು, ಮಾತನಾಡುತ್ತಾರೆ, ಆದರೆ ಅದು ಏಕೆ ಎಂದು ಕಾರಣ ಕೇಳಬೇಡಿ, ನಿಮಗೂ ಗೊತ್ತು, ಅವರಿಗೂ ಗೊತ್ತು.

ಶ್ರೀ ಬಿ. ರಾಚಯ್ಯ:– ಹಾಗಾದರೆ ನಾನು ಹೋಗುತ್ತೇನೆ.

ಶ್ರೀ ಬಿ. ಬಸವಲಿಂಗಪ್ಪ:– ಇಲ್ಲ ಸ್ವಾಮಿ, ತಾವು ಕುಳಿತುಕೊಳ್ಳಬೇಕು. ಬರೇ ಲಾಭಕ್ಕಾಗಿ ಆದಾಯಕ್ಕಾಗಿ ಈ ಅಬಕಾರಿ ಇಲಾಖೆ ಏನಿದೆ, ಅದಕ್ಕೆ ಇಲ್ಲದ ಕೆಲಸ ಜಾಸ್ತಿ ಕೊಟ್ಟಿದ್ದೀರಿ. ಅದಕ್ಕೆ ಕಾನೂನು ವಿಪರೀತ ಮಾಡಿದ್ದೀರಿ. ಮತ್ತೆ ಎರಡು ಮೂರು ವರ್ಷಗಳಿಂದ ಈ ಮಾತನ್ನು ಹೇಳುವಾಗ ಮಾನ್ಯ ಬಂಗಾರಪ್ಪನವರು ಇರಬೇಕಾಗಿತ್ತು. ಅವರು ಕುಡಿಯದೇ ಹೋದರೂ ಕೂಡ ಈ ವಿಷಯದಲ್ಲಿ ಅವರು ಪ್ರವೀಣರಿದ್ದಾರೆ. ಹಾಗೆಯೇ ಮಾನ್ಯ ಜಾಲಪ್ಪನವರೂ ಕೂಡ ಅಷ್ಟೇ ಪ್ರವೀಣರು.

ಶ್ರೀ ಆರ್.ಎಲ್. ಜಾಲಪ್ಪ:– ಏನು ಸ್ವಾಮಿ? ನಾನು ಅದರಲ್ಲಿ ಪ್ರವೀಣ ಎಂದು ನಿಮಗೆ ಹೇಗೆ ಗೊತ್ತು?

ಶ್ರೀ ಬಿ. ಬಸವಲಿಂಗಪ್ಪ:– ಇದನ್ನೆಲ್ಲಾ ಇಲ್ಲಿ ಹೇಳುವುದು ಬೇಡ.

ಶ್ರೀ ಕೆ.ಎಚ್. ಶ್ರೀನಿವಾಸ್:– ಮಾನ್ಯ ಜಾಲಪ್ಪನವರು ಮಂತ್ರಿಪದವಿಗೆ ರಾಜೀನಾಮೆ ಕೊಟ್ಟು ವ್ಯಾಪಾರ ಮಾಡುತ್ತೇನೆ ಎಂದು ಹೇಳುತ್ತಾ ಇದ್ದರು.

ಶ್ರೀ ಬಿ. ಬಸವಲಿಂಗಪ್ಪ:– ಆದಾಯಕ್ಕಾಗಿ, ಬ್ರಾಂದಿ, ಶೇಂದಿ, ಸಾರಾಯಿ, ಎಂದು ಸಾವಿರಾರು ಸಂಖ್ಯೆಯಲ್ಲಿ ಅಂಗಡಿಗಳಿಗೆ ಲೈಸನ್ಸ್‌ನನ್ನು ಕೊಟ್ಟಿದ್ದೀರಿ. ಚುನಾವಣೆ ಬಂತೆಂದರೆ ಹಳ್ಳಿಗಳಲ್ಲಿ ಕುಡಿಯದೇ ಇರತಕ್ಕಂತ ರಾಜಕಾರಣಿಗಳೇ ಇಲ್ಲ. ಎಲ್ಲರೂ ಕುಡಿಯುತ್ತಾರೆ. ಆ ದುರ್ಬಲತೆಯನ್ನು ತೆಗೆಯುವುದಕ್ಕೆ ಸಾಮಾನ್ಯ ಮನುಷ್ಯನ ದೃಷ್ಟಿಯಿಂದ ಆಲೋಚನೆ ಮಾಡಬೇಕೇ ಹೊರತು ಗಾಂಧೀಜಿಯವರು ಹಾಗೆ ಮಾಡಿದ್ದಾರೆ. ನೀವು ಅದೇ ಮಾಡಿ. ಹೀಗೆಂದು ಹೇಳಿದರೆ ಬಗೆ ಹರಿಯುವುದಿಲ್ಲ.

ಸ್ವಾಮಿ ವಿವೇಕಾನಂದರು ಮದುವೆಯೇ ಆಗಲಿಲ್ಲ ನೀವೇತಕ್ಕೆ ಮದುವೆ ಆದಿರಿ? ಇವೆಲ್ಲಾ ಅವಾಸ್ತವಿಕ. ಅಂತಹವರು ಮಹಾನ್ ಪಂಡಿತರು, ಧೀಮಂತರು ಇರುತ್ತಾರೆ, ಅವರಂತೆ ನಾವು ಮಾಡುವುದಕ್ಕೆ ಆಗುವುದಿಲ್ಲ. ಹೀಗಾಗಿ ಮಹಾತ್ಮಗಾಂಧೀಜಿಯವರು ಮಾಡಿದ್ದನ್ನು ಮತ್ತು ಬೇರೆಯವರು ಮಾಡಿದ್ದನ್ನು ಸ್ವಲ್ಪ ನಾವು ಮಾಡಬೇಕಾಗುತ್ತದೆ. ಆದರೆ ಪೂರಾ ಹಿಟ್ಲರ್ ಆಗುವುದು ಬೇಡ. ಅದಕ್ಕೂ ಒಂದು ಲಿಮಿಟ್ ಇಡಬೇಕು.

You may be a Vyabhichari. I admire you if you are a Sadachari. ಮನುಷ್ಯ ಸದಾಚಾರಿಯಾಗಿದ್ದರೆ ಒಳ್ಳೆಯದು ಆಯಿತು. ಅವನ ಪೂರ್ತಾ ಇತಿಹಾಸ ನೋಡಿ ಕೊಂಡು ಬಂದು ದೇವರುಗಳೆಂದು ಅನಿಸಿಕೊಂಡು ಬಂದು, ವ್ಯಭಿಚಾರಿಯಾದರೆ ಏನು ಲಾಭ ಆಯಿತು. ಆದರೆ ಮನುಷ್ಯ ಅತ್ಯಾಚಾರಿಯಾಗುವುದು ಬೇಡ. ಕುಡಿತದಲ್ಲಿ All those who take drinks are not drunkers. You will have to surrender to the authority.

ಈ ಒಂದು ಸ್ಥಿತಿ ಬರುವುದಕ್ಕೆ ರಾಷ್ಟ್ರದಲ್ಲಿ ಒಂದು ಒಳ್ಳೆಯ ವಾತಾವರಣ ನಿರ್ಮಾಣ ಮಾಡುವುದಕ್ಕೆ ನನ್ನ ಒಂದು ಸಣ್ಣ ಅಮೆಂಡ್‌ಮೆಂಟ್‌ನೊಂದಿಗೆ ಈ ನಿರ್ಣಯವನ್ನು ಮಂಡಿಸುತ್ತಿದ್ದೇನೆ. "ಮದ್ಯಪಾನಕ್ಕೆ ಸಂಬಂಧಿಸಿದಂತೆ ರಾಜ್ಯದಲ್ಲಿನ ಪ್ರಸ್ತುತ ನೀತಿ ಹಾಗೂ ವ್ಯವಸ್ಥೆ ಶ್ರೀ ಸಾಮಾನ್ಯ ಹಾಗೂ ಬಡ ಜನರ ಹಿತಕ್ಕೆ ಮಾರಕವಾಗಿ ಪರಿಣಮಿಸಿರುವುದರಿಂದ ಈಗಾಗಲೇ ನಡೆದಿರುವ ದುರಂತಗಳು ಅವುಗಳ ಬಗ್ಗೆ ನೇಮಿಸಲ್ಪಟ್ಟ ವಿಚಾರಣಾ ಆಯೋಗಗಳ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿ ಇರುವ ನೀತಿ ಹಾಗೂ ವ್ಯವಸ್ಥೆಯನ್ನು ಅಧ್ಯಯನ ಮಾಡಿ ಪಾನನಿರೋಧವೂ ಸೇರಿದಂತೆ ಬದಲಿ ನೀತಿ ಹಾಗೂ ವ್ಯವಸ್ಥೆಯನ್ನು ಸಾಧ್ಯಸಾಧ್ಯತೆಯನ್ನು ಪರಿಶೀಲಿಸಿ ಸೂಕ್ತ ಶಿಫಾರಸ್ಸು ಮಾಡಲು ವಿಧಾನಮಂಡಲದ ಪ್ರತಿನಿಧಿಗಳನ್ನು ಒಳಗೊಂಡ ಒಂದು ಉನ್ನತಾಧಿಕಾರಿ ಸಮಿತಿಯನ್ನು ನೇಮಿಸಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ.

**ಶ್ರೀ ಬಸವನಗೌಡ ಪಾಟೀಲ್:–** ಮಾನ್ಯ ಪಟೇಲರೇ 'ಮಾದಕ ವಸ್ತುಗಳು' ಇದನ್ನು ಸಹ ಸೇರಿಸಿದರೆ ಒಳ್ಳೆಯದು.

**ಶ್ರೀ ಆರ್. ವೆಂಕಟರಾಮಯ್ಯ:–** ಮಾನ್ಯ ಅಧ್ಯಕ್ಷರೇ, ಮಾನ್ಯ ಮಂತ್ರಿಗಳು ಡಿಬೇಟ್ ಪೂರ್ಣ ಫಾಲೋ ಮಾಡಿದಂತೆ ಕಾಣಲಿಲ್ಲ. ನಾವೆಲ್ಲ ಮಾತನಾಡುವಾಗ ಹೆಂಡದ ಬಗ್ಗೆ ನೀವು ವಿಷ ಕೊಡುತ್ತಿದ್ದೀರಿ. ಅದು ಬೇಡ ಒಳ್ಳೆಯ ಹೆಂಡ ಕೊಡಿ ಎಂದು ಹೇಳಿದ್ದೆವು. ಆದರೆ ಅದಕ್ಕೆ ನೀವು ಉತ್ತರ ಕೊಡಲಿಲ್ಲ.

**ಶ್ರೀ ಜೆ.ಹೆಚ್. ಪಟೇಲ್:–** ಡ್ರಗ್ ಅಡಿಕ್ಟ್ಸ್ ಬಗ್ಗೆ ಬೇಕಾದರೆ ಆಮೇಲೆ ಸೇರಿಸಬಹುದು. ಇದರಲ್ಲಿ ಬೇಡ. ಈ ನಿರ್ಣಯವನ್ನು ಸರ್ಕಾರದ ವತಿಯಿಂದ ನಾವು ಬೆಂಬಲಿಸುತ್ತಿದ್ದೇವೆ.

**ಶ್ರೀ ಕೆ.ಹೆಚ್. ಶ್ರೀನಿವಾಸ:–** ಸ್ಟೇಟ್ ಪಾಲಿಸಿಯನ್ನು ಇದರಲ್ಲಿ ಡಿಸ್‌ಕಷನ್ ಮಾಡುವುದಕ್ಕೆ ಆಗುವುದಿಲ್ಲ. ಮೊದಲು ಇದನ್ನು ಮಾಡೋಣ. ನಾನು ನಿಮಗೆ ಮೋರ್ ಕಾಂಪ್ಲಿಮೆಂಟ್ಸ್ ಕೊಡುತ್ತಿದ್ದೇನೆ.

**ಶ್ರೀ ಬಿ. ಬಸವಲಿಂಗಪ್ಪ:–** ಮಾನ್ಯ ಅಧ್ಯಕ್ಷರೇ, ಮಾನ್ಯ ಮಂತ್ರಿಗಳು ಭಾಷಣ ಮಾಡಿದ ಮೇಲೆ ಇಂತಹ ಒಂದು ನಿರ್ಣಯದ ಅವಶ್ಯಕತೆ ಇರಲಿಲ್ಲ ಎನ್ನುವ ಪ್ರಶ್ನೆ ಬರುತ್ತದೆ. ಆದರೆ ಎಲ್ಲರೂ ಒಪ್ಪಿಕೊಂಡಿದ್ದೀರಿ ಮಾಡಿ. ಕಾರಣ ಕುಡಿಸಲೇಬೇಕೆಂದು ಹೊರಟಿದ್ದೀರಿ ಕುಡಿಯಲು ತೀರ್ಮಾನ ಮಾಡಿದ್ದೀರಿ, ಮಾಡಿ ಆದರೆ ಎಷ್ಟು ಕುಡಿಯಬೇಕು ಕಂತ ಪೂರ್ತಿ ಕುಡಿಯಬೇಕೋ ಅರ್ಧ ಕಂತ ಕುಡಿಯಬೇಕೋ ಎನ್ನುವುದು ಒಂದು ಅಳತೆ ಬೇಕು. ನೀವು ಭಾಷಣ ಚೆನ್ನಾಗಿ ಮಾಡಿದ್ದೀರಿ, ಮಾಡಿ. ನೀವೆಲ್ಲ ಸೇರಿ ಒಂದು ಸಮಿತಿ ಮಾಡಬೇಕೆಂದು ಹೇಳಿದ್ದೀರಿ ಅದನ್ನು ಮಾಡಿ. ಅವರೇನು ಮಾಡುತ್ತಾರೋ ನೋಡಿಕೊಂಡು ಆಮೇಲೆ ನಾವೊಂದು ತೀರ್ಮಾನ ಮಾಡೋಣ ಎಂದು ಹೇಳಿದಂತಾಯಿತು.

ಒಂದು ವಿಚಾರವನ್ನು ನಾನು ಹೇಳುತ್ತೇನೆ. ಈ ಹೆಂಡದ ಅಂಗಡಿಗಳನ್ನು ತೆಗೆಯುವುದಕ್ಕೆ ಆ ನಿರುದ್ಯೋಗಿಗಳಿಗೆ ಲೈಸನ್ಸ್ ಕೊಡುವುದರಿಂದ ಅನ್–ಎಂಪ್ಲಾಯ್‌ಮೆಂಟ್ ಪ್ರಾಬ್ಲಮ್ ಸಾಲ್ವ್ ಆಗುತ್ತದೆಂದು ಹೇಳುವುದು ಸರಿಯಲ್ಲ. ನಿರುದ್ಯೋಗ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಬೇರೆ ರೀತಿಯಲ್ಲಿ ತಾವು ಗಮನ ಕೊಡಿ. ಹೆಂಡದ ಅಂಗಡಿಗಳನ್ನು ತೆರೆಯುವುದಕ್ಕೆ ಇವರಿಗೆ ಲೈಸನ್ಸ್ ಕೊಡುವುದರ ಕಡೆ ತಮ್ಮ ಗಮನವನ್ನು ಕೊಡಬೇಡಿ ಎಂದು ಹೇಳುತ್ತೇನೆ.

**ಶ್ರೀ ಜೆ.ಹೆಚ್. ಪಟೇಲ್:–** ಮದ್ಯ ಮಾರುವ ಅಂಗಡಿಗಳಲ್ಲಿ ರೀಟೇಲ್ ಆಗಿ ಮದ್ಯವನ್ನು ಮಾರಾಟ ಮಾಡಬಾರದೆಂದು ತಿಳಿಸಿದ್ದೇವೆ. ಆ ರೀತಿ ರೀಟೇಲ್ ಆಗಿ ಮದ್ಯ ಮಾರುವ ಅಂಗಡಿಗಳ ಲೈಸೆನ್ಸ್‌ಗಳನ್ನು ಕ್ಯಾನ್ಸಲ್ ಮಾಡುವುದಕ್ಕೆ ಕ್ರಮ ಕೈಗೊಂಡಿದ್ದೇವೆ. ಮತ್ತು ಯಾವ ಕಡೆ ನಿಯಮಾವಳಿಗಳನ್ನು ಮೀರಿ ಅಂಗಡಿಗಳನ್ನು ತೆರೆದಿದ್ದಾರೋ ಅವುಗಳನ್ನು ರದ್ದು ಮಾಡುತ್ತೇವೆ ಹಾಗೂ ಆತಂಕಕಾರಿಯಾಗುವಂಥ ಸ್ಥಳಗಳಲ್ಲಿ ಇರುವ ಮದ್ಯದ ಅಂಡಿಗಳನ್ನು ನಿಲ್ಲಿಸತಕ್ಕಂಥ ಕೆಲಸವನ್ನು ಮಾಡಿದ್ದೇವೆ.

## ಮಹಿಳೆಯರನ್ನು ಗೌರವಿಸಿ (4ನೇ ಮಾರ್ಚ್. 1986)

**ಶ್ರೀ ಬಿ. ಬಸವಲಿಂಗಪ್ಪ (ಯಲಹಂಕ):–** ಮಾನ್ಯ ಅಧ್ಯಕ್ಷರೇ, ಹೋದ ಸಭೆಯಲ್ಲಿ ನಾನು ಮಾತನಾಡುವಾಗ ಒಂದು ಸಲಹೆಯನ್ನು ಕೊಟ್ಟಿದ್ದೆ ಅನುಸೂಚಿತ ವರ್ಗಗಳ ಇಲಾಖೆಯನ್ನು ಸಮಾಜ ಕಲ್ಯಾಣ ಇಲಾಖೆಯನ್ನು ಜಾಸ್ತಿ ಅನುಭವ ಇಲ್ಲದವರ ಕೈಗೆ ಕೊಡಬೇಡಿ ಎಂದು ಹೇಳಿದ್ದೆ ಮತ್ತು ಅನುಭವ ಇಲ್ಲದವರ ಕೈಗೆ ಕೊಟ್ಟಿದ್ದರಿಂದ ಕೆಲಸ ಕಾರ್ಯಗಳು ಸಮರ್ಪಕವಾಗಿ ನಡೆಯುತ್ತಿಲ್ಲ ಮುಖ್ಯ ಮಂತ್ರಿಗಳು ಲೋಕೋಪಯೋಗಿ ಇಲಾಖೆ ಹೋಂ ಡಿಪಾರ್ಟಮೆಂಟ್ ಕೊಡಬೇಕೆ ಹೊರತು, ಸಮಾಜ ಕಲ್ಯಾಣ ಇಲಾಖೆಯಲ್ಲ. ಇವರಿಂದ ನಿರೀಕ್ಷಿತ ಮಟ್ಟದಲ್ಲಿ ನಮಗೆ ನ್ಯಾಯ ದೊರಕಿಲ್ಲವೆಂದು ಸ್ಪಷ್ಟವಾಗಿ ಸಭೆಯ ಮುಂದೆ ಹೇಳುತ್ತೇನೆ. ನಮಗೊಂದು ವರದಿ ಕೊಟ್ಟಿದ್ದಾರೆ. ಇದರಲ್ಲಿ ಹರಿಜನ ಗಿರಿಜನ ಮಕ್ಕಳಿಗೆ ಕೊಡುವಂಥ ಸ್ಕಾಲರ್‌ಷಿಪ್‌ಗಾಗಿ ಹಣ ಖರ್ಚು ಮಾಡಿರುವುದನ್ನು ಬಿಟ್ಟರೆ, ಪ್ಲಾನ್‌ಗಳ ಬಗ್ಗೆ ಪುನರಪಿ ಉಚ್ಚಾರ ಮಾಡಿದ್ದಾರೆ, ಲೇಬರ್ಸ್ ಬಗ್ಗೆ ಅಂಕಿ ಸಂಖ್ಯೆ ಕೊಟ್ಟಿದ್ದಾರೆ. ಯೋಜನೆಯಲ್ಲಿ ಪ್ಲಾನ್ ಸ್ಕೀಂಗಳು ಇವೆ. ಹರಿಜನ ಗಿರಿಜನ ಕಲ್ಯಾಣ ಯೋಜನೆ, ಸಮಾಜ ಕಲ್ಯಾಣ ಯೋಜನೆಗಳಿಗೆ 28.07 ಕೋಟಿ ರೂ.ಗಳನ್ನು ಕೊಟ್ಟಿದ್ದಾರೆ. 1986–87ರಲ್ಲಿ 29.07 ಕೋಟಿ ಕೊಟ್ಟಿದ್ದಾರೆ. ಇದರಲ್ಲಿ ರಾಜ್ಯಸರ್ಕಾರದ ಸ್ಕೀಂಗಳು ಯಾವುದೂ ಇಲ್ಲ. ಸಾಮಾಜಿಕ ಮತ್ತು ಸಮುದಾಯ ಸೇವೆಗಳು, ಹರಿಜನ ಗಿರಿಜನರಿಗಾಗಿ ಇರತಕ್ಕಂಥದಲ್ಲಿ, 3.04 ಕೋಟಿ ಕೊಟ್ಟಿದ್ದಾರೆ. ಈ ಸಾರಿ 5.79 ಕೋಟಿ ಕೊಟ್ಟಿದ್ದಾರೆ. ಒಟ್ಟು ಪ್ಲಾನ್ ಸ್ಕೀಂಗಳಲ್ಲಿ 36.56 ಕೋಟಿ ಕೊಟ್ಟಿದ್ದಾರೆ ಇವೆಲ್ಲವೂ ಕೇಂದ್ರ ಸರ್ಕಾರಕ್ಕೆ ಸೇರಿದ್ದು. ರಾಜ್ಯ ಸರ್ಕಾರದ್ದೂ ಯಾವುದು ಇಲ್ಲ. ಡಿಟೈಲ್‌ಎರ್ಕ್‌ಸೈಟ್ ಮೇಟ್‌ನಲ್ಲಿ 1956–87ರಂದು ನೋಡುವುದಾದರೆ,

ಹರಿಜನ ಗಿರಿಜನರಿಗಾಗಿ 8.20 ಕೋಟಿ ಯೋಜನೇತರ ಕಾರ್ಯಕ್ರಮಗಳಿಗೆ ರಾಜ್ಯಸರ್ಕಾರದಿಂದ ಯಾವುದೂ ಕೊಟ್ಟಿಲ್ಲ ಇಲ್ಲಿ ಎಂದರೆ, ನಾನು ತಮಗೆ ಸ್ಪಷ್ಟವಾಗಿ ಹೇಳುತ್ತೇನೆ. ಎಸ್.ಸಿ ಎಸ್.ಟಿಯವರಿಗೆ, ಅಲ್ಪಸಂಖ್ಯಾತರಿಗೆ ಮತ್ತು ಹಿಂದುಳಿದ ವರ್ಗದವರಿಗೆ ಏನೊಂದು ಇಲಾಖೆ ಇಟ್ಟಿದ್ದೀರಿ, ಈ ಇಲಾಖೆಗಳಿಗೆ ತಕ್ಕ ಹಣ, ಹಾಕಿಕೊಂಡಂಥ ಯೋಜನೆಗಳು ಇಲ್ಲವೂ ಕೇಂದ್ರ ಸರ್ಕಾರಕ್ಕೆ ಸೇರಿದ್ದು ಸರ್ಕಾರದಿಂದ ಅಷ್ಟಾಗಿ ಒದಗಿಸಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತೇನೆ. ಸ್ಪೆಷಲ್ ಕಾಂಪೊನೆಂಟ್‌ನಲ್ಲಿ 42.37 ಕೋಟಿಯನ್ನು ಒಟ್ಟಿಗೆ ಹಾಕಿದ್ದಾರೆ. ರಾಜ್ಯಸರ್ಕಾರದಿಂದ ಎಷ್ಟು ಕೊಟ್ಟಿದ್ದಾರೆ ನೋಡುವುದಾದರೆ, ಕೇವಲ 2–3 ಕೋಟಿ ರೂಪಾಯಿಗಳನ್ನು ಮಾತ್ರ ಇಟ್ಟಿದ್ದಾರೆ ಹಣ, ಕೇಂದ್ರದ ಯೋಜನೆಗಳನ್ನು ಮುಂದಿಟ್ಟುಕೊಂಡು, ನಾವು ಅನುಸೂಚಿತ ಜಾತಿ ವರ್ಗ, ಅಲ್ಪಸಂಖ್ಯಾತರಿಗೆ, ಅವರ ಅಭಿವೃದ್ಧಿಗಾಗಿ ಹಣ ಖರ್ಚು ಮಾಡುತ್ತಿದ್ದೇವೆ ಚಪ್ಪರಿಸಿಕೊಂಡು ಓಡಾಡುತ್ತಿದ್ದಾರೆಂದು ಸ್ಪಷ್ಟವಾಗಿ ತಮ್ಮ ಮುಂದೆ ಹೇಳುತ್ತೇನೆ.ಅದರಲ್ಲಿ ಅನುಸೂಚಿತ ಜಾತಿಯವರು ಸುಮಾರು ಎರಡು ಕೋಟಿಯ ಹತ್ತಿರ ಬರುತ್ತಾರೆ. ಜನರ ಕಲ್ಯಾಣವಾಗಬೇಕೆಂದರೆ, ಯಾವ ಯಾವ ರೀತಿಯ ಕಾರ್ಯಕ್ರಮಗಳನ್ನು ಹಾಗೂ ಸರ್ಕಾರ ಕೊಟ್ಟಂತ ಹಣವನ್ನು ಸರಿಯಾದ ರೀತಿಯಲ್ಲಿ ಮತ್ತು ಉಪಯೋಗಿಸಿಕೊಳ್ಳಬೇಕು, ನಿಷ್ಠೆಯಿಂದ ಕೆಲಸ ಮಾಡುವಂಥ ಅಧಿಕಾರಿಯನ್ನು ಇಟ್ಟರೆ ಮಾತ್ರ ಸಾಧ್ಯವಾಗುತ್ತದೆ. ಒಂದು ಇಲಾಖೆಗೆ ಸೂಪರ್ ಟೈಂ ಸ್ಕೇಲಿನ ಅಧಿಕಾರಿಯೊಬ್ಬರ ಅವಶ್ಯಕತೆ ಇದೆ. ಬಿ.ಡಿ.ಎ ಸಂಸ್ಥೆಗೆ ಸೂಪರ್‌ಟೈಂ ಸ್ಕೇಲ್ ಅಧಿಕಾರಿಯನ್ನು ಹಾಕುವಾಗ, ಸಮಾಜದ ಜೀವನವನ್ನು ಮಾಡುವಂಥ, ಇಲಾಖೆಗೆ, ಹೆಣ್ಣು ಮಕ್ಕಳ ಸಮಸ್ಯೆಗಳನ್ನು ಬಗೆಹರಿಸುವಂಥ ಈ ಒಂದು ಸರಿಯಾಗಿರತಕ್ಕ ಮಂತ್ರಿ ಇರಬೇಕಾಗುತ್ತದೆ. ಅಧಿಕಾರಿಗಳು ಕೂಡ ಸರಿಯಾದವರು ಇರಬೇಕಾಗುತ್ತದೆ. ದೇಶ ಪ್ರೇಮವುಳ್ಳಂಥ ಅಧಿಕಾರಿಗಳು ಇರಬೇಕಾಗುತ್ತದೆ. ಇವತ್ತು ಈ ಇಲಾಖೆಯಲ್ಲಿ ಅಧಿಕಾರಿಗಳು ನಿಷ್ಪ್ರಯೋಜಕರಿದ್ದಾರೆ. ಒಬ್ಬಿಬ್ಬರು ಇರಬಹುದು.ಅವರಿಂದ ಉದ್ದೇಶವನ್ನು ಮಾಡಲಿಕ್ಕಾಗುವುದಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತೇನೆ. ಡಿಟೈಲ್ ಎಸ್ಟಿಮೇಟ್‌ನಲ್ಲಿರುವ ಸಾಲಿಗೆ ಯೋಜನೇತರ ಕಾರ್ಯಕ್ರಮಗಳಿಗೆ ರಾಜ್ಯಸರ್ಕಾರ ಹಣವನ್ನು ಒದಗಿಸಿಲ್ಲ. ಡೆವಲಪ್ ಮೆಂಟ್ ಕಾರ್ಪೊರೇಷನ್‌ಗೆ 1984–85 ರಲ್ಲಿ 2.50 ಲಕ್ಷ ಇಟ್ಟಿದ್ದರು. 1985ರಲ್ಲಿ 350 ಲಕ್ಷ ಬಂಡವಾಳ ಇಟ್ಟಿದ್ದಾರೆ. 1986–87ರಲ್ಲಿ ಯೋಜನೆಯ ಕೆಳಗೆ 40 ಲಕ್ಷ ಇಟ್ಟಿದ್ದಾರೆ. ಯೋಜನೇತರ ಬಾಬಿಗೆ ರಾಜ್ಯಸರ್ಕಾರ ಏನೂ ಕೊಟ್ಟಿಲ್ಲವೆಂದರೆ

ಇದರ ಅರ್ಥ ಏನು? ಇಲ್ಲಿ ಬಡವರು ಇದ್ದಾರೆ, ಬಡವರ ಕೆಲಸಕಾರ್ಯಗಳಿಗೆ ಕೇಂದ್ರಸರ್ಕಾರದಿಂದ ಹಣ ಬರಬೇಕು. ಮತ್ತು ನಿಮ್ಮದು ಇರಬೇಕು. ಇದರ ಬಗ್ಗೆ ಡಂಗೂರ ಹೊಡೆದುಕೊಂಡು ಎಲ್ಲರನ್ನೂ ದಾರಿತಪ್ಪುಗೊಳಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದೀರಿ. ಆದರೆ ಇದು ಬಹಳ ದಿವಸ ಹೋದಂತೆ ಜನಗಳು ನಿಮ್ಮ ಮೋಸವನ್ನು ಅರಿತುಕೊಂಡರೆ, ಅವರನ್ನು ತಡೆಯುವುದಕ್ಕಾಗುವುದ್ದಿಲ್ಲ. ಜನಗಳನ್ನು ನಂಬಿಕೊಂಡಿದ್ದೀರಿ, ನಾವು ಸಹ ಜನಗಳನ್ನು ನಂಬಿಕೊಂಡಿದ್ದೇವೆ. ಪರಿಶಿಷ್ಟರ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಯಾವ ಯಾವ ಯೋಜನೆಗಳನ್ನು ಜಾರಿಗೆ ತಂದಿದ್ದೀರಿ. ಅದನ್ನು ಒದಗಿಸಿದ್ದೀರಿ ಎಂಬುದನ್ನು ಉತ್ತರ ಕೊಡುವಾಗ ಹೇಳಿದರೆ ನನಗೆ ಸಂತೋಷವಾಗುತ್ತದೆ. ಪರಿಶಿಷ್ಟ ಜಾತಿ, ವರ್ಗ ಮತ್ತು ಮೈನಾರಿಟೀಸ್‌ಗೆ ಒಂದು ಕೋಟಿ ರೂಪಾಯಿ ಒದಗಿಸಿದ್ದೀರಿ.

ನಮ್ಮ ರಾಜ್ಯಸರ್ಕಾರ ಎಷ್ಟೆ ಹಣ ಒದಗಿಸಿದ್ದರೂ ಒಂದು ರೂಪಾಯಿ ಸಹ ಕೊಟ್ಟಿಲ್ಲ ಎಂದು ಎಲ್ಲಿಯವರೆಗೆ ದಾರಿ ತಪ್ಪಿಸಲಿಕ್ಕೆ ಪ್ರಯತ್ನ ಮಾಡುತ್ತೀರಿ? I will not talk all thing except going to the facts. ಡಿಸ್ಟ್ರಿಕ್ಟ್ ಪ್ಲಾನ್‌ಗಳನ್ನು ಮಾಡಿದ್ದಾರೆ ಡಿಸ್ಟ್ರಿಕ್ಟ್ ಪ್ಲಾನ್‌ನಲ್ಲಿ 647.77 ಕೋಟಿ ರೂಪಾಯಿಗಳನ್ನು ಕೊಟ್ಟಿದ್ದಾರೆ ಅದರಲ್ಲಿ ರಾಜ್ಯ ಸರ್ಕಾರದ್ದು 456.72 ಕೋಟಿ ರೂಪಾಯಿ. ಇದು ಬಾಕಿ 191.06 ಕೋಟಿ ರೂಪಾಯಿ. ಡಿಸ್ಟ್ರಿಕ್ಟ್ ಯೋಜನೆಯಲ್ಲಿ ಹಣವನ್ನು ಒದಗಿಸಿರುವುದನ್ನು ನೋಡಿ ಬೇರೆ ಯಾವುದೇ ರೀತಿಯಲ್ಲಿ ಹಣವನ್ನು ಒದಗಿಸಿದ ಹಾಗೆ ಕಾಣಲಿಲ್ಲ. ಇದರ ಬಗ್ಗೆ ಉತ್ತರವನ್ನು ಕೊಡಬೇಕು. ಬಡ್ಜೆಟ್ ಮ್ಯಾನ್ಯುಯಲ್‌ನಲ್ಲಿ ರಾಜ್ಯಸರ್ಕಾರ ಹಣವನ್ನು ಕೊಟ್ಟಿಲ್ಲ ಎಂದರೆ ಇಷ್ಟು ಹಣವನ್ನು ಕೇಂದ್ರಸರ್ಕಾರಕ್ಕೆ ಮರುಪಾವತಿ ಮಾಡಬೇಕೆಂದು ಇದೆ 497.57 ಕೋಟಿ ರೂಪಾಯಿಗಳನ್ನು ಸಾಲದ ರೂಪದಲ್ಲಿ ವಾಪಸ್ಸು ಕೊಡಲೇಬೇಕು. ಮಾನ್ಯ ಮಂತ್ರಿ ಯವರು ಸ್ಟೇಟ್‌ಮೆಂಟ್ ಕೊಟ್ಟಿದ್ದಾರೆ. ಅದು ಬೇರೆ ವಿಚಾರ. 100 ಕೋಟಿ ರೂಗಳಲ್ಲಿ ಅಡಕವಾಗಿರತಕ್ಕದ್ದು ಬೇರೆ ಖಾತೆಗಳಿಂದ ವರ್ಗಾಯಿಸಿ ಖರ್ಚುಮಾಡುತ್ತಿದ್ದೇವೆಂದು ಹೇಳಿ ಅದನ್ನು ರಾಜ್ಯ ಸರ್ಕಾರದಿಂದ ಸಮಾಜ ಕಲ್ಯಾಣ ಇಲಾಖೆಯ ಯೋಜನೆಗಳಿಗೆ ಎಲ್ಲಿಂದ ಹಣವನ್ನು ತರುತ್ತೀರಿ ನಿಮ್ಮಿಂದ ತರುವುದಕ್ಕೆ ಆಗುವುದಿಲ್ಲವೆಂದು ನನ್ನ ಸ್ಪಷ್ಟ ಅಭಿಪ್ರಾಯ:

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಬಗ್ಗೆ ಹೇಳುವುದಾದರೆ ಹೆಣ್ಣುಮಕ್ಕಳು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಚಂದ್ರಗುತ್ತಿಯಲ್ಲಿ

ನಡೆಯುವ ನಿದರ್ಶನವನ್ನು ನೋಡಬೇಕಾಗಿದೆ. ಈ ತಿಂಗಳ 19–20ನೇ ತಾರಿಖಿನಂದು ಚಂದ್ರಗುತ್ತಿಯಲ್ಲಿ ಬೆತ್ತಲೆ ಸೇವೆ ನಡೆಸಿದ್ದಾರೆ. ಮ್ಯಾಗಜಿನ್‌ನಲ್ಲಿ ಪಬ್ಲಿಶ್ ಆಗಿರುವ ಬೆತ್ತಲೆ ಸೇವೆಯ ಮೆರವಣಿಗೆ ಈ ರೀತಿ ಎದೆ. (ಇದರ ಫೋಟೋವನ್ನು ಸಭೆಗೆ ತೋರಿಸಿದರು) ಹೆಂಗಸರು ಗಂಡಸರು ಬೆತ್ತಲೆಯಲ್ಲಿ ಮೆರವಣಿಗೆ ಹೋಗುತ್ತಾರಂತೆ. ಇದು ಮಾನ್ಯ ಬಂಗಾರಪ್ಪನವರ ಮತದಾನ ಕ್ಷೇತ್ರವೆಂದು ಕಾಣುತ್ತದೆ. ಇದುವರೆಗೆ ಅದನ್ನು ತಪ್ಪಿಸಲಿಕ್ಕೆ ಯಾರೂ ಪ್ರಯತ್ನ ಮಾಡಿಲ್ಲ ಇದೇರೀತಿ ನರಗುಂದದಲ್ಲಿ ಕಾಮದಹನವೆಂದು ಹೆಣ್ಣು ಮಕ್ಕಳು ಗಂಡು ಮಕ್ಕಳು ಕಾಮದಹನ ಮಾಡತಕ್ಕ ವ್ಯವಸ್ಥೆ ಇದೆ. ಇದರ ಬಗ್ಗೆ ಹೋಮ್‌ಮಿನಿಸ್ಟರ್ ಆಗಿರತಕ್ಕವರು ಸರ್ಕಾರಿ ನೌಕರರಿಗೆ ಜವಾಬ್ದಾರಿಯನ್ನು ವಹಿಸಿ ಅದನ್ನು ನಿಲ್ಲಿಸುವ ಕೆಲಸ ಮಾಡಿಸಬೇಕು. ಜಿಲ್ಲಾಧಿಕಾರಿಗಳಿಗೆ ಮತ್ತು ಪೋಲೀಸ್ ಅಧಿಕಾರಿಗಳಿಗೆ ಜವಾಬ್ದಾರಿಯನ್ನು ವಹಿಸಿ. ಯಾರಾದರೂ ಕಾಮದಹನ ಮಾಡಲಿಕ್ಕೆ ಬಿಟ್ಟರೆ ನಿಮ್ಮ ಮೇಲೆ ಕ್ರಮ ತೆಗೆದುಕೊಳ್ಳುತ್ತೇನೆಂದು ಗೌರ್ನಮೆಂಟ್ ಆರ್ಡರ್ ಹೊರಡಿಸಿ. ನಾನು ಗೌರ್ನಮೆಂಟ್ ಆರ್ಡರ ಹೊರಡಿಸಿದ್ದೇನೆ. ಹೋಮ್ ಮಿನಿಸ್ಟರ್ ಆಗಿರತಕ್ಕವರು ಈ ತಿಂಗಳ 19–20ನೇ ತಾರೀಖಿನಂದು ಚಂದ್ರಗುತ್ತಿಯಲ್ಲಿ ಸಾವಿರಾರು ಜನರ ಎದುರಿನಲ್ಲಿ ಬೆತ್ತಲೆಸೇವೆ ಎಂದು ಹೆಂಗಸರು ಗಂಡಸರು ಮೆರವಣಿಗೆ ಹೊರಟು ದೇವರ ಪೂಜೆ ಮಾಡುತ್ತಾರೆ. ಈ ಒಂದು ಮೌಢ್ಯಭಾವನೆ ಬಹಳ ವರ್ಷದಿಂದಲೂ ಇದೆ. ನಾನು ಇಂತಹ ಸೇವೆಗಳನ್ನು ನಿಲ್ಲಿಸಲಿಕ್ಕೆ ಪ್ರಯತ್ನ ಮಾಡಿದ್ದೇನೆ, ಜನತಾ ಸರ್ಕಾರದವರು ನಿಲ್ಲಿಸಲೇಬೇಕು. ಅದನ್ನು ನಿಲ್ಲಿಸತಕ್ಕದ್ದು ಸರ್ಕಾರದ ಜವಾಬ್ದಾರಿ. ಅದನ್ನು ನಿಲ್ಲಿಸಲಿಕ್ಕೆ ಮುಖ್ಯಮಂತ್ರಿಗಳು ಮತ್ತು ತಾವು ಪ್ರಯತ್ನ ಮಾಡಬೇಕು. ಆ ಬಗ್ಗೆ ಪ್ರಯತ್ನ ಮಾಡುತ್ತೇವೆಂದು ಈ ಸದನದಲ್ಲಿ ಹೇಳಬೇಕು. ಸಮಾಜ ಕಲ್ಯಾಣ ಇಲಾಖೆಯಲ್ಲಿ ಹಲವಾರು ಇಲಾಖೆಗಳು ಇವೆ. ಅಂಗವಿಕಲರ ಭಾಗ ಇದೆ.

**ಶ್ರೀ ಧರ್ಮಸಿಂಗ್ ನಾರಾಯಣಸಿಂಗ್:**– ತಾವು ಏತಕ್ಕೆ ಹೇಳುತ್ತೀರಿ ಇವರ ಕೈಯಲ್ಲಿ ಅದನ್ನು ತಡೆಗಟ್ಟುವುದಕ್ಕೆ ಆಗುವುದಿಲ್ಲ.

**ಶ್ರೀ ಬಿ. ಬಸವಲಿಂಗಪ್ಪ:**– ನಾನು ಸರ್ಕಾರಕ್ಕೆ ಹೇಳುತ್ತಿದ್ದೇನೆ ಅವರ ಕೈಯಲ್ಲಿ ಆಗುವುದಿಲ್ಲ

O-026-13

**ಶ್ರೀ ಬಿ. ರಾಚಯ್ಯ:–** ಇದು ಹುಡುಗಾಟದ ಮಾತು

**ಶ್ರೀ ಧರ್ಮಸಿಂಗ್ ನಾರಾಯಣಸಿಂಗ್:–** ನಿಮ್ಮ ಸರ್ಕಾರ ಬಂದ ಮೇಲೆ ಏನು ಮಾಡುತ್ತೀರಿ ಅದನ್ನು ಹೇಳಿ

**ಶ್ರೀ ಬಿ. ಬಸವಲಿಂಗಪ್ಪ:–** ಈಗ ನಾನು ಹೇಳುತ್ತಿದ್ದೇನೆ ಮಾನ್ಯ ಮಂತ್ರಿಗಳಿಗೆ ಈ ಒಂದು ಫೋಟೋಗಳನ್ನು ನೋಡಲಿಕ್ಕೆ ಇಷ್ಟವಿಲ್ಲ. ಅಂದರೆ ನಾನು ಮಾನ್ಯ ರಾಚಯ್ಯ ಮತ್ತು ವಿ.ಎಲ್. ಪಟೇಲ್‌ರವರಿಗೆ ಹೇಳಲಿಲ್ಲ ಹೆಣ್ಣು ಮಕ್ಕಳ ಇಲಾಖೆಯನ್ನು ನೋಡಿಕೊಳ್ಳುತ್ತಿದ್ದೀರಿ ನಿಮಗೂ ಹೇಳಲಿಲ್ಲ. ಕಾರಣ ಏನೆಂದರೆ ಇದನ್ನು ಸರಿಪಡಿಸಲಿಕ್ಕೆ ಮತ್ತು ಸಮಾಜವನ್ನು ಸುಧಾರಣೆ ಮಾಡಲಿಕ್ಕೆ ನಿಮ್ಮ ಕೈಯಲ್ಲಿ ಆಗುವುದಿಲ್ಲ. ಸಮಾಜ ಸುಧಾರಣೆಯನ್ನು ಮನವೊಲಿಸಿ ಮಾಡಿ ಇಂತಹ ಅನಿಷ್ಟಗಳನ್ನು ಬಲತ್ಕಾರದಿಂದ ನಿಲ್ಲಿಸಬೇಕು.

**ಅಧ್ಯಕ್ಷರು:–** ತಾವು ಗೃಹ ಮಂತ್ರಿಗಳಾಗಿದ್ದಾಗಿನಿಂದಲೂ ಇದು ನಡೆಯುತ್ತಿದೆ. ವಿಷಯ ಹೇಳಿ.

**ಶ್ರೀ ಬಿ. ಬಸವಲಿಂಗಪ್ಪ:–** ನಾನು ನಿಲ್ಲಿಸಿದ್ದೇನೆ. ಈ ಇಲಾಖೆಯಲ್ಲಿ ಹಲವಾರು ಇಲಾಖೆಗಳು ಇವೆ. ಅಂಗವಿಕಲರ ತರಬೇತಿ ಕೇಂದ್ರ, ಮಹಿಳಾ ಮತ್ತು ಹೆಣ್ಣು ಮಕ್ಕಳ ಸಲಹೆಗೆ ವಿಶೇಷ ಪೌಷ್ಟಿಕ ಆಹಾರವನ್ನು ಸರಬರಾಜು ಮಾಡತಕ್ಕದ್ದು, ರಿಮ್ಯೆಂಡ್ ಹೋಮ್ ಫಾರ್ ಅಂಡ್ ಮೆನ್, ರಿಸಿಪ್ ಸನ್ ಸೆಂಟರ್ಸ್, ಇಂಡಸ್ಟ್ರೀಯಲ್ ಅಂಡ್ ಅಗ್ರಿಕಲ್ಚರ್ ಸೆಂಟರ್, ಇಂಪ್ರೋವ್ ಮೆಂಟ್ ಆಫ್ ಟೈಲರಿಂಗ್, ಪೌರ ಕಾರ್ಮಿಕಾಸ್ ಕಂಡೀಷನ್, ಇಂಪ್ರೋವ್ ಮೆಂಟ್ ತರಗ ಕಾರ್ಯಕ್ರಮಗಳು ಬಹಳ ಮಹತ್ತರವಾದವುಗಳು, ಸಮಾಜದ ಒಟ್ಟಿಗೆ ಸುಖವಾಗಿ ಏನ್ನೊಂದು ಕಾರ್ಯಕ್ರಮಗಳಿವೆ ಅವುಗಳನ್ನು ಅರಿತುಕೊಂಡು ತಿಳಿದು ಕೆಲಸಮಾಡತಕ್ಕವರು ಆ ಕೆಲಸವನ್ನು ಯಾರು ಮಾಡುತ್ತಿದ್ದಾರೆ ? ಆ ಕೆಲಸವನ್ನು ಮಾಡಲಿಕ್ಕೆ ಸಮಾಜ ಕಲ್ಯಾಣ ಇಲಾಖೆ ಈ ಇಲಾಖೆಗೆ ಕೊಟ್ಟಿರತಕ್ಕ ಹಣದಲ್ಲಿ ಸುಮಾರು ನಾಲ್ಕುವರೆ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ. ಸರ್ಕಾರಕ್ಕೆ ಹೇಗೆ ಸರಂಡರ್ ಮಾಡಿದ್ದಾರೆ? ಏತಕ್ಕೆ ಮಾಡಿದ್ದಾರೆ ಇಂತಹವರ ಇವರ ಸೇವೆ ಇರತಕ್ಕದ್ದು ಸರಿಯೇ? ತಪ್ಪೇ? ಅದನ್ನು ಯೋಚನೆ ಮಾಡಬೇಕು. ನನ್ನ ಅನುಭವದಲ್ಲಿ ಹೇಳುವುದಾದರೆ ಯಾರು ಸಮರ್ಥರಿದ್ದಾರೆ ಯಾರಿಗೆ ಈ ಸಮಾಜದ ಬಗ್ಗೆ ಬಡವರ ಬಗ್ಗೆ

ಸೇವೆ ಮಾಡುವ ಮನಸ್ಸು ಇದೆ. ಹೃದಯವಿದೆ, ಯಾರಿಗೆ ದೇಶ ಭಕ್ತಿ ಇದೆ. ಅಂತಹವರನ್ನು ನೇಮಕ ಮಾಡದ ಹೊರತು ಬೇರೆಯರಿಂದ ಕೆಲಸ ಆಗುವುದಿಲ್ಲ, ಯಾರೋ ಅಧಿಕಾರಿಗಳನ್ನು ನೇಮಿಸಿ, ಅವರಿಂದ ನಿರ್ವಹಣೆ ಮಾಡುವುದು, ಬಡ್ಜೆಟ್ ಬಂತು ಅವತ್ತಿನ ರಿಪೋರ್ಟ್ ಕೊಡುವುದು ಏನೋ ಒಂದು ಹೇಳುತ್ತಾರೆ, ಮೆಜಾರಿಟಿ ಇದೆಯೆಂದು ಸರ್ಕಾರ ನಡೆಸಿಕೊಂಡು ಹೋಗುವುದು ಮುಖ್ಯವಲ್ಲ. ಯಾವುದೇ ಪಾರ್ಟಿಯ ವಿಷಯವು ಅಲ್ಲ ಸಮಾಜ ನಿರ್ಮಾಣ ಮಾಡಲಿಕ್ಕೆ ಸಮಾಜಕ್ಕೆ ತಿರುವು ಕೊಡತಕ್ಕಂತಹ ಜವಾಬ್ದಾರಿ ಮನುಷ್ಯರನ್ನು ನೇಮಿಸಬೇಕೆಂದು ತಮಗೆ ಹೇಳುತ್ತಿದ್ದೇನೆ. ಮಹಿಳೆಯರ ಬಗ್ಗೆ ಮಹತ್ತರವಾದ ಕಾರ್ಯಗಳು ಇವೆ ಶ್ರೀಮತಿ ನಾಗರತ್ನಮ್ಮನವರು ಹೇಳಿದ ಹಾಗೆ ಸ್ತ್ರೀಯರು ಶೇಕಡ 53ರಷ್ಟು ಇದ್ದಾರೆ. ಶೇಕಡ 53ರಷ್ಟು ಇದ್ದರು ಅವರು ಶತಮಾನಗಳಿಂದ ಹೇಗೆ ನಡೆದುಕೊಂಡು ಬಂದಿದ್ದರು ಇವತ್ತು ಸಹ ಅದೇ ರೀತಿ ನಡೆದುಕೊಂಡು ಬರುತ್ತಿದ್ದಾರೆ ಅದರಂತೆ ಬಂದಿದೆ ಈ ಆಧುನಿಕ ಪ್ರಪಂಚದಲ್ಲಿ ಅವರವರ ಸ್ಥಾನ–ಮಾನಗಳನ್ನು ತಿಳಿದುಕೊಂಡು ಕೆಲಸಗಳನ್ನು ಮಾಡಬೇಕು, ಹೆಣ್ಣು ಮಕ್ಕಳು ಗಂಡಸರ ಗುಲಾಮರಾಗಿದ್ದಾರೆ. ಹಲವಾರು ರೀತಿಯಲ್ಲಿ ಗುಲಾಮಳಾಗಿದ್ದಾಳೆ. ಅವರಿಗೆ ಸ್ವಾತಂತ್ರ್ಯ ಬರಬೇಕಾದರೆ ಬರಿಯ ಒಂದು ಉದಾಹರಣೆ ಹೇಳುತ್ತೇನೆ. ಅದನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲ. ನಮ್ಮ ಹಿಂದಿನ ಇನ್‌ಹೆರಿಟೆಂಟ್ ಲಾ ಏನು ಇದೆ ಅದನ್ನು ಬದಲಾವಣೆ ಮಾಡಬೇಕು. ಹೆಣ್ಣು ಮಕ್ಕಳಿಗೂ ತಂದೆತಾಯಿಗಳ ಆಸ್ತಿಯಲ್ಲಿ ಸಮಾನ ಆಸ್ತಿಯ ಹಕ್ಕನ್ನು ಎಲ್ಲಿಯವರೆಗೆ ಕೊಡುವುದಿಲ್ಲವೋ ಅಲ್ಲಿಯವರೆಗೆ ಇವರ ಸಮಸ್ಯೆಯನ್ನು ಬಗೆಹರಿಸುವುದಕ್ಕಾಗುವುದಿಲ್ಲ. ಇಲ್ಲದಿದ್ದರೆ ಅವರು ದೌರಿಯ ಒತ್ತಡಕ್ಕೆಸಿಕ್ಕಿ ಕೊಲೆಯಾಗಬೇಕು. ನರಳಬೇಕು. ಇಲ್ಲದಿದ್ದರೆ ಅತಂತ್ರದ ಸ್ವಾತಂತ್ರ್ಯವನ್ನು ಗುಲಾಮಳಾಗಿ ಜೀವನ ಮಾಡತಕ್ಕಂಥ ಉದಾಹರಣೆಗಳು ನಮ್ಮ ಎದುರಿಗೇ ಇವೆ. ಆದ್ದರಿಂದ ನಾನು ಸ್ಪಷ್ಟವಾಗಿ ಈ ಸದನದಲ್ಲಿ ಹೇಳುತ್ತಿದ್ದೇನೆ. ನಾನು ಬಹಿರಂಗವಾಗಿಯೂ ಹೇಳಿದ್ದೇನೆ. ಹೆಣ್ಣು ಮಕ್ಕಳಿಗೂ ಸರಿಸಮಾನವಾದ ಆಸ್ತಿಯ ಹಕ್ಕು ಅವರ ತಂದೆತಾಯಿಗಳ ಆಸ್ತಿಯಲ್ಲಿರಬೇಕೆಂದು ಸ್ಪಷ್ಟವಾಗಿ ಹೇಳುತ್ತಿದ್ದೇನೆ.

ನಂತರ ಐ.ಸಿ.ಡಿ.ಎಸ್. ಪ್ರೋಗ್ರಾಂ ಅಂತ ಒಂದು ಇದೆ. ಹೋದಸಾರಿ ಈ ಐ.ಸಿ.ಡಿ.ಎಸ್. ಪ್ರೋಗ್ರಾಂ ಬಗ್ಗೆ ಶ್ರೀಮಾನ್ ನಾಯಕ್‌ರವರು

ಮಾತನಾಡಿದ್ದರು. ನಾನು ಅದರ ಬಗ್ಗೆ ಮಾತನಾಡುವಾಗ ದಾರಿ ತಪ್ಪಿಸಿ ಮಾತನಾಡುವುದಕ್ಕೆ ಹೋಗುವುದೇ ಇಲ್ಲ. ಈ ಒಂದು ನಮೂನೆ ಬಹಳ ಪ್ರಾಮುಖ್ಯವಾದುದು. ಇದರಲ್ಲಿ Immunisation, health check-up, rural services, suppliementary nutrition, non-formal pre-education, housing mothers, pregnant women and literacy programme for children between 14 and 45 years group income gerneration schemes for women. ಅಂಗನವಾಡಿ ಎಂಬುದಾಗಿ ಯೋಜನೆಗಳು ಇವೆ. ಈ ಯೋಜನೆಗಳೇನು ಎಂಬುದನ್ನು ತಿಳಿದು ಕೊಳ್ಳುವುದಕ್ಕಾಗಿ ಕೇಂದ್ರ ಸರ್ಕಾರದಿಂದ ಮಾಹಿತಿಯನ್ನು ತರಿಸಿಕೊಂಡಿದ್ದೇನೆ. ಎಲ್ಲವೂ ಕೇಂದ್ರ ಸರ್ಕಾರದ ಯೋಜನೆಗಳು. ಈ ಯೋಜನೆಗಳ ರೂಪುರೇಷೆಗಳೇನು ಎಂಬುದರ ಮಾಹಿತಿಯನ್ನು ನಾನು ನೋಡಬೇಕಾದರೆ ಕೇಂದ್ರ ಸರ್ಕಾರದಿಂದ ತರಿಸಿಕೊಂಡು ನೋಡಬೇಕೇ ವಿನಃ ರಾಜ್ಯ ಸರ್ಕಾರದಲ್ಲಿ ಈ ಯೋಜನೆಗಳ ಮಾಹಿತಿಯನ್ನು ನಾನು ನೋಡಲಿಕ್ಕೇ ಆಗಿಲ್ಲ. ಇಂತಹ ಯೋಜನೆಗಳನ್ನು ಇಲ್ಲಿ ಜಾರಿಗೆ ಕೊಡಬೇಕಾದರೆ ಈ ಅಧಿಕಾರಿಗಳಿಗೆ ಗೊತ್ತಿರಬೇಕು. ಅಧಿಕಾರಿಗಳು ಯೋಜನೆಗಳನ್ನು ಜಾರಿಗೆ ಕೊಡಬೇಕಾಗಿದ್ದರೆ. ಅವರಿಗೆ ಇವುಗಳು ಅರ್ಥವಾಗಿರಬೇಕು. ಈ ಒಂದು ಯೋಜನೆಗಳಿಗೆ ಹಣವನ್ನು ಒದಗಿಸಿಕೊಂಡು ಕೆಲಸ ಮಾಡುವಂತಹ ಪ್ರವೃತ್ತಿಯನ್ನು ಅವರು ಬೆಳೆಸಿಕೊಂಡು ಬರಬೇಕು. ಅದರಂತೆ ಕೆಲಸ ಮಾಡುವ ಹಾಗೆ ಕಾಣುತ್ತಿಲ್ಲ. ಈ ರಾಜ್ಯದಲ್ಲಿ ಈ ಇಲಾಖೆಯು ಸಮರ್ಪಕವಾಗಿ ಕೆಲಸ ಮಾಡುತ್ತಾ ಇದೆ. ಮತ್ತೆ ಅವರಿಗೆ ಯಾವುದೇ ಡೈರೆಕ್ಷನ್, ನಿರ್ದೇಶನ ಇಲ್ಲದೆ ಅವರು ತಾವೇ ಕೆಲಸ ಮಾಡುತ್ತಿದ್ದಾರೆ. They are working without any selection from the provisions of the schemes and all the intentions at are embeded in these schemes. ಇದನ್ನು ನಾನು ಹೇಳುತ್ತಿದ್ದೇನೆ. ಇದರ ಕಡೆಗೆ ತಾವು ಗಮನ ಕೊಡಬೇಕು. ಇದನ್ನು ಅಷ್ಟೊಂದು ಹಗುರವಾಗಿ ಬಿಡಬಾರದು ಎಂಬುದಾಗಿ ನಾನು ಹೇಳುತ್ತಿದ್ದೇನೆ.

ಇನ್ನು ಕಾರ್ಮಿಕ ಇಲಾಖೆಯ ಬಗ್ಗೆ ಹೇಳುವುದಾದರೆ, ಎಲ್ಲ ವಿಚಾರಗಳನ್ನು ಶ್ರೀಮಾನ್ ರಾಚಯ್ಯರವರು ಈಗಾಗಲೇ ಹೇಳಿದ್ದಾರೆ. ನಾನು ಒಂದೇ ಒಂದು ವಿಚಾರವನ್ನು ಹೇಳುತ್ತೇನೆ. ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಣಿ ಮಾಡಿಸಿರತಕ್ಕಂತಹ ಅಭ್ಯರ್ಥಿಗಳ ಸಂಖ್ಯೆ ಎಷ್ಟು ಎಂದರೆ 10,25,354. ಇದರಲ್ಲಿ ಎಸ್.ಸಿ. ಯವರ ಸಂಖ್ಯೆ 1,04,688. ಅದರಲ್ಲಿ ಹೆಣ್ಣು

ಮಕ್ಕಳ ಸಂಖ್ಯೆ ಎಷ್ಟು ಇದೆ ಎಂದರೆ, 1,77,352. ಇವರಲ್ಲಿ ಉದ್ಯೋಗ ಎಷ್ಟು ಜನರಿಗೆ ಸಿಕ್ಕಿದೆ ಎಂಬುದು ಗೊತ್ತಾಗಬೇಕಲ್ಲ. ಇವರಲ್ಲಿ ಗಂಡಸರಿಗೆ 8611 ಜನರಿಗೆ ಮಾತ್ರ ಕೆಲಸ ಸಿಕ್ಕದೆ ಹೆಣ್ಣು ಮಕ್ಕಳಲ್ಲಿ ಎಷ್ಟು ಜನರಿಗೆ ಕೆಲಸ ಸಿಕ್ಕಿದೆ ಎಂಬುದರ ವಿವರ ಗೊತ್ತಿಲ್ಲ.

**ಶ್ರೀ ಡಿ. ಮಂಜುನಾಥ್:**– ನಾವು ಏನು ವರದಿಯಲ್ಲಿ ಅಂಕಿ ಸಂಖ್ಯೆಗಳನ್ನು ಕೊಟ್ಟಿದ್ದೇವೆ. ಅದನ್ನು ಸ್ವಲ್ಪ ಸರಿಪಡಿಸಿಕೊಳ್ಳಬೇಕು. ನಾವು ಏನು ಅಂಕಿ ಅಂಶಗಳನ್ನು ಕೊಟ್ಟಿದ್ದೇವೆ. ಅದು ನಮ್ಮ ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿಕೊಂಡಿರುತಕ್ಕಂಥದ್ದು. ಇವರಲ್ಲಿ ಅನೇಕ ಜನರಿಗೆ ಕೆಲಸ ಸಿಕ್ಕಿದೆ. ಹೇಗೆಂದರೆ, ಕರ್ನಾಟಕ ಲೋಕ ಸೇವಾ ಆಯೋಗದಿಂದ ಕೆಲವರಿಗೆ ಕೆಲಸ ಸಿಕ್ಕುತ್ತದೆ. ಅಲ್ಲಿ ಆಯ್ಕೆಯಾದ ಮೇಲೆ ಉದ್ಯೋಗ ವಿನಿಮಯ ಕೇಂದ್ರಕ್ಕೆ ಅವರು ಬರೆಯುವುದೇ ಇಲ್ಲ. ಇದು ಒಂದು. ಇನ್ನು ನಮ್ಮ ಅನೇಕ ನೇಮಕಾತಿ ಸಮಿತಿಗಳೂ ಕೂಡ ಇವೆ ಕಳೆದ ವರ್ಷ 18,000 ಜನ ಟೀಚರ್ಸ್‌ಗಳನ್ನು ರಿಕ್ರೂಟ್ ಮಾಡಿದ್ದೇವೆ. ಅಲ್ಲಿ ಆಯ್ಕೆಯಾದ ಮೇಲೆ ಉದ್ಯೋಗ ವಿನಿಮಯ ಕೇಂದ್ರಕ್ಕೆ ಬರೆಯುವುದೇ ಇಲ್ಲ. ನಮ್ಮಲ್ಲಿರತಕ್ಕ ಅಂಕಿ ಅಂಶಗಳು ಹಾಗೆ ಉಳಿಯುತ್ತವೆ. ಇದಕ್ಕಾಗಿ ಈಗ ಬೇರೆ ವ್ಯವಸ್ಥೆಯನ್ನು ಮಾಡುತ್ತಿದ್ದೇವೆ.

**ಶ್ರೀ ಬಿ. ಬಸವಲಿಂಗಪ್ಪ:**– ಮಾನ್ಯ ಮಂತ್ರಿಗಳು ಏನು ಹೇಳುತ್ತಿದ್ದಾರೆ ಅದರ ಕಡೆ ನಾನು ಗಮನ ಕೊಡುವುದಕ್ಕೇ ಹೋಗುವುದಿಲ್ಲ. ಕಾರಣವೇನೆಂದರೆ. ಎಷ್ಟು ಜನರಿಗೆ ಕೆಲಸ ಸಿಕ್ಕಿದೆ ಎಂಬುದರ ವರದಿ ಯನ್ನಾದರೂ ತಾವು ಕೊಡಬೇಕಲ್ಲ. ಅದರ ಬಗ್ಗೆ ಮಾಹಿತಿಯೇ ಇಲ್ಲ. ನೀವೇ ಒದಗಿಸಿರತಕ್ಕಂಥ ಅಂಕಿ ಅಂಶಗಳು ಏನು ಇವೆ, ಅವುಗಳನ್ನು ನೋಡಿಯೇ ನಾನು ಮಾತನಾಡುತ್ತಿದ್ದೇನೆ. ಏನಾದರೂ ನ್ಯೂನತೆಗಳು ಇದ್ದರೆ, ನಂತರ ಹೇಳಲಿ ಅವರು.

**ಶ್ರೀ ಡಿ.ಮಂಜುನಾಥ:**– ಆನಂತರ ಉತ್ತರದಲ್ಲಿ ಎಲ್ಲವನ್ನೂ ಹೇಳುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ:**– ನಮ್ಮಲ್ಲಿ 11497 ಕಾರ್ಖಾನೆಗಳು ಇವೆ. ಆ ಕಾರ್ಖಾನೆಗಳಲ್ಲಿ ಆಗಿರತಕ್ಕ ಅಪಘಾತಗಳು 10,088. ಅವರಿಗೆ ತಕ್ಷಣವೇ ಪರಿಹಾರವನ್ನು ನೀವು ಕೊಡಬೇಕಾಗುತ್ತದೆ. ಎಷ್ಟು ಜನರಿಗೆ ಕೊಟ್ಟಿದ್ದೀರಿ? ಎಷ್ಟು ಜನರಿಗೆ ಕೊಟ್ಟಿಲ್ಲ ಎಂಬುದನ್ನು ನೀವು ವರದಿಯಲ್ಲಿ ಹೇಳಿಲ್ಲ. ಅದನ್ನು ತಾವು

ದಯಮಾಡಿ ಹೇಳಬೇಕು ನಂತರ ಲೇಬರ್ ಡಿಸ್‌ಪ್ಯೂಟ್ಸ್ ಎಷ್ಟು ಇವೆ ಎಂದರೆ 31–12–81 ರವರೆಗೆ 5.610 ಲೇಬರ್ ಡಿಸ್‌ಪ್ಯೂಟ್ಸ್ ಇದರಲ್ಲಿ ಕೋರ್ಟಿಗೆ ರೆಫರ್ ಮಾಡಿರತಕ್ಕಂಥದ್ದು 4,791. ಡಿಸ್‌ಪೋಸ್ ಆಗಿರತಕ್ಕ ಕೇಸುಗಳು ಎಷ್ಟು ಎಂದರೆ, 1,261. ಇಷ್ಟೊಂದು ಪೆಂಡಿಗ್ಸ್ ಇಟ್ಟುಕೊಂಡು ಯಾವ ಕಾರ್ಖಾನೆಯನ್ನು ಸಮಧಾನವಾಗಿ ನಡೆಸುವುದಕ್ಕಾಗುತ್ತದೆ ಎಂಬುದನ್ನು ತಾವೇ ಹೇಳಿ, ಯಾವ ರೀತಿ ಲೇಬರ್ ಮುವ್‌ಮೆಂಟ್ ಬೆಳೆಯುತ್ತದೆ? ಡಿಸ್‌ಪ್ಯೂಟ್ಸ್ ಹಾಗೆ ಉಳಿದಿವೆ. ಇದರಿಂದಾಗಿ ಈ ಇಲಾಖೆ ಸಮರ್ಪಕವಾಗಿ ಕೆಲಸ ಮಾಡುತ್ತಿಲ್ಲವೆಂದು ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ರೂರಲ್ ಲೇಬರ್ಸ್ ಅವರು ಇದ್ದಾರೆ. ಅವರಿಗೆ ಕನಿಷ್ಟ ವೇತನ ಕಾಯಿದೆ ಪ್ರಕಾರ ಅವರಿಗೆ ಒಂದು ದಿವಸಕ್ಕೆ 10 ರೂ.ಗಳ ಕನಿಷ್ಠ ವೇತನವನ್ನು ಕೊಡಬೇಕಾಗಿದೆ. ಅದನ್ನು ಇವತ್ತಿನವರೆಗೂ ಯಾರಿಗೂ ಕೊಟ್ಟಿಲ್ಲ ಅನಾಥರಾಗಿದ್ದಾರೆ. I am talking of orgnised labour. ಆದರೆ ಅನ್‌ಆರ್ಗನೈಜ್ಡ್ ಲೇಬರ್ಸ್ ಬಗ್ಗೆ ಹೇಳುವುದಕ್ಕೇ ಆಗುವುದಿಲ್ಲ. ಅವರೂ ಕೂಡ ಇತರರಂತೆ ಗೌರವವಾಗಿ ಬದುಕುವುದಕ್ಕೆ ಅವಕಾಶ ಮಾಡಿಕೊಡಬೇಕಾದುದು ಸರ್ಕಾರದ ಜವಾಬ್ದಾರಿ. ರಾಜ್ಯಾಂಗದಲ್ಲೇ ಲಿವಿಂಗ್ ವೇಜಸ್ ಕೊಡಬೇಕು ಅಂತ ಇದೆ. ಅವರು ಗೌರವದಿಂದ, ಮರ್ಯಾದೆಯಿಂದ ಜೀವನ ಮಾಡುವುದಕ್ಕೆ, ಅವರ ಮಕ್ಕಳು–ಮರಿಗಳನ್ನು ಇಟ್ಟುಕೊಂಡು ಜೀವನ ಮಾಡುವುದಕ್ಕೆ ಒಂದು ವ್ಯವಸ್ಥೆ ಆಗಬೇಕು ಎಂದು ರಾಜ್ಯಾಂಗದಲ್ಲಿದೆ. ತಾವು ಅದರ ಕಡೆ ಗಮನ ಕೊಡಬೇಕು. ಅದರ ಕಡೆ ತಮ್ಮ ಮುಂದಿನ ಹೆಜ್ಜೆಯನ್ನು ಹಾಕಬೇಕು.

ನಂತರ ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡಗಳು ಎಂಬುದಾಗಿ ಇವೆ. ಟ್ರೈಬಲ್ ಜನ ಅಂತ ಇದ್ದಾರೆ. 1981ರ ಜನಗಣತಿಯ ಪ್ರಕಾರ 55,95,100 ಅನುಸೂಚಿತ ಜಾತಿ ಜನಗಳು ಇದ್ದಾರೆ. ಅದೇ ರೀತಿ ಅನುಸೂಚಿತ ಪಂಗಡಗಳು ಅಂದರೆ ಗುಡ್ಡಗಾಡು ಜನರು 18,25.00 ಜನರು ಇದ್ದಾರೆ. ಅಷ್ಟು ಗುಡ್ಡಗಳೇ ನಮ್ಮಲ್ಲಿ ಇಲ್ಲ. ಅದಕ್ಕಿಂತ ಇವರು ಜಾಸ್ತಿ ಯಾಗಿದ್ದಾರೆ. ಇದಕ್ಕೆ ಕಾರಣವೇನೆಂದರೆ, ಯಾರ‍್ಯಾರು ಕುರುಬ ಅಂತ ಇದ್ದಾರೆ, ಅವರೆಲ್ಲರೂ ದುರಾದೃಷ್ಟವಶಾತ್ ಅನುಸೂಚಿತ ಪಂಗಡವಾಗಿಬಿಟ್ಟಿದ್ದಾರೆ. ನಾನು ಯಾವ ಜಾತಿವಿರೋಧಿಯಲ್ಲ. ಯಾವ ಮತಕ್ಕೂ ವಿರೋಧಿಯಲ್ಲ. ಯಾವ ಜನಾಂಗಕ್ಕೂ ನಾನು ವಿರೋಧಿಯಲ್ಲ ಆದರೆ ಸಮಾನಾಂತರ ಸಮಾಜದ ಅಡಿಗಲ್ಲಿನಲ್ಲಿ ಸಮಾದಿಯಾಗಬೇಕು ಎಂಬ ಮೂಲ ಉದ್ದೇಶವನ್ನು ಇಟ್ಟು ಕೊಂಡು

ಹೋರಾಡತಕ್ಕಂಥ ಮನುಷ್ಯ ನಾನು. ಯಾವ ಸಮಾಜದಲ್ಲಿ ನಿರ್ಗತಿಕರಿದ್ದಾರೆ, ಅನಾಥರಿದ್ದಾರೆ, ದಿಕ್ಕಿಲ್ಲದವರಿದ್ದಾರೆ. ಅವರು ಜೀವನ ಮಾಡುವುದಕ್ಕೆ ಮಾರ್ಗ ಇಲ್ಲ, ಆಸ್ತಿ ಇಲ್ಲ, ಅಂತಹವರಿಗೆ ಸರಿಯಾದ ವ್ಯವಸ್ಥೆಯಾಗಬೇಕು. ಅವರಿಗೆ ಸರಿಯಾದ ಜೀವನ ಮಾರ್ಗವನ್ನು ಕೊಡಬೇಕೆಂಬುದು ನನ್ನ ಇಚ್ಛೆ. ಅದು ರಾಜ್ಯಾಂಗದ ಇಚ್ಛೆ. ಅದು ಎಲ್ಲರ ಇಚ್ಛೆ. ಅದರೆ ಅದು ಏನಾಗಿದೆ ಎಂದರೆ, ಯಾರ್‍ಯಾರು ಕಾಡಿನಲ್ಲಿ ಇದ್ದುಕೊಂಡು ಜೀವನ ಮಾಡುತ್ತಿದ್ದಾರೆ, ಅವರೆಲ್ಲ ನಾವು ಕಾಡು ಕುರುಬರೆಂದು ನೋಂದಣಿ ಮಾಡಿಸಿಕೊಳ್ಳುತ್ತಿದ್ದಾರೆ. ನಂತರ ಎಸ್.ಟಿ. ಪಟ್ಟಿಯಲ್ಲಿ ನಾಯಕರು ಅಂತ ಹೇಳಿ ಸಿನಾನಿಮ್ಸ್ ಇದೆ. ಅದರಂತೆ ನಾವೂ ನಾಯಕ ಅಂತ ಹೇಳಿಕೊಂಡು ಅವರೆಲ್ಲರೂ ಎಸ್.ಟಿ. ಅಂತ ನೋಂದಣಿ ಮಾಡಿಸಿಕೊಳ್ಳುತ್ತಿದ್ದಾರೆ. ಇದರಿಂದಾಗಿ 2 ಲಕ್ಷ ಇದ್ದಂತಹ ಜನಸಂಖ್ಯೆ ಇವತ್ತು 18.25,000ಕ್ಕೆ ಹೋಗಿದೆ. ಇದರಲ್ಲಿ –A.I.R.1980 S.C. 1950 Dadas alias Deena Vs Sukhdev Babu and others ಸುಪ್ರೀಂ ಕೋರ್ಟಿನ ಜಡ್ಜ್‌ಮೆಂಟ್‌ನಲ್ಲಿ ಈ ರೀತಿಯಾಗಿ ಹೇಳಿದ್ದಾರೆ. ಅದರಲ್ಲಿ ಒಂದೆರಡು ವಾಕ್ಯಗಳನ್ನು ಮಾತ್ರ ನಾನು ಹೇಳುತ್ತೇನೆ ಅಲ್ಲಿ ಕೂಡ ಅಂತ ಒಂದು ಕಮ್ಯುನಿಟಿ. ಅದರಲ್ಲಿ 40 ಸಿನಾನಿಮ್ಸ್ ಇವೆ. ಅದೇ ಜಾತಿಯ ಹೆಸರಿನಲ್ಲಿ 40 ಉಪ ಜಾತಿಗಳಿವೆ. ಮೊದಲನೇ ಹೆಸರು ಗೊಂಡಾ. ಅದರಲ್ಲಿ ಮೊನಾ ಅಂತ ಹೆಸರೊಂದು ಇದೆ. ಮೊನಾ ಎಂಬ ಜಾತಿಗೆ ಸೇರಿದಂತಹ ಒಬ್ಬ ಮನುಷ್ಯ ನಾನೂ ಕೂಡ ಎಸ್.ಟಿ. ಅಂತ ಹೇಳಿ ಅದರ ಬಗ್ಗೆ ಸುಪ್ರೀಂ ಕೋರ್ಟಿನಲ್ಲಿ ಕಂಟೆಸ್ಟ್ ಮಾಡಿದ್ದಾನೆ. ಅವನು ಎಸ್.ಟಿ. ಆಗಿದ್ದರೆ, ಅದರ ಒಂದು ಪಟ್ಟಿ ಇದೆ. ಅದರಲ್ಲಿ 1,2,3,ಎಂಬುದಾಗಿ ಹೇಳಿದ್ದಾರೆ. ಅದರ ಪಟ್ಟಿಯಲ್ಲಿ ನಿರ್ಧಿಷ್ಟವಾದ ಜಾತಿ ಸೇರಿರಬೇಕಾಗುತ್ತದೆ.

ಸುಪ್ರೀಂ ಕೋರ್ಟ್‌ನಲ್ಲಿ ಅವರು ಷೆಡ್ಯೂಲ್ಡ್ ಟ್ರೈಬ್ ಅಲ್ಲವೆಂದು ನಿರ್ಣಯ ಕೊಟ್ಟಿದ್ದಾರೆ. ಆದ್ದರಿಂದ ನಾನು ಇಲ್ಲಿ ಅಂಥ ಒಂದು ವ್ಯವಸ್ಥೆ ಆಗಬಾರದು, ಅನ್ಯಾಯವಾಗಬಾರದು, ಸಂವಿಧಾನದ ಪ್ರಕಾರ ಹೋಗಿ ಎಂದು ಹೇಳುತ್ತೇನೆ. ಸಂವಿಧಾನವನ್ನು ಬದಲಾವಣೆ ಮಾಡದೆ ಸೇರಿಸಬೇಡಿ, ಬದಲಾವಣೆ ಮಾಡಿ ಬೇಕಾದರೆ ಸೇರಿಸಿಕೊಳ್ಳಿ, ಕುರುಬರಾಗಲಿ, ಹಿಂದುಳಿದವರಾಗಲಿ, ಪರಿಶಿಷ್ಟ ಜಾತಿಯವರಾಗಲಿ ಅವರು ಒಪ್ಪಿದರೆ ಸೇರಿಸಿಕೊಳ್ಳಿ. ಅವರು ಸೇರುವವರೆಗೆ ಸರ್ಕಾರ ಹಿಂದೆ ಇದ್ದು ಪ್ರೋತ್ಸಾಹ ಮಾಡತಕ್ಕದ್ದು ಮೋಸದ ಕೆಲಸ. ಯಾರೇ ಆಗಲಿ ಹಿನ್ನೆಲೆಯಾಗಿ ಇದ್ದರೂ ಅದು ತಪ್ಪು. ಮಾನ್ಯ ಹೆಗಡೆಯವರು, ಮಾನ್ಯ

ವಿ.ಎಲ್.ಪಾಟೀಲರು ಮೊನ್ನೆ ಒಂದು ಸರ್ಕಾರಿ ಆಜ್ಞೆಯನ್ನು ಮಾಡಿದ್ದಾರೆ. ಕುರುಬ ಕಮ್ಯುನಿಟಿ ಮತ್ತು ನಾಯಕ್ ಕಮ್ಯುನಿಟಿ ಷೆಡ್ಯೂಲ್ಡ್ ಟ್ರೈಬ್ ಅಲ್ಲವೆ ಎಂಬುದನ್ನು ನಿರ್ಧರಿಸುವುದಕ್ಕೆ ಒಂದು ಕಮಿಟಿ ಮಾಡಲು ಸರ್ಕಾರಿ ಆಜ್ಞೆ ಮಾಡಿದ್ದಾರೆ. ಇದು ಸಂವಿಧಾನಕ್ಕೆ ವಿರೋಧ. ಯಾರ್‍ಯಾರು ಷೆಡ್ಯೂಲ್ಡ್ ಟ್ರೈಬ್ಸ್ ಇದ್ದಾರೆ ಅವರಿಗೂ ಇದರಿಂದ ಕಷ್ಟ. ನಾವು ನೀವು ಷೆಡ್ಯೂಲ್ಡ್ ಟ್ರೈಬ್ಸ್ ಎಂದು ಹೇಳುವುದಕ್ಕೆ ಒಂದು ಕಮಿಟಿ ಮಾಡತಕ್ಕದ್ದು ಸರಿಯಲ್ಲ. ಇದು ರಾಜ್ಯಾಂಗಕ್ಕೆ ವಿರೋಧ.

**ಶ್ರೀ ವಿ.ಎಲ್. ಪಾಟೀಲ್**:- ನಮಗೆ ತೊಂದರೆಯಾಗುತ್ತದೆಂದು ನಾಯಕ ಮತ್ತು ಬೇಡರ ಒಂದು ನಿಯೋಗ ಬಂದಿತು. ಅದರಲ್ಲಿ ಎಲ್ಲಾ ಸಮಾಜದವರು ಇದ್ದಾರೆ. ಬೇಡ, ತಳವಾರ, ನಾಯಕರು, ಕುರುಬರು, ಕಾಡು ಕುರುಬರು, ಮಾಲೆಯರು ಇವರನ್ನೊಳಗೊಂಡು ನಿಯೋಗ ಬಂದಾಗ ಈ ತರಹ ಬಸವಲಿಂಗಪ್ಪನವರು ವಿರೋಧಿಸುತ್ತಿದ್ದಾರೆಂದು ಹೇಳಿದೆ. ಬಸವಲಿಂಗಪ್ಪನವರು ಚುನಾವಣೆಗೆ ಮುಂಚೆ ತನಗೆ ಓಟು ಕೊಡಬೇಕೆಂದು ಅವರಿಗೆ ಸಹಾಯ ಮಾಡಿದ್ದರು, ಈಗ ಹೇಗೆ ವಿರೋಧ ಮಾಡುತ್ತಾರೆಂದು ಪ್ರಶ್ನೆ ಕೇಳಿದ್ದರು. ಆದ್ದರಿಂದ ನಾನು ಅವರಿಗೆ ಕೇಳುತ್ತೇನೆ, ಚುನಾವಣೆಗೆ ಮುಂಚೆ ಹಾಗೆ ಹೇಳುತ್ತಿದ್ದವರು ಈಗ ಏಕೆ ಹೀಗೆ ಎಂದು.

**ಶ್ರೀ ಬಿ.ಬಸವಲಿಂಗಪ್ಪ**:- ಮಂತ್ರಿಗಳಿಗೆ ನಾನು ಉತ್ತರ ಕೊಡತಕ್ಕ ಅಗತ್ಯ ಇಲ್ಲ. ಏಕೆಂದರೆ ಇದು ಮೂಢತನದ ವಾದ, ಓಟಿಗೋಸ್ಕರ ಸೇರಿಸಿಕೊಳ್ಳಿ ಎಂದು ಹೇಳುವುದಕ್ಕೆ ನಾನು ಯಾರು? ಈ ಕೆಲಸವನ್ನು ಪಾರ್ಲಿಮೆಂಟ್ ಮಾಡಬೇಕು.

**ಶ್ರೀ ವಿ.ಎಲ್. ಪಾಟೀಲ್**:- ತಾವು ಹೇಳಿದ್ದೀರೋ ಇಲ್ಲವೋ ಎಂದು ಕೇಳುತ್ತಿದ್ದೇನೆ.

**ಶ್ರೀ ಬಿ.ಬಸವಲಿಂಗಪ**:- ಅದು ತಪ್ಪು, ಸುಳ್ಳು, ಮೋಸದ ಮಾತು. It is totaly wrong. I will read one or two sentences in the last paragraph of the supreme court judgment.

"The Maana community included in entry No.18 can only be that which has affinity with Gondas and any other

communities which also bears the name Maana, but does not have any such affinity cannot be deemed to fall within the scope of Maana in entry No.18."

ಇದರ ಅರ್ಥ ಏನಾಯಿತು.? ಇಲ್ಲಿ ಏನಾಗಿದೆ ಇದೇ ರೀತಿಯಲ್ಲಿ ತಪ್ಪು ತಿಳುವಳಿಕೆಯಿಂದ ಸರ್ಕಾರದವರು ಹುಕುಂ ಮಾಡತಕ್ಕದ್ದು ರಾಜ್ಯಾಂಗಕ್ಕೆ ವಿರುದ್ಧವಾದದ್ದು. ಅದನ್ನು ವಾಪಸ್ಸು ತೆಗೆದುಕೊಳ್ಳಿ ಎಂದು ಹೇಳುತ್ತೇನೆ. ವಾಪಸ್ಸು ತೆಗೆದುಕೊಳ್ಳದಿದ್ದರೆ ಕೋರ್ಟಿಗೆ ಹೋಗೇ ಹೋಗುತ್ತೇನೆ, ಸರಿಯಾದ ಪಾಠ ಕಲಿಸತಕ್ಕ ವ್ಯವಸ್ಥೆ ಮಾಡುತ್ತೇನೆ. ಇನ್ನು ನಾಗರೀಕ ಹಕ್ಕುಗಳ ಸಂರಕ್ಷಣಾ ಘಟಕ ಎಂದು ಇದೆ, ಇದನ್ನು ಏತಕ್ಕೆ ಮಾಡಬೇಕಾಗಿತ್ತು ಎಂದು ಅರ್ಥವಾಗಲಿಲ್ಲ. ಇದರಿಂದ ಅಪರಾಧಿಗಳ ಸಂಖ್ಯೆ ಜಾಸ್ತಿಯಾಗುತ್ತಿದೆ. ಕ್ರಿಮಿನಲ್ ಪ್ರೊಸೀಜರ್ ಕೋಡಿನಲ್ಲಿ ಅದನ್ನು ಸೇರಿಸಲಿಕ್ಕೆ ಆಗುವುದಿಲ್ಲ. ಸುಳ್ಳು ಪತ್ರಗಳನ್ನು ಪಡೆದುಕೊಂಡು ಕೆಲಸಕ್ಕೆ ಸೇರುವವರ ಸಂಖ್ಯೆ ಬಹಳ ಇದೆ. ಅಂಥವರಿಗೆ ರಕ್ಷಣೆ ಕೊಡತಕ್ಕದ್ದು ಸಂಪೂರ್ಣವಾಗಿ ರಾಜ್ಯಾಂಗಕ್ಕೆ ವಿರುದ್ಧವಾದದ್ದು. ನೀವು ಸಿವಿಲ್ ರೈಟ್ ಶೆಲ್ ಎಂದು ಇಟ್ಟುಕೊಂಡರೆ ಅದಕ್ಕೆ ಪೂರ್ಣ ಅಧಿಕಾರ ಕೊಡಬೇಕು. ಅವರು ದಾರಿ ತಪ್ಪಿ, ಕಾನೂನಿಗೆ ವಿರೋಧವಾಗಿ ಮಾಡಿದರೆ ಶೆಲ್ಲನ್ನು ತೆಗೆದು ಹಾಕಿ, ನಿಮ್ಮ ಮಟ್ಟಿಗೆ ನೀವು ಕೆಲಸ ಮಾಡಿಕೊಳ್ಳಿ. ಟ್ರೈಬಲ್ ವೆಲ್‌ಫೇರ್, ಟ್ರೈಬಲ್ ಏರಿಯ ಪ್ಲಾನ್ ಇದು ರಾಜ್ಯಾಂಗದತ್ತವಾಗಿರತಕ್ಕದ್ದು. ಅವರಿಗೆ ಸರ್ಕಾರದಿಂದ ಕೊಡತಕ್ಕದ್ದು ಅಲ್ಲ. ಎಲ್ಲೆಲ್ಲಿ ಟ್ರೈಬಲ್ ಏರಿಯ ಮಾಡಿಕೊಂಡಿದ್ದಾರೆ ಬಡವರು ಇದ್ದಾರೆ. ಅವರಿಗೆ ಕೇಂದ್ರ ಸರ್ಕಾರದವರು ಏನು ಕೊಡುತ್ತಾರೆ ಅದು ನೇರವಾಗಿ ಸಿಕ್ಕಿಲ್ಲವೆಂದು ಆರೋಪ ಇದೆ. ಹಣ ಸಿಗುತ್ತದೆಂದು ಹತ್ತು ವರ್ಷದಿಂದ ಪ್ರಯತ್ನ ಮಾಡುತ್ತಿದ್ದರು ಅವರ ಉದ್ಧಾರ ಏನಾಗಿದೆ? ಎಲ್ಲೆಲ್ಲಿ ಟ್ರೈಬಲ್ ಏರಿಯ ಇದೆ ಅಲ್ಲಿ ಮಾನ್ಯತೆ ಸಿಕ್ಕಿಲ್ಲ ಮುಂದೆ ಬರುವುದಕ್ಕೆ ಆಗಿಲ್ಲ. ಆದ್ದರಿಂದ ಸಮರ್ಪಕವಾಗಿ ಕೆಲಸ ಮಾಡಬೇಕೆಂದು ಹೇಳುತ್ತೇನೆ. ಷೆಡ್ಯೂಲ್ಡ್ ಕ್ಯಾಸ್ಟ್‌ನವರ ಬಗ್ಗೆ ಸರಿಯಾಗಿ ನಡೆಯುತ್ತಿಲ್ಲವೆಂದು ಹೇಳಿದ್ದಾರೆ. ಅವರಿಗೆ ಒಂದು ಮಾತು ಹೇಳಬೇಕಾಗಿದೆ. ಪ್ರೀ ಯೂನಿವರ್ಸಿಟಿ ವಿದ್ಯಾರ್ಥಿಗಳಿಗೆ ಷೆಡ್ಯೂಲ್ಡ್ ಕ್ಯಾಸ್ಟ್ ಹಾಸ್ಟಲ್ ಕಟ್ಟಿಸಿಕೊಡುತ್ತೇವೆಂದು ಹೇಳಿದ್ದಾರೆ. ಅಂಥದಕ್ಕೆ ಶಹಭಾಷ್‌ಗಿರಿ ಕೊಡುತ್ತೇನೆ. ಅನುಸೂಚಿತ ಜಾತಿ ಯವರಿಗೆ ಕೇಂದ್ರ ಸರ್ಕಾರದಿಂದ 100 ಪರ್ಸೆಂಟ್ ಗ್ರಾಂಟ್ ಬರುತ್ತದೆ. ಅದನ್ನು ಕೊಡುತ್ತಿರುವುದರಿಂದ ನಡೆಯುತ್ತಿದೆ. ಎಲ್ಲಾ ಇಲಾಖೆಗಳಲ್ಲೂ

ಈ ಒಂದು ಕಾಂಪೋನೆಂಟ್ ಪ್ಲಾನನ್ನು ಅಳವಡಿಸಬೇಕೆಂದು ಹೇಳುತ್ತೇನೆ. ಪ್ರತಿ ಇಲಾಖೆಯಿಂದ ಜನಗಳಿಗೆ ಹಳ್ಳಿಗಾಡು ಪ್ರದೇಶಗಳಲ್ಲಿ ಅನುವು ಮಾಡಿಕೊಡಬೇಕೆಂಬುದನ್ನು ಅರಿತು ಕೊಂಡು ಕಾರ್ಯಕ್ರಮ ಹಾಕಿಕೊಳ್ಳಲು ಆದೇಶ ಕೊಡಬೇಕೆಂದು ಹೇಳುತ್ತೇನೆ. ಮಾಡುತ್ತೇವೆ. ಇಲ್ಲ ಎಂಬ ಪ್ರಶ್ನೆ ಇಲ್ಲ. ಮಾಡಲೇಬೇಕೆಂದು ಒತ್ತಾಯಿಸುತ್ತೇನೆ ಈಗ ಇನ್ನೊಂದು ಕಾಂಪೋನೆಂಟ್ ಪ್ಲಾನ್ ಮಾಡುತ್ತಿದ್ದಾರೆ, ಅದು ಕಾರ್ಯಗತವಾಗಲ್ಲ. ಅದಕ್ಕೆ ನೇರವಾಗಿ ಮಾನ್ಯತೆ ಸಿಕ್ಕಿಲ್ಲ. 1983–84ರಲ್ಲಿ ಹಿಂದುಳಿದವರ ಸಲುವಾಗಿ ವೆಂಕಟಸ್ವಾಮಿಯವರ ಅಧ್ಯಕ್ಷತೆಯಲ್ಲಿ ಒಂದು ಆಯೋಗವನ್ನು ರಚಿಸಿದ್ದಾರೆ. ಅವರು ನಿವೃತ್ತ ಅಧಿಕಾರಿಗಳಾಗಿದ್ದಾರೆ, ಅವರನ್ನು ಅಧ್ಯಕ್ಷರನ್ನಾಗಿ ಮಾಡಿ ಆರ್ಥಿಕ ವ್ಯವಸ್ಥೆ ಸಾಮಾಜಿಕ ವ್ಯವಸ್ಥೆ ಬಗ್ಗೆ ಸಲಹೆ ಕೊಡಿ ಎಂದರೂ ಇದುವರೆಗೆ ಅವರುಕೊಟ್ಟಿಲ್ಲ. ಹೋದ ವರ್ಷ ಅಕ್ಟೋಬರ್‌ನಲ್ಲೇ ಮುಖ್ಯ ಮಂತ್ರಿಗಳು ರಿಪೋರ್ಟ್ ಕೊಡುತ್ತಾರೆಂದು ಹೇಳುತ್ತಿದ್ದರು. ಇದುವರೆಗೆ ಬಂದಿಲ್ಲ. ಹೋದ ವರ್ಷ ಅವರಿಗೋಸ್ಕರ 50 ಲಕ್ಷ ರೂಪಾಯಿಗಳನ್ನು ಇಟ್ಟಿದ್ದರು. ಈ ವರ್ಷ ಮೂರು ಕಾಸೂ ಇಟ್ಟಿಲ್ಲ. ಅದನ್ನು ನೋಡಿ ನನಗೆ ಸಂತೋಷವಾಯಿತು. ಹಿಂದುಳಿದವರ ಬಗ್ಗೆ ಯಾವ ಉದ್ದೇಶದಿಂದ ಶಿಫಾರಸ್ಸು ಮಾಡಬೇಕೆಂದು ಮಾಡಿದ್ದರು. ಇವತ್ತಿನವರೆಗೆ ಆ ಶಿಫಾರಸ್ಸುಗಳನ್ನು ಮಾಡದಿದ್ದರೆ ಹಿಂದುಳಿದವರಿಗೆ ಹೇಗೆ ಅನುಕೂಲಗಳನ್ನು ಕಲ್ಪಿಸಿಕೊಡುವುದಕ್ಕಾಗುತ್ತದೆ? ಏನು ಕಾರ್ಯಕ್ರಮ ಹಾಕಿಕೊಳ್ಳುವುದಕಾಗುತ್ತದೆ? ಆದ್ದರಿಂದ ಅತಿ ಜಾಗ್ರತೆಯಾಗಿ ಅವರ ಶಿಫಾರಸ್ಸುಗಳನ್ನು ತೆಗೆದುಕೊಂಡು ಜಾರಿಗೆ ಕೊಡುವುದಕ್ಕೆ ಪ್ರಯತ್ನ ಮಾಡಬೇಕೆಂದು ಹೇಳುತ್ತೇನೆ. ಈ ಇಲಾಖೆಯನ್ನು ತಾವೇ ಇಟ್ಟುಕೊಳ್ಳಬೇಕೆಂದು ಹೆಗಡೆಯವರಿಗೆ ಹೇಳುತ್ತೇನೆ. ದೇವೇಗೌಡರ ಇಲಾಖೆಯನ್ನು ಈಗಿರತಕ್ಕ ಸಮಾಜ ಕಲ್ಯಾಣ ಇಲಾಖೆಯ ಮಂತ್ರಿಗಳಿಗೆ ಕೊಡಬೇಕು, ಇಲ್ಲದಿದ್ದರೆ ರಾಚಯ್ಯನವರ ಇಲಾಖೆಯನ್ನು ಇವರಿಗೆ ಕೊಡಬೇಕು. ಏಕೆಂದರೆ ಅವರು ಸಮರ್ಥರು ಇದ್ದಾರೆ. ಈ ಸಮಾಜ ಕಲ್ಯಾಣ ಇಲಾಖೆ ಮಾತ್ರ ಅವರಿಗೆ ಬೇಡವೇ ಬೇಡ ಎಂದು ಬಡವರ ಪರವಾಗಿ ಕೇಳಿಕೊಳ್ಳುತ್ತೇನೆ.

**ಶ್ರೀ ಹೆಚ್.ಡಿ. ದೇವೇಗೌಡ:–** ಬಸವಲಿಂಗಪ್ಪ ನವರನ್ನು ಕಳೆದ 25 ವರ್ಷಗಳಿಂದ ನೋಡಿದ್ದೇನೆ. ದುರ್ದೈವ ಏನೆಂದರೆ ಅವರು ಮಂತ್ರಿಯಾಗಿದ್ದಾಗ ಸಮಾಜ ಕಲ್ಯಾಣ ಇಲಾಖೆಯ ಖಾತೆಯನ್ನು ಕೊಡಿ ಎಂದು ಯಾವ ಮುಖ್ಯ ಮಂತ್ರಿಗಳೂ ಕೇಳಿಲಿಲ್ಲ.

**ಶ್ರೀ ಎಂ. ವೀರಪ್ಪಮೊಯ್ಲಿ:–** ಯಾರೂ ಕೇಳದೆ ಇರತಕ್ಕ ಇಲಾಖೆಯನ್ನು ವಿ.ಎಲ್. ಪಾಟೀಲರಿಗೆ ಕೊಟ್ಟಿದ್ದಾರೆ.

**ಶ್ರೀ ಹೆಚ್.ಡಿ. ದೇವೇಗೌಡ:–** ಸಮರ್ಪಣ ಮನೋಭಾವನೆಯಿಂದ ಕೆಲಸ ಮಾಡಬೇಕೆಂದು ಹೇಳಿದರಲ್ಲ. ಅವರಿಗೆ ಎಷ್ಟರ ಮಟ್ಟಿಗೆ ಸಮರ್ಪಣ ಮನೋಭಾವನೆ ಇತ್ತು ಎಂದು ಕೇಳುತ್ತೇನೆ.

**ಶ್ರೀ ಬಿ. ಬಸವಲಿಂಗಪ್ಪ:–** ನನ್ನ ಭಾವನೆಗಳು, ನನ್ನ ಆಸಕ್ತಿ, ನನ್ನ ಧ್ಯೇಯ ಧೋರಣೆಗಳು ದೇವೇಗೌಡರಿಗೆ ಗೊತ್ತು.

**ಶ್ರೀ ಹೆಚ್.ಡಿ. ದೇವೇಗೌಡ:–** ನೀವು ಏತಕ್ಕೆ ಆ ಖಾತೆಯನ್ನು ತೆಗೆದುಕೊಳ್ಳಲಿಲ್ಲ?

**ಶ್ರೀ ಬಿ. ಬಸವಲಿಂಗಪ್ಪ:–** ಬೇರೆ ಸೇವೆ ಮಾಡಬೇಕಾಗಿತ್ತು. ಇಷ್ಟು ಹೇಳಿ ನನಗೆ ಮಾತನಾಡಲು ಅವಕಾಶವನ್ನು ಕೊಟ್ಟ ಅಧ್ಯಕ್ಷರಿಗೆ ವಂದಿಸಿ ತನ್ನ ಮಾತನ್ನು ಮುಗಿಸುತ್ತೇನೆ.

## ಭಾಗ – III

## ಸಂತಾಪ ಸೂಚಕ ನಿರ್ಣಯಗಳು

**ಕರ್ನಾಟಕ ವಿಧಾನ ಸಭೆ**
**ಸೋಮವಾರ 28ನೇ ಡಿಸೆಂಬರ್ 1992**
**ಸದನವು ವಿಧಾನ ಸೌಧದಲ್ಲಿರುವ ವಿಧಾನ ಸಭೆಯ ಸಭಾಂಗಣದಲ್ಲಿ ಬೆಳಿಗ್ಗೆ 11.10 ಗಂಟೆಗೆ ಸಮಾವೇಶಗೊಂಡಿತು.**

**ಉಪಾಧ್ಯಕ್ಷರು ಶ್ರೀ ನಾಗಮ್ಮ ಸಿ. ಕೇಶವಮೂರ್ತಿ ಅವರು ಪೀಠವನ್ನು ಅಲಂಕರಿಸಿದ್ದರು.**

**ಉಪಾಧ್ಯಕ್ಷಿಣಿಯವರು:–** ಹಿರಿಯ ರಾಜಕಾರಿಣಿ. ಸಂಸದೀಯ ಪಟು, ಪ್ರಸಕ್ತ ವಿಧಾನಸಭೆಯ ಸದಸ್ಯರು ಹಾಗೂ ಮಾಜಿ ಮಂತ್ರಿಗಳೂ ಆದ ಶ್ರೀ ಬಿ. ಬಸವಲಿಂಗಪ್ಪನವರು ದಿನಾಂಕ 27.12.92ರಂದು ಶಿವೈಕ್ಯರಾದರು.

ಮಾನ್ಯರು 1957 ರಿಂದ 1962, 1972 ರಿಂದ/ 1973 1978–82,/ 1985–89 ಹಾಗೂ 1989–92ರ ಅವಧಿಗಳಲ್ಲಿ ವಿಧಾನಸಭೆಗೆ ಯಲಹಂಕ ಕ್ಷೇತ್ರವನ್ನು ಪ್ರತಿನಿಧಿಸಿ, ಗೃಹ, ಕಂದಾಯ, ಗ್ರಾಮೀಣಾಭಿವೃದ್ಧಿ, ಪಂಚಾಯತ್ ರಾಜ್ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರಾಗಿ ಸೇವೆ ಸಲ್ಲಿಸಿರುವುದರ ಜೊತೆಗೆ ಬೆಂಗಳೂರು ನಗರಸಭಾ ಸದಸ್ಯರಾಗಿ, ಪೀಪಲ್ಸ್ ಎಜುಕೇಷನ್ ಸೊಸೈಟಿಯ ಆಡಳಿತ ಮಂಡಳಿಯ ಸ್ಥಾಪಕರು ಹಾಗೂ ಸದಸ್ಯರಾಗಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರಿಗೆ ಮೀಸಲಾತಿ ಸೌಲಭ್ಯ ಸಿಗಲು ಕಾರಣಕರ್ತರಾಗಿದ್ದರು ಭೂ ಸುಧಾರಣಾ ವರದಿ ಮತ್ತು ಭೂ ಸುಧಾರಣಾ ಶಾಸನದ ಲೇಖಕರುಗಳಲೊಬ್ಬರಾಗಿ, ದೀನದಲಿತರು ಹಾಗೂ ಶೋಷಿತ ವರ್ಗದ ಪುರೋಭಿವೃದ್ಧಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದರು. ಶ್ರೀಯುತರು ಜೀತದಾಳುಗಳಿಗೆ ಪುನರ್ ವಸತಿ ಕಲ್ಪಿಸುವ ಹಾಗೂ ಉದ್ಯೋಗ ಖ್ಯಾತಿಗಾಗಿ ಕೃಷಿ ವಿಧೇಯಕದ ಎಸ್ಟೇಟುಗಳ ಸ್ಥಾಪಕರಾಗಿ ಸಮಾಜದ ಅನಿಷ್ಟಗಳಲೊಂದಾದ ಮಲ ಹೊರುವ ಪದ್ಧತಿಯ ನಿರ್ಮೂಲನಾ ಕಾಯಿದೆಯ ಮೂಲ ಕಾರಣಪುರುಷರಾಗಿ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದ ಕೀರ್ತಿ ಶ್ರೀಯುತರಾಗಿರುತ್ತದೆ.

ಶ್ರೀ ಎಂ. ವೀರಪ್ಪ ಮೊಯಿಲಿ (ಮುಖ್ಯಮಂತ್ರಿಗಳು):- ಸನ್ಮಾನ್ಯ ಉಪಾಧ್ಯಕ್ಷಣಿಯವರೇ, ಸನ್ಮಾನ್ಯ ಹಿರಿಯ ನಾಯಕರು, ದೀನದಲಿತರ ಬಂಧುಗಳಾದಂತಹ ಈ ದಶಕದ ಒಬ್ಬ ಕ್ರಾಂತಿಪುರುಷರಾದ ಸನ್ಮಾನ್ಯ ಬಸವಲಿಂಗಪ್ಪನವರ ಆಕಸ್ಮಿಕ ಮರಣ ಈ ರಾಜ್ಯವನ್ನು ಹಾಗೂ ನಮ್ಮೆಲ್ಲರನ್ನೂ ದಿಗ್ಭ್ರಮೆಗೊಳಿಸಿದೆಲ್ಲೆ. ಸನ್ಮಾನ್ಯ ಬಸವಲಿಂಗಪ್ಪನವರು ಈ ದಿವಸ ನಮ್ಮ ಮಧ್ಯೆ ಇರಬೇಕಾಗಿತ್ತು. ಆದರೆ ಎರಡು ದಿವಸಗಳ ಹಿಂದೆ ಅವರು ನಮ್ಮಿಂದ ಕಣ್ಮರೆಯಾಗಿದ್ದಾರೆ. ಇಷ್ಟು ಬೇಗ ಈ ರಾಜ್ಯದ ಒಬ್ಬ ಕ್ರಿಯಾಶೀಲ, ಪ್ರಯೋಗಶೀಲ, ಸಮಾಜಚಿಂತಕ, ಕ್ರಾಂತಿಮಯ ಮನೋಭೂಮಿಕೆ ಇರುವ ಒಬ್ಬ ವ್ಯಕ್ತಿಯನ್ನು ವಿಧಿ ಕಸಿದುಕೊಳ್ಳುತ್ತದೆಂಬುದನ್ನು ನಮ್ಮ ಕನಸಿನಲ್ಲಿಯೂ ಕೂಡ ನೆನೆಸಿಕೊಳ್ಳದೇ ಇರತಕ್ಕ ಒಂದು ವಿಚಾರವಾಗಿದೆ. ಶ್ರೀ ಬಸವಲಿಂಗಪ್ಪನವರು ಈ ರಾಜ್ಯದ ಮತ್ತು ಈ ರಾಷ್ಟ್ರದ ಜನರಿಗೆ ಹೊಸಬರಲ್ಲ. ಅವರು ತಮ್ಮ ರಾಜಕೀಯ ದಿಕ್ಕಿನುದ್ದಕ್ಕೂ ವರ್ಣಮಯವಾದ ವ್ಯಕ್ತಿತ್ವದ ಜೊತೆಯಲ್ಲಿ ಸೈದ್ಧಾಂತಿಕವಾಗಿ ಮತ್ತು ತಾನು ಇಟ್ಟುಕೊಂಡ ಒಳ್ಳೆಯ ಕಾರ್ಯಕ್ರಮಗಳ ಬಾಬ್ತು ಏನಿದೆ ಅವುಗಳ ಮೇಲೆ ಪರಮ ವಿಶ್ವಾಸ ಹೊಂದಿ ಹೋರಾಟ ಮಾಡಿಕೊಂಡು ಬಂದಿರುವವರು. ಕರ್ನಾಟಕ ಏಕೀಕರಣ ಸಮಿತಿಯ ಸನ್ಮಾನ್ಯ ಪ್ರಧಾನ ಕಾರ್ಯದರ್ಶಿಯಾಗಿಯೂ ಕೂಡ ಅವರು ಈ ಕನ್ನಡ ನಾಡಿನ ಭಾವೈಕ್ಯತೆಗಾಗಿ, ಕನ್ನಡ ನಾಡು ಒಂದಾಗಬೇಕೆಂದು ಹೋರಾಟದ ಮುಂಚೂಣಿಯಲ್ಲಿದ್ದ ಒಬ್ಬ ವ್ಯಕ್ತಿ: ಕನ್ನಡನಾಡು ನುಡಿ ಅವರಿಗೆ ಯಾವಾಗಲೂ ಧನ್ಯವಾಗುತ್ತದೆ. ಬಸವಲಿಂಗಪ್ಪನವರ ಜೀವನ ಕನ್ನಡ ನಾಡಿನಲ್ಲಿ ಚಿರಸ್ಮರಣೆ ಎಂದು ನಾನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ. ಸನ್ಮಾನ್ಯ ಬಸವಲಿಂಗಪ್ಪನವರು ತಮ್ಮ ರಾಜಕೀಯ, ಸಾಮಾಜಿಕ ಕ್ಷೇತ್ರದಲ್ಲಿ ತಮ್ಮದೇ ಆದ ವೈಶಿಷ್ಟ್ಯಪೂರ್ಣ, ಸ್ವಂತಿಕೆಯ ವ್ಯಕ್ತಿತ್ವದ ಮೆರಗು, ಅವರು ರಾಜಕೀಯ ಆಕಾಶದಲ್ಲಿ ಮಿನುಗಿ ಜ್ವಲಿಸಿ ಇವತ್ತು ಅಸ್ತಂಗತರಾದರೂ ಕೂಡ ಅವರು ಹಾಕಿದ ಪ್ರಯೋಗಾತ್ಮಕವಾದ ಮತ್ತು ಕ್ರಿಯಾತ್ಮಕವಾದ ಸುಧಾರಣೆಗಳು, ಚಿಂತನೆಗಳು ನಮ್ಮ ಕಣ್ಣು ಮುಂದೆ ಬಂದು ಯಾವಾಗಲೂ ಬಂದು ನಿಲ್ಲುತ್ತವೆ.

ದಿವಂಗತ ದೇವರಾಜ ಅರಸ್‌ರವರು ಮುಖ್ಯಮಂತ್ರಿಗಳಾಗಿದ್ದಂತಹ ಸಂದರ್ಭದಲ್ಲಿ ಅವರು ಮಂತ್ರಿಗಳಾಗಿದ್ದಾಗ, ಪುರಸಭಾ ಆಡಳಿತ ಮಂತ್ರಿಗಳಾಗಿದ್ದರು. ಆಗ ಇಡೀ ರಾಷ್ಟ್ರದ ಗಮನವನ್ನು ಸೆಳೆಯುವಂತಹ ಒಂದು ಕ್ರಾಂತಿಕಾರಿಯ ಯೋಜನೆಯನ್ನು ಮುಂದಿಟ್ಟಿದ್ದರು. ಈಗ ಆ ವಿಚಾರವಾಗಿ

ಮಾತನಾಡುವಾಗ ಬಹಳ ಸುಲಭವಾಗಿ ಜನ ಸ್ವೀಕಾರ ಮಾಡುತ್ತಾರೆ. ಆದರೆ ಮಲವನ್ನು ತಲೆಯ ಮೇಲೆ ಹೊರತಕ್ಕ ಒಂದು ನೀಚ ಪದ್ಧತಿಯನ್ನು ನಿಷೇಧ ಮಾಡಲಿಕ್ಕೆ ಅವರು ಮುಂದೆ ಬಂದಾಗ ಅಷ್ಟು ಸುಲಭವಾಗಿ ಜನರು ಅದನ್ನು ಸ್ವೀಕಾರ ಮಾಡಲಿಕ್ಕೆ ಮುಂದೆ ಬಂದರು ಎಂದು ಹೇಳುವುದಕ್ಕಾಗುವುದಿಲ್ಲ ಅಂತಹ ಒಂದು ಪ್ರಯೋಗವನ್ನು ಮಾಡಿ ಅದರ ಅನುಷ್ಠಾನವನ್ನು ನಿಷ್ಠೂರವಾಗಿ ಜಾರಿಗೆ ತಂದರು. ಜನಗಳಲ್ಲಿ ಇಂತಹ ಒಂದು ಕ್ರಾಂತಿಕಾರಿಕೆಯ ಮನೋಭೂಮಿಕೆಯ ಒಂದು ಬೀಜವನ್ನು ನೆಟ್ಟು ಆ ಕ್ರಾಂತಿಕಾರಿಯ ಮನೋಭೂಮಿಕೆಯ ಒಂದು ದೊಡ್ಡ ವೃಕ್ಷವಾಗಿ ಇವತ್ತು ಕರ್ನಾಟಕ ರಾಜ್ಯದಲ್ಲಿ ನಿಲ್ಲತಕ್ಕ ಒಂದು ದೊಡ್ಡ ಸಾಧನೆಯನ್ನು ಮಾನ್ಯ ಬಸವಲಿಂಗಪ್ಪನವರು ಮಾಡಿದರು. ದೇವರಾಜ್ ಅರಸ್‌ರವರು ಮುಖ್ಯಮಂತ್ರಿಗಳಾಗಿದ್ದಂತಹ ಸಂದರ್ಭದಲ್ಲಿ ಅಸಂಖ್ಯಾತ ಬಡವರಿಗೆ ದೊಡ್ಡ ಸಂಖ್ಯೆಯಲ್ಲಿ ನಿವೇಶನವನ್ನು ಕೊಡತಕ್ಕ ಒಂದು ಕಾರ್ಯಕ್ರಮವಿತ್ತು. ಆ ಕಾರ್ಯಕ್ರಮನ್ನು ಕೂಡಾ ಅವರು ಮಂತ್ರಿಗಳಾಗಿ ಮುತುವರ್ಜಿವಹಿಸಿ ಅವರು ಅಧಿಕಾರದಲ್ಲಿದ್ದಂತಹ ಸಂದರ್ಭದಲ್ಲಿ, ಸುಮಾರು 2 ಲಕ್ಷದ 50 ಸಾವಿರ ನಿವೇಶನಗಳನ್ನು ಹಂಚಿದರು ಅಷ್ಟು ಮಾತ್ರವಲ್ಲ, ಸುಮಾರು 3 ಲಕ್ಷ 25 ಸಾವಿರ ನಿವೇಶನಗಳನ್ನು ವಿಶೇಷವಾಗಿ ರಚಿಸಿ, ಬಡಜನರಿಗೆ, ದೀನದಲಿತರಿಗೆ ನಿವೇಶನ ಕೊಡತಕ್ಕ ಒಂದು ಸೂರು ಒದಗಿಸತಕ್ಕ ಒಂದು ಕ್ರಾಂತಿಕಾರಿ ಕೆಲಸವನ್ನು ಮಾಡಿದರು ಅಂದರೆ ಅದು ಖಂಡಿತವಾಗಿಯೂ ಅತಿಶಯೋಕ್ತಿಯಾಗಲಿಕ್ಕಿಲ್ಲ. ವಿಶೇಷವಾಗಿ ಕ್ರಾಂತಿಯ ಕಹಳೆಯನ್ನು ಆ ಸಂದರ್ಭದಲ್ಲಿ ನೀಡಿದ್ದನ್ನು ನಾವು ಮರೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಅವರು ಅಧಿಕಾರದಲ್ಲಿದ್ದಾಗ ಸೋಷಿಯಲ್ ರೆಸ್ಪಾನ್ಸಿಬಲ್ ಲೆವಿ ಕಲೆಕ್ಟ್ ಮಾಡಲಿಕ್ಕೆ ಕರ್ನಾಟಕ ರಾಜ್ಯದ ಎಲ್ಲಾ ಟ್ರಸ್ಟ್ ಬೋರ್ಡ್‌ಗಳಿಗೆ ಅವಕಾಶ ಕೊಟ್ಟು ಆ ಹಣವನ್ನು ದಲಿತರಿಗೆ ಮತ್ತು ನಿವೇಶನ ರಹಿತರಿಗೆ ಉಪಯೋಗ ಮಾಡಬೇಕೆಂದು ಒಂದು ವಿಶೇಷ ಕಾರ್ಯಕ್ರಮವನ್ನು ಅವರು ಮಾಡಿದ್ದರು. ಅಷ್ಟು ಮಾತ್ರವಲ್ಲದೆ ಡಾ. ಅಂಬೇಡ್ಕರ್‌ರವರು ಯಾವ ರೀತಿಯಲ್ಲಿ ರಾಷ್ಟ್ರದಲ್ಲಿನ ದಲಿತರಿಗೆ ಮತ್ತು ಶೋಷಿತ ವರ್ಗದವರಿಗೆ ಅವರು ಶತಮಾನಗಳಿಂದ ನೆಲಕ್ಕೆ ಕಚ್ಚಿಕೊಂಡು ಚೇತರಿಸಿಕೊಳ್ಳಲಿಕ್ಕೆ ಆಗದಿರತಕ್ಕ ಪರಿಸ್ಥಿತಿಯಲ್ಲಿದ್ದ ಸಂದರ್ಭದಲ್ಲಿ ಸಂವಿಧಾನದ ಮೂಲಕ ಯಾವರೀತಿ ಅವರಿಗೆ ಧ್ವನಿಯನ್ನು ಕೊಟ್ಟರು ಅದೇ ರೀತಿಯಲ್ಲಿ ಕರ್ನಾಟಕ ರಾಜ್ಯದಲ್ಲಿನ ದಲಿತರಿಗೆ ಬಸವಲಿಂಗಪ್ಪನವರು ಇದ್ದರು.

ಮಾನ್ಯ ಬಸವಲಿಂಗಪ್ಪನವರನ್ನು ನಾವು ಕಳೆದುಕೊಂಡಿದ್ದೇವೆ. ಅವರ ಕ್ರಾಂತಿಯ ಜ್ಯೋತಿ ಮಾತ್ರ ಎಂದೂ ಕೂಡ ಆರಿಲ್ಲ. ಅದು ಮುಂದೆಯೂ ಕೂಡಾ ಅವರ ಕ್ರಾಂತಿಯ ಜ್ಯೋತಿ ಬಡವರ ಮನದಲ್ಲಿದೆ. ಆ ದೊಡ್ಡ ಧ್ವನಿ ಯಾವಾಗಲೂ ಅಡಗಿ ಹೋಗದೆ. ಆ ಧ್ವನಿ ಮತ್ತಷ್ಟು ಸಮಾಜದ ಗರ್ಭದಲ್ಲಿ ಅಳಿಯದೆ ಉಳಿಯುವಂತಹ ಸಂಕಲ್ಪವನ್ನು ಮಾಡುವುದು ಮಾನ್ಯ ಬಸವಲಿಂಗಪ್ಪನವರಿಗೆ ಅರ್ಪಿಸುವಂತಹ ಶ್ರದ್ಧಾಂಜಲಿ. ಈ ಸದನದ ಜೊತೆಯಲ್ಲಿ ಬಸವಲಿಂಗಪ್ಪನವರ ಆತ್ಮಕ್ಕೆ ಶಾಂತಿಯನ್ನು ಕೋರುವಂತಹ ನಿರ್ಣಯಕ್ಕೆ ತಮ್ಮ ಜೊತೆಯಲ್ಲಿ ನಾವು ಧ್ವನಿಗೂಡಿಸಿ, ಅನುಮೋದನೆಯನ್ನು ಕೊಡಲಿಕ್ಕೆ ಅಪೇಕ್ಷೆ ಪಡುತ್ತೇನೆ. ಈ ಸದನ ಮತ್ತು ಕರ್ನಾಟಕ ರಾಜ್ಯದ ಜನತೆ ಸದಾ ಅವರ ಚಿರಸ್ಮರಣೆ ಮಾಡುತ್ತದೆ. ಬಸವಲಿಂಗಪ್ಪನವರ ಸೇವೆಯನ್ನು ನಾವು ಜ್ಞಾಪಿಸಿಕೊಳ್ಳುತ್ತೇವೆಂದು ಹೇಳಿ, ಅವರ ಕುಟುಂಬಕ್ಕೆ ಮಾತ್ರವಲ್ಲ ಅಸಂಖ್ಯಾತ ಕರ್ನಾಟಕ ರಾಜ್ಯದ ಬಡ ಸಮಾಜಕ್ಕೆ ಅವರ ಆಕಸ್ಮಿಕ ನಿಧನದಿಂದ ಚೇತರಿಸಿಕೊಳ್ಳುವ ಶಕ್ತಿ ಬರಲಿಯೆಂದು ಹೇಳಿ ನಾವು ನಿಮ್ಮ ಜೊತೆಯಲ್ಲಿ ಒಂದುಗೂಡುತ್ತೇವೆಂದು ಹೇಳಿ, ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಆರ್.ವಿ. ದೇಶಪಾಂಡೆ (ವಿರೋಧಪಕ್ಷದ ನಾಯಕರು):–** ಮಾನ್ಯ ಅಧ್ಯಕ್ಷಣಿಯವರೇ, ಇವತ್ತು ಬಸವಲಿಂಗಪ್ಪನವರು ನಮ್ಮಲ್ಲಿ ಇಲ್ಲ, ಅವರು ನಮ್ಮನ್ನು ಬಿಟ್ಟುಹೋಗಿದ್ದಾರೆ ಎನ್ನುವ ವಿಶ್ವಾಸ ಇಡಲಿಕ್ಕೂ ಕೂಡ ಸಾಧ್ಯವಿಲ್ಲ. ಕೇವಲ ಒಂದು ವಾರದ ಹಿಂದೆ ನಾನು ಅವರನ್ನು ಭೇಟಿಯಾದಾಗ ಅವರ ಆರೋಗ್ಯ, ವಿಚಾರ ಮಾಡಿ ನೋಡಿದಾಗ ಇಷ್ಟು ಬೇಗನೆ ಅವರು ನಮ್ಮನ್ನು ಬಿಟ್ಟುಹೋಗುತ್ತಾರೆ ಎಂದು ನಾನು ಅಂದುಕೊಂಡು ಬರಲಿಲ್ಲ. ಅವರ ನಿಧನದಿಂದ ಈ ಸದನ ಬಹಳ ಬಡವಾಗಿದೆ. ಒಬ್ಬ ಹೋರಾಟಗಾರರು, ಒಳ್ಳೆಯ ಆಡಳಿತಗಾರರು ಆಗಿದ್ದ ಅವರು ನಲವತ್ಮೂರು ವರ್ಷಗಳ ಕಾಲ, 1949ನೇ ಇಸವಿಯಲ್ಲಿ ಕಾಂಗ್ರೆಸ್ ಪಕ್ಷ ಸೇರಿದ ನಂತರ ಮಂತ್ರಿಯಾಗಿ ಬೇರೆಬೇರೆ ಸಂಘಸಂಸ್ಥೆಗಳ ಅಧ್ಯಕ್ಷರಾಗಿ ಅಪಾರ ಸೇವೆ ಸಲ್ಲಿಸಿದ್ದಾರೆ, ಅದರಲ್ಲೂ ರಾಜಕೀಯ ರಂಗದಲ್ಲಿ., ಸಾಮಾಜಿಕ ರಂಗದಲ್ಲಿ, ಶೈಕ್ಷಣಿಕ ರಂಗದಲ್ಲಿ ಅವರು ಮಾಡಿದ ಸೇವೆಯನ್ನು ನಾವು ಸ್ಮರಿಸಬೇಕಾಗಿದೆ, ಅವರು ದಲಿತರ ಮುಖಂಡರು ನಿಜ, ಆದರೆ ಈ ರಾಜ್ಯದಲ್ಲಿನ ಕಡುಬಡವರು, ಹಿಂದುಳಿದ ಜನಾಂಗ ಪರಿಶಿಷ್ಟ ಜಾತಿ ಜನಾಂಗದ ಬಗ್ಗೆ ಏನು ಹೋರಾಟ ಮಾಡಿದ್ದಾರೆ, ಅದು ಈ ರಾಜ್ಯದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಬೇಕಾಗುತ್ತದೆ.

ಅವರು ಮಾಡಿದ ಸೇವೆಯನ್ನು ನಾವು ಯಾರೂ ಮರೆಯಲಿಕ್ಕೆ ಸಾಧ್ಯವಿಲ್ಲ. ಈ ರಾಜ್ಯದಲ್ಲಿ ಭೂ ಸುಧಾರಣೆ ಕಾಯಿದೆಯನ್ನು ಜಾರಿಗೆ ತರುವಲ್ಲಿ ಅವರ ಪಾತ್ರ ಬಹಳ ಮಹತ್ವದಾಗಿದೆ. ಅದೇ ಪ್ರಕಾರವಾಗಿ ಮಾನ್ಯ ಮುಖ್ಯಮಂತ್ರಿಗಳು ಹೇಳಿದ ಹಾಗೆ ಈ ನಿವೇಶನ ಹಂಚುವ ವಿಚಾರದಲ್ಲಿ ನನಗೆ ಜ್ಞಾಪಕ ಇದೆ, ಅವರು ನಗರಾಭಿವೃದ್ಧಿ ಸಚಿವರಾಗಿದ್ದಾಗ ನನ್ನ ಊರು ಹಳಿಯಾಳಕ್ಕೆ ಬಂದಿದ್ದರು. ಆ ಸಮಯದಲ್ಲಿ ಅಲ್ಲಿಯ ಕೆಲವು ಪರಿಶಿಷ್ಟ ಜಾತಿ, ಜನಾಂಗದ ಜನರು ನಿವೇಶನ ಬೇಕು ಎಂದು ಅರ್ಜಿ ಸಲ್ಲಿಸಿದ್ದರು. ಒಂದು–ಒಂದೂವರೆ ವರ್ಷದಿಂದ ಸರ್ಕಾರದಿಂದ ಆಜ್ಞೆ ಬಂದಿರಲಿಲ್ಲ. ಆ ಸಮಯದಲ್ಲಿ ಪರಿಶಿಷ್ಟ ಜನಾಂಗದವರು ಅವರನ್ನು ಹೋಗಿ ಭೇಟಿಯಾಗಿ ಮನವಿ ಕೊಟ್ಟಾಗ ಅವರು ತಕ್ಷಣ ಸ್ಥಳಕ್ಕೆ ಹೋಗಿ ಅಧಿಕಾರಿಗಳನ್ನು ಕೇಳಿದರು "ಏಕೆ ಇನ್ನೂ ಇವರಿಗೆ ನಿವೇಶನ ಸಿಕ್ಕಿಲ್ಲ, ಒಂದೂವರೆ ವರ್ಷವಾಗಿದೆ' ಎಂದು ಆವಾಗ ಅಧಿಕಾರಿಗಳು ಹೇಳಿದರು ನಾವು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಕಳಿಸಿದ್ದೇವೆ ಎಂದು. ಅದಕ್ಕೆ ಅವರು ಹೇಳಿದರು ನಾನೇ ಸರ್ಕಾರ, ನಾನು ಇಲ್ಲಿದ್ದೇನೆ, ಇಲ್ಲೇ ಫೈಲನ್ನು ತೆಗದುಕೊಂಡು ಬನ್ನಿ ಎಂದು ಹೇಳಿ ತಕ್ಷಣ ಅದಕ್ಕೆ ಮಂಜೂರಾತಿಯನ್ನು ಕೊಟ್ಟರು. ಇದನ್ನು ನಾವು ಮೆಚ್ಚಬೇಕಾಗುತ್ತದೆ. ಇದನ್ನು ನಾನು ಏಕೆ ಹೇಳುತ್ತಿದ್ದೇನೆ ಎಂದರೆ, ಅವರು ಬಡಜನರ ಪರಿಶಿಷ್ಟ ಜಾತಿ ಜನಾಂಗದವರ, ದೀನದಲಿತರ ಆಶಾಕಿರಣವಾಗಿದ್ದರು. ಹೀಗಾಗಿ ಅವರ ಸೇವೆ ಈ ದೇಶಕ್ಕೆ ಈ ರಾಜ್ಯಕ್ಕೆ ಇನ್ನೂ ಆಗಬೇಕಾಗಿತ್ತು. ಮಾನ್ಯ ಮುಖ್ಯಮಂತ್ರಿಗಳು ಹೇಳಿದ ಹಾಗೆ ತಲೆಮೇಲೆ ಮಲ ಹೊರತಕ್ಕಂಥ ಕೆಲಸವನ್ನು ಏನು ಬಂದ್ ಮಾಡಿದ್ದರು ಅದು ಒಂದು ಕ್ರಾಂತಿಕಾರಿ ಕೆಲಸವನ್ನು ಈ ದೇಶದಲ್ಲಿ ಮೊದಲಬಾರಿ ಮಾಡಿದ್ದರು. ಇವತ್ತು ಎಲ್ಲರೂ ಅಸ್ಪೃಶ್ಯತೆ ಬಗ್ಗೆ ಸಾಕಷ್ಟು ಮಾತನಾಡಬಹುದು. ಆದರೆ ಆ ಸಮಯದಲ್ಲಿ ಅವರು ಏನು ಕ್ರಾಂತಿಕಾರಕ ಹೆಜ್ಜೆಯನ್ನು ತೆಗೆದುಕೊಂಡು ಏನು ಹೋರಾಟ ಮಾಡಿದರು. ಇದರಿಂದ ಒಂದು ವಿಚಾರ ಸ್ಪಷ್ಟವಾಗುತ್ತದೆ, ಅವರು ಯಾವುದರಲ್ಲಿ ವಿಶ್ವಾಸ ಇಟ್ಟಿದ್ದರು, ನಂಬಿಕೆ ಇಟ್ಟಿದ್ದರು, ಆ ಪ್ರಕಾರ ಕ್ರಮ ತೆಗೆದುಕೊಂಡರು.

ನಾನು ಅವರನ್ನು ಸಮೀಪದಿಂದಲೂ ನೋಡಿದ್ದೇನೆ ಮತ್ತು ಅಲ್ಲಿ ಮಂತ್ರಿಯಾಗಿ ಕೆಲಸ ಮಾಡಿದ್ದಾಗಲೂ ನೋಡಿದ್ದೇನೆ. ನೀವು ಮಾಡಿದ್ದು ಸರಿಯಲ್ಲವೆಂದು ಎಷ್ಟೋ ಭಾರಿ ಪಕ್ಷಭೇದ ಮರೆತು ನಮಗೆ ಹೇಳಿದ್ದಾರೆ, ಇವತ್ತು ಅವರು ನಮ್ಮ ಬಳಿ ಇಲ್ಲ. ಅವರ ವಿಷಯವಾಗಿ ಈಗಾಗಲೇ ತಾವೇನು

ನಿರ್ಣಯ ಮಂಡಿಸಿದ್ದೀರಿ, ಅದಕ್ಕೆ ನಮ್ಮ ಪಕ್ಷದಿಂದ ಅನುಮೋದನೆ ಕೊಡುತ್ತಾ, ಅವರ ಆತ್ಮಕ್ಕೆ ದೇವರು ಶಾಂತಿಯನ್ನು ಕೊಡಲಿ ಮತ್ತು ಅವರ ಕುಟುಂಬಕ್ಕೆ ಏನು ನಷ್ಟವಾಗಿದೆ, ಆ ನಷ್ಟವನ್ನು ಸಹಿಸುವ ಶಕ್ತಿಯನ್ನು ಪರಮಾತ್ಮ ಕೊಡಲಿ ಎಂದು ಪ್ರಾರ್ಥನೆ ಮಾಡುತ್ತೇನೆ.

**ಶ್ರೀ ಬಿ.ಎಸ್. ಯಡಿಯೂರಪ್ಪ (ಶಿಕಾರಿಪುರ):-** ಸನ್ಮಾನ್ಯ ಉಪಾಧ್ಯಕ್ಷಣಿಯವರೇ, ಧೀಮಂತ ನಾಯಕ ಹೋರಾಟಗಾರ ಬಸವಲಿಂಗಪ್ಪನವರು ಇಲ್ಲದೆ ಈ ಸದನ ಬಡವಾಗಿದೆ ಎಂದು ನಾನು ಭಾವಿಸಿದ್ದೇನೆ. ಅವರು ಶೋಷಿತ ವರ್ಗದ ಧ್ವನಿಯಾಗಿದ್ದರು. ಅವರಿಗೆ ಯಾವುದು ಸರಿ ಎಂದು ಕಾಣಿಸುತ್ತದೋ ಅದನ್ನು ಹೇಳುವುದಕ್ಕೆ, ಜೀವನದಲ್ಲಿ ಎಂದೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಅಷ್ಟೇ ಅಲ್ಲ, ಅದನ್ನು ಕಾರ್ಯರೂಪಕ್ಕೆ ತರತಕ್ಕ ಸಂದರ್ಭದಲ್ಲಿ ಯಾವುದೇ ಅಡ್ಡಿ ಆತಂಕ ಬಂದರೂ ಬೆದರಲಿಲ್ಲ, ಜಗ್ಗಲಿಲ್ಲ ಮತ್ತು ಹಿಂದೆ ಸರಿಯಲಿಲ್ಲ, ಮಲ ಹೊರುವ ಹೀನ ಪದ್ಧತಿ ಬಗ್ಗೆ ಎಲ್ಲರೂ ಮಾತನಾಡಿದ್ದಾರೆ, ಮಾತನಾಡಲೇಬೇಕಾದಂತ ಒಂದು ಕ್ರಾಂತಿಕಾರವಾದ ಕೆಲಸವನ್ನು, ಅದರ ವಿರುದ್ಧ ಅವರು ಮಾಡಿದ್ದಾರೆ. ನನಗೆ ಜ್ಞಾಪಕವಿದೆ, ಉಡುಪ ನಗರಸಭೆಯಲ್ಲಿ ತುಂಬಾ ವಿಶೇಷ ಪ್ರಯತ್ನ ಮಾಡಿ, ಈ ಒಂದು ಮಲ ಹೊರುವ ಪದ್ಧತಿಯನ್ನು ತಪ್ಪಿಸಿದಾಗ, ಈ ರೀತಿ ಇತರೆ ನಗರಸಭೆಗಳು, ಪುರಸಭೆಗಳು ಕೆಲಸ ಮಾಡಬೇಕೆಂದು ಅವರ ಪೌರಾಡಳಿತ ಮಂತ್ರಿಯಾಗಿದ್ದಾಗ ಎಲ್ಲರಿಗೂ ಸುತ್ತೋಲೆಯನ್ನು ಕಳಿಸತಕ್ಕ ಪ್ರಯತ್ನ ಮಾಡಿದರು. ಈಗ್ಗೆ 7-8 ವರ್ಷಗಳ ಹಿಂದೆ ಶಿವಮೊಗ್ಗದಲ್ಲಿ ಅಟಲ್ ಬಿಹಾರಿ ವಾಜಪೇಯಿ ಅವರು ಗೆಸ್ಟ್‌ಹೌಸಿನಲ್ಲಿ ಬಂದು, ಸಿಕ್ಕಿದಾಗ, ಮಾನ್ಯ ಬಸವಲಿಂಗಪ್ಪನವರು ಅವರ ಜೊತೆಯಲ್ಲಿ ಮಾತನಾಡಬೇಕೆಂದು ಸುಮಾರು 15-20 ನಿಮಿಷಗಳ ಕಾಲ ಮಾತನಾಡಿ, ದೇಶದ ದಲಿತ ಜನಾಂಗ ಯಾವ ರೀತಿ ಶೋಷಣೆಗೆ ಒಳಗಾಗುತ್ತಿದ್ದಾರೆ, ಇದನ್ನು ತಪ್ಪಿಸುವುದಕ್ಕೆ ಏನು ಮಾಡುವುದಕ್ಕೆ ಸಾಧ್ಯವಿದೆ ಎಂಬ ವಿಚಾರವಾಗಿ ನಾವೆಲ್ಲರೂ ಒಂದಾಗಿ ಪಕ್ಷಭೇದ ಮರೆತು ಹೋರಾಟ ಮಾಡಬೇಕೆಂದು, ಅತ್ಯಂತ ಕಳಕಳಿಯಿಂದ ಸುಮಾರು ಅರ್ಧಗಂಟೆ ಕಾಲ ಚರ್ಚೆ ಮಾಡಿದರು. ಇದನ್ನು ಭಾರತೀಯ ಜನತಾಪಕ್ಷದವರು ಯಾವ ರೀತಿ ಅನುಸರಿಸಿಕೊಂಡು ಬರಬೇಕೆಂಬ ಚಿಂತನೆ ಮಾಡಿದ್ದೀರಿ ಎಂಬ ಮಾತನ್ನು ಸಹ ಅಟಲ್ ಬಿಹಾರಿ ವಾಜಪೇಯಿ ಅವರಿಗೆ ಹೇಳಿದ್ದುದು ನನಗೆ ಇನ್ನೂ ಜ್ಞಾಪಕ ವಿದೆ. ಅವರು ಇಲ್ಲಿ ವಿರೋಧಪಕ್ಷದಲ್ಲಿ ಕುಳಿತುಕೊಂಡ ಸಂದರ್ಭದಲ್ಲಿಯೂ ಸಹ, ನನ್ನ ಪಕ್ಷದಲ್ಲಿ

ಕುರಿತು ಪ್ರತಿ ಕ್ಷಣದಲ್ಲಿಯೂ ಸರಸವಾಗಿ ಮಾತನಾಡುತ್ತಾ ನಕ್ಕು ನಲಿಸುತ್ತಿದ್ದರು. ಒಂದು ವರ್ಷದ ಹಿಂದೆ ಯಾವುದೋ ಒಂದು ಸಂದರ್ಭದಲ್ಲಿ ಅವರ ಮನೆಗೆ ಹೋದಾಗ, ನನ್ನ ಜೊತೆಯಲ್ಲಿ ಸ್ವಾಮಿರಾವ್‌ರವರೂ ಇದ್ದರು. ಅವರು ಮುದ್ದೆ ಊಟ ಮಾಡುತ್ತೀರಾ ಎಂದು ಕೇಳುತ್ತಾ, ಸುಮಾರು ಅರ್ಧಗಂಟೆ ಕಾಲ ಮುದ್ದೆ ಊಟ ಮಾಡುವ ಸಂದರ್ಭದಲ್ಲಿ ಅನೇಕ ವಿಚಾರಗಳನ್ನು ತಿಳಿಸುವಂಥ ಪ್ರಯತ್ನ ಮಾಡುತ್ತಾ, ತುಂಬಾ ಆನಂದವಾಗಿ ಕಾಲ ಕಳೆಯುವುದನ್ನು ಇನ್ನೂ ಮರೆತಿಲ್ಲ. ಬಹುಶಃ ಅವರ ಆತ್ಮಕ್ಕೆ ಶಾಂತಿಯನ್ನು ಕೋರುವಂತಾದ್ದು, ಅವರ ಕುಟುಂಬಕ್ಕೆ ಭಗವಂತನು ಶಕ್ತಿಯನ್ನು ಕೊಡಲಿ ಎಂದು ಕೇಳುವಂತಾದ್ದು ಸ್ವಾಭಾವಿಕ. ಇದರ ಜೊತೆಗೆ ಇವತ್ತು ಏನು ಇಂತಹ ಒಬ್ಬ ಧೀಮಂತ ನಾಯಕನನ್ನು ಕಳೆದುಕೊಂಡಿದ್ದೇವೆ, ಅವರು ಯಾವ ಸಮಾಜದ ಏಳಿಗೆಗೋಸ್ಕರ, ಕನ್ನಡ ನಾಡಿನ ಏಳಿಗೆಗೋಸ್ಕರ ದುಡಿದರು ಮತ್ತು ಅವರಲ್ಲಿ ಯಾವ ವಿಚಾರ ಇತ್ತೋ, ಆ ವಿಚಾರಗಳನ್ನು ಸಾಕಾರಗೊಳಿಸತಕ್ಕ ಪ್ರಯತ್ನವನ್ನು ನಾವೆಲ್ಲರೂ ಮಾಡಬೇಕಾಗಿದೆ. ಮಾನ್ಯ ಉಪಾಧ್ಯಕ್ಷಣಿಯವರು, ಮಾನ್ಯ ಮುಖ್ಯಮಂತ್ರಿಯವರು ಮತ್ತು ವಿರೋಧಪಕ್ಷದ ನಾಯಕರು, ಶ್ರೀಯುತ ಬಸವಲಿಂಗಪ್ಪನವರ ಬಗ್ಗೆ ಯಾವ ಮಾತನ್ನು ಹೇಳಿದ್ದಾರೆ, ಅದಕ್ಕೆ ನಮ್ಮ ಸಂಪೂರ್ಣ ಸಹಮತವನ್ನು ಹೇಳುತ್ತಾ, ಈ ನಿರ್ಣಯಕ್ಕೆ ನಮ್ಮ ಪಕ್ಷದ ಪೂರ್ಣವಾದ ಬೆಂಬಲವನ್ನು ಕೊಡುತ್ತಾ, ಅವರ ಆತ್ಮಕ್ಕೆ ಶಾಂತಿಯನ್ನು ಕೊಡಲಿ ಎಂದು ಭಗವಂತನಲ್ಲಿ ಮತ್ತೊಮ್ಮೆ ಪ್ರಾರ್ಥನೆ ಮಾಡಿ, ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಸಿ. ಬೈರೇಗೌಡ (ವೇಮಗಲ್):-** ಸನ್ಮಾನ್ಯ ಉಪಾಧ್ಯಕ್ಷರೇ, ನಮ್ಮ ದೇಶದಲ್ಲಿ ತುಳಿತಕ್ಕೆ ಸಿಕ್ಕಿರತಕ್ಕಂಥ ಜನಾಂಗದ ಬಗ್ಗೆ ಆ ವರ್ಗದ ಬಗ್ಗೆ, ದೊಡ್ಡ ಕೂಗನ್ನು ಹಾಕುತ್ತಿದ್ದ ಸನ್ಮಾನ್ಯ ಬಸವಲಿಂಗಪ್ಪನವರು ನಮ್ಮ ಎದುರಿಗೆ ಇವತ್ತಿನ ದಿವಸ ಇಲ್ಲ. ನಮ್ಮ ಸಮಾಜದಲ್ಲಿ ಸಾಮಾನ್ಯವಾಗಿ ಯಾವ ಜಾತಿ ಅಥವಾ ಯಾವ ವರ್ಗದಿಂದ ಬರುತ್ತಾರೆ ಎನ್ನುವುದನ್ನು ಗುರುತಿಸಿ, ಆ ವರ್ಗದಿಂದ ಬಂದವರಾದರೆ, ಅವರು ಆ ವರ್ಗದ ನಾಯಕರು ಎಂದು ಹೇಳತಕ್ಕಂತಾದ್ದು ರೂಢಿಯಲ್ಲಿ ಬಂದಿದೆ. ಆದರೆ, ಕೆಳವರ್ಗಗಳು ಅಥವಾ ಕೆಳ ಜಾತಿಗಳಿಂದ ಬಂದಂಥ ನಾಯಕರಾದರೆ, ಅದೇ ಪಟ್ಟವನ್ನು ಕಟ್ಟುತ್ತಾರೆ. ಮೇಲ್ಜಾತಿ ಅಥವಾ ಮೇಲ್ವರ್ಗದಿಂದ ಬಂದವರಾದರೆ, ಅವರು ಅದೇ ಸಮಾಜದಲ್ಲಿ ನಾಯಕರಾಗುತ್ತಾರೆ. ಆದರೆ ಮಾನ್ಯ ಬಸವಲಿಂಗಪ್ಪನವರು ಅದೇ ಸಮಾಜದ ನಾಯಕರಾಗಿದ್ದರು. ಅವರನ್ನು ಕೇವಲ ದಲಿತರ ನಾಯಕರೆಂದೇ

ಗುರುತಿಸುತ್ತಿದ್ದರು. ಇದು ನನಗೆ ವೈಯಕ್ತಿಕವಾಗಿ ಬಹಳ ಖೇದವನ್ನು ಉಂಟುಮಾಡತಕ್ಕ ವಿಚಾರ. ಹುಟ್ಟು ಯಾರನ್ನೂ, ಯಾರೂ ಆರಿಸಿಕೊಂಡು ಹುಟ್ಟುವುದಿಲ್ಲ. ಆದರೆ, ಅವರು ಏನು ಮಾಡುತ್ತಾರೆ, ದೊಡ್ಡವರಾಗುತ್ತಾರೋ, ಚಿಕ್ಕವರಾಗುತ್ತಾರೋ, ಸಮಾಜದ ನಾಯಕರಾಗುತ್ತಾರೋ ಅದು ನಿರ್ಧಾರ ಮಾಡಬೇಕಾಗುತ್ತದೆ. ಆದರೆ ಈ ದೇಶದಲ್ಲಿ ಅಂಬೇಡ್ಕರ್‌ರವರನ್ನು ದಲಿತರ ನಾಯಕರು ಎನ್ನುವುದು, ಬಸವಲಿಂಗಪ್ಪನವರನ್ನು ಕೇವಲ ದಲಿತರ ನಾಯಕರು ಎನ್ನತಕ್ಕಾಂಥಾದ್ದು, ಇದು ಬಂದು ಬಿಟ್ಟಿದೆ. ಇದಕ್ಕೆ ನನ್ನ ಆಕ್ಷೇಪ ಇದೆ ಎನ್ನತಕ್ಕಂಥಾದ್ದನ್ನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ. ಬಸವಲಿಂಗಪ್ಪನವರು ಸದಾ ಸಮಸ್ಯೆಗಳ ಸುಳಿಯಲ್ಲಿ ಇರತಕ್ಕಾಂಥವರಾಗಿದ್ದರು. ಹಿಂದೆ ಶ್ರೀಮತಿ ನಾಗರತ್ನಮ್ಮನವರು 1972 ರಿಂದ 76 ರವರೆಗೆ ಅಧ್ಯಕ್ಷರಾಗಿದ್ದಾಗ, ನಾವು ಬಿಸಿನೆಸ್ ಅಡ್ವೈಸರಿ ಕಮಿಟಿಯಲ್ಲಿ ಕುಳಿತ್ತಿದ್ದಂಥ ಕಾಲದಲ್ಲಿ ಅವರು ಒಂದು ಮಾತನ್ನು ಅವತ್ತಿನ ದಿವಸ ಹೇಳಿದರು. ನಾನು ಯಾವಾಗಲೂ ಸಮಸ್ಯೆಗಳಲ್ಲಿ ಬದುಕುವ, ಸಮಸ್ಯೆಗಳ ದಾರಿಯನ್ನು ಮೆಟ್ಟಿ ಹೋಗತಕ್ಕಂಥ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದೇನೆ. ನಾನು ಸಮಸ್ಯೆಗಳಲ್ಲಿಯೇ ಇರಬೇಕು, ಅದನ್ನು ದಾಟಬೇಕೆನ್ನತಕ್ಕಂಥ ಒಂದು ಪ್ರವೃತ್ತಿಯನ್ನು ಮತ್ತು ಧೈರ್ಯವನ್ನು ಮಾಡಬೇಕೆನ್ನತಕ್ಕಂಥವನು ನಾನು ಎಂದು ಹೇಳಿದರು. ಸಮಸ್ಯೆ ಇಲ್ಲದಿದ್ದರೆ ನಾನು ಸಮಸ್ಯೆಗಳನ್ನು ಹುಟ್ಟಿಹಾಕುತ್ತೇನೆ. ಅದರ ಮೇಲೆ ಹೋಗುತ್ತೇನೆ ಎಂಬ ಮಾತನ್ನು ಹೇಳಿದರು. ಹೋಗತಕ್ಕಂಥ ದಾರಿಯಲ್ಲಿ ಕಲ್ಲುಮುಳ್ಳು ಇಲ್ಲದಿದ್ದರೆ, ಪಕ್ಕದಲ್ಲಿರತಕ್ಕಂಥ ಕಲ್ಲುಮುಳ್ಳನ್ನು ತಂದು ದಾರಿಯಲ್ಲಿ ಹಾಕಿ ಅದರ ಮೇಲೆ ಹೋಗುತ್ತೇನೆ. ಎನ್ನತಕ್ಕಂಥ ಮಾತನ್ನು ಅವರು ಹೇಳಿದರು. ಇದಕ್ಕೆ ನಿರ್ದೇಶನ ಅವರು ಕನ್ನಡ ಸಾಹಿತ್ಯದ ಬಗ್ಗೆ ಉಪಯೋಗಿಸುವಂಥ ಪದ. ಅನೇಕ ಸಂದರ್ಭದಲ್ಲಿ ನಮ್ಮ ಸಮಾಜದಲ್ಲಿರತಕ್ಕಂಥ ಅನಿಷ್ಠ ಪದ್ಧತಿಗಳ ವಿರುದ್ಧ ಅವರು ಹಾಕತಕ್ಕಂಥ ಕೂಗು ಬಹಳ ಎತ್ತರದಲ್ಲಿ ಇರುತ್ತಿತ್ತು. ಮಾನ್ಯ ದೇವರಾಜ ಅರಸ್ ಅವರು ಮುಖ್ಯಮಂತ್ರಿಗಳಾಗಿದ್ದಾಗ ನಾನು ವಿರೋಧ ಪಕ್ಷದಲ್ಲಿ ಕುಳಿತಿದ್ದೆ. ಬಹುಶಃ ಅಂದಿನ ಸಂದರ್ಭದಲ್ಲಿ ಮಾನ್ಯ ಬಸವಲಿಂಗಪ್ಪನವರು ಹೇಳಿದಂಥ ಮಾತನ್ನು ಯಾರೂ ಅಷ್ಟು ಧೈರ್ಯವಾಗಿ ಅಂದಿನ ಸಂದರ್ಭದಲ್ಲಿ ಹೇಳುವುದಕ್ಕೆ ಸಾಧ್ಯ ಇರಲಿಲ್ಲ. ನನ್ನ ಸ್ವಂತ ಯೋಗ್ಯತೆಯ ಮೇಲೆ ಮಂತ್ರಿಯಾಗಿದ್ದೇನೆ ಎಂದು ಅವರು ಹೇಳಿದರು. ಇದೆಲ್ಲಾ ಸಾಮಾನ್ಯ ಮಾತುಗಳಲ್ಲ. ನಾನು ಅದಕ್ಕಾಗಿಯೇ ಹೇಳಿದ್ದುದು, ಅವರು ಯಾವಾಗಲೂ ಸಮಸ್ಯೆಗಳ ಸುಳಿಯಲ್ಲಿ

ಹೋಗತಕ್ಕಂಥವರು ಎಂದು. ಆ ಧೈರ್ಯವಾದ ಮಾತುಗಳನ್ನು ಈಗಲೂ ಕೂಡ ಯಾರಿಗೂ ಹೇಳುವುದಕ್ಕೆ ಸಾಧ್ಯ ಇಲ್ಲ. ಅದೇ ರೀತಿ ಅವರು ಆಡಳಿತ ನಡೆಸಿದಂಥ ಸಂದರ್ಭದಲ್ಲಿ ಸಹ ಅವರು, ಇತ್ತೀಚಿನ ತಮ್ಮ ಖಾತೆಯ ವಿಚಾರದಲ್ಲಿ ಸಹ ಅವರು ಸಮಸ್ಯೆಗಳ ಸುಳಿಗೆ, ಮಾತಿನ ಸುಳಿಗೆ ಸಿಲುಕಿರತಕ್ಕಾಂಥಾದ್ದನ್ನು ನಾವೆಲ್ಲಾ ಗಮನಿಸಿರತಕ್ಕಂಥಾದ್ದು, ಜ್ಞಾಪಕದಲ್ಲಿ ಇದೆ. ಅಷ್ಟೇ ಅಲ್ಲದೆ ಹಿಂದೂಸಮಾಜದಲ್ಲಿರತಕ್ಕ ಅನೇಕ ಅನಿಷ್ಟ ಪದ್ಧತಿಗಳ ಬಗ್ಗೆ ಅವರಿಗೆ ಜಿಗುಪ್ಸೆ ಬಂದು ನಾನು ಹಿಂದೂ ಆಗಿ ಇರುವುದಿಲ್ಲ ಎಂದು, ಈ ಸಮಾಜದಲ್ಲಿ ಇರತಕ್ಕ ಅನಿಷ್ಟ ಪದ್ಧತಿಗಳ ಬಗ್ಗೆ ಸಿಡಿದು ನಿಂತು ಕೊನೆಗೆ ಹಿಂದೂಧರ್ಮವನ್ನು ಬಿಟ್ಟು ಬೌದ್ಧರಾಗಿ ಕೊನೆಯುಸಿರನ್ನು ಎಳೆಯತಕ್ಕಂಥ ಸಾಹಸ ಕಾರ್ಯವನ್ನು ಮಾಡಿರತಕ್ಕಂಥವರು. ಇಂತಹ ಸಾಹಸಮಯರಾಗಿದ್ದಂಥ ಮಾನ್ಯ ಬಸವಲಿಂಗಪ್ಪನವರಿಗೆ ಸಾಯುವ ವಯಸ್ಸೇನಲ್ಲ. 68 ವರ್ಷ ಸಾಯತಕ್ಕಂಥ ವಯಸ್ಸೇನಲ್ಲ. ಇನ್ನೂ ಬದುಕಬೇಕಾಗಿರತಕ್ಕಂಥವರು, ಅಕಸ್ಮಾತ್ತಾಗಿ ಅವರು ತಮ್ಮ ಜೀವನದ ಕೊನೆಯುಸಿರನ್ನು ಎಳೆದಿದ್ದಾರೆ. ಇವತ್ತಿನದಿವಸ ಅವರು ನಮ್ಮ ಮುಂದೆ ಇಲ್ಲ. ಆದರೆ ಅವರು ಮಾಡಿತಕ್ಕಂಥ ಕೆಲವು ಕೆಲಸಗಳು, ಅವರು ಅನೇಕ ಸಂದರ್ಭದಲ್ಲಿ ತಳೆದಂಥ ಧೈರ್ಯದ ನಿಲುವು ಮತ್ತು ಅವರ ಆಡಳಿತ ಕಾಲದಲ್ಲಿ ನಡೆದಂಥ ರೀತಿ, ಅದನ್ನು ನಾವು ಅನುಕರಿಸಬೇಕಾಗಿರತಕ್ಕಂಥದ್ದು ಅನುಕರಣೆ ಮಾಡಬೇಕಾಗಿರತಕ್ಕಂಥಾದ್ದು, ಸಮಾಜದ ದೃಷ್ಟಿಯಿಂದ ಅತೀ ಅವಶ್ಯಕ. ತುಳಿತಕ್ಕೆ ಒಳಗಾದ ಜನಕ್ಕೆ, ಇರುವವರು, ಇಲ್ಲದವರ ನಡುವೆ, ಇಲ್ಲದೇ ಇರತಕ್ಕಂಥವರ ಪರವಾಗಿ ನಿಲ್ಲತಕ್ಕ ವ್ಯಕ್ತಿ ಅವರು, ನಮ್ಮ ಕಣ್ಮುಂದೆ ಅವರು ಇಲ್ಲ, ಅವರ ಆತ್ಮಕ್ಕೆ ಚಿರಶಾಂತಿಯನ್ನು ಬಯಸಿ ತಾವು ತಂದಿರತಕ್ಕಂಥ ನಿರ್ಣಯಕ್ಕೆ ನನ್ನ ಸಮ್ಮತಿಯನ್ನು ಸೂಚಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀ ವಾಟಾಳ್ ನಾಗರಾಜ್ (ಚಾಮರಾಜನಗರ):- ಮಾನ್ಯ ಅಧ್ಯಕ್ಷಣಿಯವರೇ ತಾವು ತಂದಿರತಕ್ಕಂಥ ಸಂತಾಪ ಸೂಚಕ ನಿರ್ಣಯದ ಬಗ್ಗೆ ಕೆಲವು ಮಾತುಗಳನ್ನು ಆಡಬೇಕಾಗಿದೆ. ಶ್ರೀಮಾನ್ ಬಸವಲಿಂಗಪ್ಪನವರು ನಾವು ಬಹಳ ಆತ್ಮೀಯ ಸ್ನೇಹಿತರು ನಾನು ಅನಂತಕೃಷ್ಣರವರು ಬಸವಲಿಂಗಪ್ಪನವರು ಮೂರು ಜನರು ಅನೇಕ ವರ್ಷಗಳ ಕಾಲ ಅವರು ವಕೀಲರಾಗಿದ್ದಾಗಲೂ ಸಹ ನಮ್ಮ ಜೊತೆಯಲ್ಲಿದ್ದರು. ಅವರು ವಕೀಲರಾಗಿದ್ದಾಗ ಒಂದು ಸಾರಿ ಜಾಸ್ತಿ ದುಡ್ಡು ಕಕ್ಷಿದಾರರಿಂದ ಬಂದಿತ್ತು. ಅವರಲ್ಲಿ ಆಗ ಒಂದು ಸಣ್ಣ ಹಳೆಯ ಕಾರು ಲ್ಯಾಂಡ್ ಮಾಸ್ಟರ್ ಕಾರು ಇಟ್ಟುಕೊಂಡಿದ್ದರು. ಆಗ ರಂಗಸ್ವಾಮಿಗುಡಿ ಬೀದಿಗೆ

ಬಂದರು. ಅನಂತಕೃಷ್ಣರವರನ್ನು ಕರೆದುಕೊಂಡು ಬಂದರು. ನಾನು ಮೇಲೆ ನಮ್ಮ ಕಾರ್ಯಾಲಯದಲ್ಲಿದೆ. ರೀ ಬನ್ನಿ ವಾಟಾಳ್‌ನಾಗರಾಜ್‌ರವರೇ ಎಂದು ಕರೆದರು. ದುಡ್ಡು ಜಾಸ್ತಿ ಬಂದಿದೆ ಇವತ್ತು ನಾವು ಅನಂತಕೃಷ್ಣ ಎಲ್ಲಾ ಹೆಸರುಘಟ್ಟಕ್ಕೆ ಹೋಗೋಣ, ಅಲ್ಲಿ ತಿಂಡಿಗಿಂಡಿ ಎಲ್ಲಾ ತೆಗೆದುಕೊಂಡು ಹೋಗೋಣ, ಕಕ್ಷಿದಾರರು ಬಹಳ ದುಡ್ಡು ಕೊಟ್ಟಿದ್ದಾರೆ ಎಂದರು. ಆ ಸಂದರ್ಭದಲ್ಲಿ, ಅದಾದ ನಂತರ ಏನಾಯಿತು ಎಂದು ಹೇಳುತ್ತೇನೆ. ನಡೆದ ಕತೆ ಇದು. ಹೆಸರುಘಟ್ಟದಲ್ಲಿ ಆಗ ಕಾಂಗ್ರೆಸ್ ಎರಡು ಭಾಗ ಆಗಿತ್ತು, ಇಂದಿರಾ ಕಾಂಗ್ರೆಸ್ ಎಂದು ಹೊಸದಾಗಿ ಪ್ರಾರಂಭವಾಗಿತ್ತು, ನಾನು ಸೇರುತ್ತಿದ್ದೇನೆ. ಅನಂತಕೃಷ್ಣರವರು ಸೇರುತ್ತಿದ್ದಾರೆ, ನೀವು ಬಂದು ನಮ್ಮ ಜೊತೆಯಲ್ಲಿ ಸೇರಬೇಕು. ನನ್ನ ಮಾತು ಕೇಳಿ ಎಂದು ಒಂದೇ ಸಮನೆ ಪ್ರಯತ್ನ ಮಾಡಿದರು. ಇಲ್ಲಾ ಇಲ್ಲಾ ನಾನು ತಿಂಡಿ ತಿನ್ನುತ್ತೇನೆ. ಎಲ್ಲಾ ಮಾಡುತ್ತೇನೆ ಆದರೆ ನಾನು ವಿರೋಧ ಪಕ್ಷದಲ್ಲಿ ಇರುತ್ತೇನೆ ನಿಮ್ಮ ಜೊತೆಯಲ್ಲಿ ಸೇರುವುದಿಲ್ಲ ಅಂತ ನಾನು. ಇಲ್ಲಾ ನೀವು ನನ್ನ ಮಾತು ಕೇಳಬೇಕು. ನೀವು ಯಾವಾಗಲೂ ನನ್ನ ಮಾತು ಕೇಳಿದರೆ ಉದ್ಧಾರವಾಗುತ್ತೀರಿ, ಎಂದು ಛೇಡಿಸುತ್ತಿದ್ದರು. ಪಾಪ ಅನಂತಕೃಷ್ಣರವರು ಅವರ ಮಾತಿಗೆ ಬೆಲೆ ಕೊಟ್ಟರು. ನಾನು ಬೆಲೆ ಕೊಡಲಿಲ್ಲ, ಅನೇಕ ಸಂದರ್ಭಗಳು ನನ್ನನ್ನು ತೆರೆಯಲ್ಲಿ ಕರೆದುಕೊಂಡು ಹೋಗಿ ನೋಡಿದಿರಾ ನಾನು ಆವತ್ತೇ ಹೇಳಿದೆ ನೋಡಿ ನಾವು ಅಲ್ಲಿ ಕುಳಿತುಕೊಂಡಿದ್ದೇವೆ. ನೀವು ಇಲ್ಲೇ ಕುಳಿತುಕೊಂಡಿದ್ದೀರಿ. ನೀವು ನನ್ನ ಜೊತೆಯಲ್ಲಿ ಬರಲಿಲ್ಲ. ಅದಕ್ಕೆ ನೀವು ಅಲ್ಲೇ ಕುಳಿತುಕೊಂಡಿರಬೇಕು. ಹೀಗೆ ಛೇಡಿಸುತ್ತಿದ್ದರು. ಅವರೊಬ್ಬ ಮೇಧಾವಿ ವ್ಯಕ್ತಿಯಾಗಿದ್ದರೂ, ಕರ್ನಾಟಕ ಏಕೀಕರಣದಲ್ಲಿ ಹರಿಜನ ಮುಖಂಡರಾಗಿದ್ದರು. ಪ್ರಥಮವಾಗಿ ಕರ್ನಾಟಕ ಏಕೀಕರಣದ ಮುಂಚೂಣಿಯಲ್ಲಿದ್ದಂಥ ವ್ಯಕ್ತಿ ಶ್ರೀಮಾನ್ ಬಸವಲಿಂಗಪ್ಪನವರು. ಶ್ರೀಮಾನ್ ನಿಜಲಿಂಗಪ್ಪನವರು ಅಧ್ಯಕ್ಷರಾಗಿದ್ದರು. ಶ್ರೀ ಬಸವಲಿಂಗಪ್ಪನವರು ಕರ್ನಾಟಕದ ಏಕೀಕರಣ ಸಮಿತಿಯ ಕಾರ್ಯದರ್ಶಿಗಳಾಗಿದ್ದರು.

**ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು:–** ಎನ್. ರುದ್ರಯ್ಯನವರು ಆ ಕಾಲದಲ್ಲಿ ಕರ್ನಾಟಕ ಏಕೀಕರಣದ ಉದಯದ ಕಾಲ, ಬಹುಶಃ ನನಗನಿಸುತ್ತದೆ ಶ್ರೀ ಬಸವಲಿಂಗಪ್ಪನವರು ಧ್ವನಿ ಇಲ್ಲದವರಿಗೆ ಧ್ವನಿಯಾಗಿ ಶಕ್ತಿ ಇಲ್ಲದವರಿಗೆ ಶಕ್ತಿಯಾಗಿ ಈ ಕರ್ನಾಟಕ ರಾಜ್ಯದ ದೊಡ್ಡ ಆಸ್ತಿ ಆಗಿದ್ದರು. ಕರ್ನಾಟಕ ರಾಜ್ಯಕ್ಕೆ ಒಂದೇ ಅಲ್ಲ. ಈ ಸಭೆಯ ಆಸ್ತಿಯಾಗಿದ್ದರು. ಅವರ ವಿಚಾರಧಾರೆ ಅವರು ಯಾವಾಗಲೂ ಎಲ್ಲವನ್ನೂ ಮೈಮೇಲೆ ಹಾಕಿಕೊಂಡು ಅದನ್ನು

ಜೀರ್ಣಿಸಿಕೊಳ್ಳುವ ಒಂದು ದೊಡ್ಡ ಶಕ್ತಿ ಅವರೊಬ್ಬರಿಗೆ ಮಾತ್ರ ಸಾಧ್ಯವಾಗಿತ್ತು, ಎನ್ನುವುದನ್ನು ನಾವೆಲ್ಲರೂ ಒಪ್ಪಿಕೊಳ್ಳಬೇಕಾಗುತ್ತದೆ. ಇವತ್ತು ಅವರು ಈ ಸಭೆಯಲ್ಲಿ ಇಲ್ಲ. ನಾವು ಹೋದ ಸಭೆಯಲ್ಲಿ ಅವರನ್ನು ನೋಡಿದ್ದು ಆಯಿತು ಅವರನ್ನು ನೋಡಿದಾಗ ಎಷ್ಟು ಸುಂದರವಾಗಿ ಆ ರೇಷ್ಮೇ ಶಲ್ಯೆ ಹಾಕಿಕೊಂಡು ಅಡಿಕೆ ತಿಂದುಕೊಂಡು ಬಂದು ಕುಳಿತುಕೊಂಡರೆ ಆ ಒಂದು ವಾಕ್ ಶೈಲಿ ನೋಡಿದಾಗ ಅದಕ್ಕೂ ನಮ್ಮ ಈಗಿನ ಪರಿಸ್ಥಿತಿಗೆ ನೋಡಿದಾಗ ನಾವು ಎಷ್ಟು ಸಂಕಟದಲ್ಲಿ ಇದ್ದೇವೆ ಎಂದು ನನಗನಿಸುತ್ತದೆ. ಅವರಿಗೆ ಬಸವೇಶ್ವರರ ಬಗ್ಗೆ ಅಪಾರವಾದ ಗೌರವ ಇತ್ತು. ನಮ್ಮ ಅಪ್ಪ ಬಸವೇಶ್ವರ ಎಂದು ಅನೇಕ ಸಾರಿ ಹೇಳಿದ್ದರು. ಅವರ ಕಾಲದಲ್ಲಿದ್ದಂತಹ 800 ವರ್ಷಗಳ ಹಿಂದೆ ಬಸವೇಶ್ವರರು ಮಾಡಿದಂತಹ ಕ್ರಾಂತಿಯ ಬಗ್ಗೆ ಎಳೆಎಳೆಯಾಗಿ ಬಿಡಿಸಿ ಮಾತನಾಡತಕ್ಕಂಥ ಶಕ್ತಿ ಅವರಿಗಿತ್ತು. ಅವರು ಬುದ್ಧನ ಬಗ್ಗೆ ಬಸವೇಶ್ವರರ ಬಗ್ಗೆ ಅಂಬೇಡ್ಕರ್ ಬಗ್ಗೆ ಅವರಿಗಿದ್ದಂತಹ ಕಳಕಳಿ ಧೈರ್ಯ ಶಕ್ತಿ ಮತ್ತೊಬ್ಬರಿಗೆ ಬಾರದು ಎನ್ನುವ ಮಾತನ್ನು ನಾವು ಇವತ್ತು ಹೇಳಬೇಕಾಗಿದೆ. ಇವತ್ತು ಅವರ ಒಂದು ಹೆಸರು ಉಳಿಯಬೇಕಾದರೆ ಕರ್ನಾಟಕದಲ್ಲಿ ಅವರು ಶಾಸಕರಾಗಿ ಸತ್ತಿರಬಹುದು ಅಥವಾ ಸಚಿವರಾಗಿ ಸಾಯಬೇಕಾಗಿತ್ತು ಎಂದು ತಿಳಿದುಕೊಂಡಿರಬಹುದು ಅವರು ನಾನು ದೊಡ್ಡ ನಾಯಕರಾಗಿ ಸಾಯಬೇಕಾಗಿತ್ತು ಎಂದು ತಿಳಿದುಕೊಂಡಿರಬಹುದು ಆ ಪ್ರಶ್ನೆ ಅಲ್ಲ. ಅವರು ಮಾಡಿರತಕ್ಕಂಥ ಹೋರಾಟ ಕ್ರಾಂತಿ ಅದು ಉಳಿಯಬೇಕಾದರೆ ನಾವೆಲ್ಲರೂ ಪ್ರಾಮಾಣಿಕ ಚಿಂತನೆ ಮಾಡಿ ಕರ್ನಾಟಕದಲ್ಲಿ ಬಸವಲಿಂಗಪ್ಪನವರ ಹೆಸರಿನಲ್ಲಿ ಒಂದು ಪ್ರಾಮುಖ್ಯವಾದ ಸ್ಮಾರಕ ಆಗಲೇಬೇಕು ಎನ್ನುವ ಮಾತನ್ನು ನಾವು ಯಾರೂ ಮರೆಯಬಾರದು. ಇದು ನನ್ನ ಸ್ಪಷ್ಟವಾದ ಅಭಿಪ್ರಾಯ. ಅವರು ಕರ್ನಾಟಕದ ಏಕಾಕರಣಕ್ಕೆ ದುಡಿದಿದ್ದಾರೆ. ಹರಿಜನರಿಗಾಗಿ ದುಡಿದಿದ್ದಾರೆ. ದೀನದಲಿತರಿಗೆ, ಎಲ್ಲಾ ವರ್ಗದವರ ಬಗ್ಗೆ ದುಡಿದಿದ್ದಾರೆ. ಸಾಹಿತ್ಯದ ಬಗ್ಗೆ ಅಪಾರವಾದ ಆಸಕ್ತಿ ಇತ್ತು ಎನ್ನುವ ಮಾತನ್ನು ನಾನು ತಮಗೆ ಹೇಳುತ್ತೇನೆ. ಅವರು ಒಂದು ಸಾರಿ ಕನ್ನಡ ಬೂಸಾ ಸಾಹಿತ್ಯ ಎಂದು ಹೇಳಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ದೊಡ್ಡ ಆಂದೋಲನ ಮೈಮೇಲೆ ಹಾಕಿಕೊಂಡರು. ಅದರಿಂದ ಅರಸರ ಕಾಲದಲ್ಲಿ ಅಧಿಕಾರ ಕಳೆದುಕೊಂಡರು. ಒಂದು ದೊಡ್ಡ ಹೋರಾಟ ಮಾಡಿ ಅಧಿಕಾರ ಕಳೆದುಕೊಂಡರು. ಆಗ ಅಧಿಕಾರ ಕಳೆದುಕೊಂಡಾಗ ಅವರ ಮನೆಯಲ್ಲಿ ಇದ್ದವರು ನಾನು ಮತ್ತು ಅನಂತಕೃಷ್ಣ ಇಬ್ಬರೇ, ನೀವು ಆ ತರಹ ಹೇಳಬಾರದಾಗಿತ್ತು, ಕನ್ನಡದಲ್ಲೂ,

ಬೂಸಾ ಸಾಹಿತ್ಯ ಇದೆ. ಎಂದು ಹೇಳಬೇಕಾಗಿತ್ತು. ಅದು ಬಿಟ್ಟು ನೀವು ಇಡೀ ಕನ್ನಡ ಬೂಸಾ ಸಾಹಿತ್ಯ ಎಂದು ಹೇಳುವುದಕ್ಕೆ ಹೋಗಬೇಡಿ. ಕನ್ನಡದಲ್ಲೂ ಬೂಸಾ ಸಾಹಿತ್ಯ ಇದೆ ಎಂದು ಹೇಳಿ ಎಂದಾಗ ಮೊದಲೇ ಹೇಳಬೇಕಾಗಿತ್ತು ಅಂದರು. ನಾವು ಎಲ್ಲಾ ಮನೆಯ ಹೊರಗಡೆ ಕುಳಿತುಕೊಂಡು ಯೋಚನೆ ಮಾಡಿದಾಗ ಅವರೊಬ್ಬ ಪ್ರಾಮಾಣಿಕ ಮನುಷ್ಯ ಅಧಿಕಾರ ಕಳೆದುಕೊಂಡ ಎಂದು ಹೇಳಿ ಕಣ್ಣೀರು ಹಾಕಿದ್ದೇನೆ ನಾನು ಅವರೊಬ್ಬ ದಯಾಳು ಮನುಷ್ಯ, ಅದರಲ್ಲಿ ಎರಡು ಅಭಿಪ್ರಾಯ ಇಲ್ಲ. ವಿಧಾನ ಪರಿಷತ್ತಿನಲ್ಲಿ ನಾಗಸೇನಾ ವಿಷಯ ಚರ್ಚೆಗೆ ತಂದಾಗ ನಾನು ಮತ್ತು ಸಿಂಧ್ಯಾ ಮಾತನಾಡಿಕೊಂಡೆವು ಇಲ್ಲಿ ಯಾರಾದರೂ ಆ ವಿಷಯವನ್ನು ತಂದಾಗ ನಾವು ಬಸವಲಿಂಗಪ್ಪನವರ ವಿರುದ್ಧವಾಗಿ ನಿಲ್ಲಬಾರದು. ಇದು ಬರೀ 2 ಲಕ್ಷ ರೂಪಾಯಿ ಸಮಾಚಾರ. ಒಂದೊಂದು ಮೆಡಿಕಲ್ ಸೀಟಿಗೆ 12 ಲಕ್ಷ ತೆಗೆದುಕೊಳ್ಳುತ್ತಿರುವಾಗ ಬರೀ 2 ಲಕ್ಷ ರೂಪಾಯಿಗಳ ವಿಷಯ ಹಿಡಿದುಕೊಂಡು ಅಡ್ಡಾಡಿಸುತ್ತಿದ್ದಾರೆ ಇವರು ಬಸವಲಿಂಗಪ್ಪನವರನ್ನು ಏನು ಮಾಡಬೇಕೆಂದು ಹೊರಟಿದ್ದಾರೆ. ನಾವಿಬ್ಬರೂ ಕುಳಿತುಕೊಂಡು ಇಲ್ಲಿ ಮಾತ್ರ ಆ ವಿಷಯವನ್ನು ಯಾರು ತಂದರೂ ನಾವು ಮಾತ್ರ ಬಸವಲಿಂಗಪ್ಪನವರ ಪರವಾಗಿ ನಿಲ್ಲಬೇಕೆಂದು ತೀರ್ಮಾನ ಮಾಡಿದ್ದೆವು ಇದು ಸತ್ಯ. ಆವತ್ತು ನನ್ನನ್ನು ನಾಗಸೇನಾ ಶಾಲೆಗೆ ಕರೆದುಕೊಂಡು ಹೋದರು, ನೀವೂ ಬನ್ನಿ ನಿಮಗೆ ತೋರಿಸುತ್ತೇನೆ ಎಂದು. ನಾಗಸೇನಾ ಶಾಲೆ ನೋಡಿದರೆ ಅದು ಒಂದು ಸುಂದರವಾದಂಥ ಕಟ್ಟಡ. ಅವರು ಕಟ್ಟಿದಂಥ ಸ್ಮಾರಕ, ಕಟ್ಟಡ, ಇವತ್ತು ನಾವು ಹೇಳುತ್ತೇವೆ, ಎಲ್ಲದಕ್ಕೂ ಎಲ್ಲರ ಮೇಲೂ ನಾವು ಜುಟ್ಟು ಹಿಡಿದು, ಕತ್ತು ಹಿಡಿದು ಅಲ್ಲಾಡಿಸತಕ್ಕಂಥಾದ್ದು ನಮ್ಮ ಇತ್ತೀಚಿನ ದಿನದ ರಾಜಕಾರಣವಾಗಿದೆ. ನನಗನಿಸ್ತು ನಿಜವಾಗಲೂ ಆವತ್ತು ಆ ಮನುಷ್ಯ ಮಧ್ಯಾಹ್ನ 4 ಗಂಟೆಗೆ ವಿಧಾನಪರಿಷತ್ತಿನಿಂದ ದಡಬಡಿಸಿಕೊಂಡು ಅವರ ಕಾರ್ಯಾಲಯಕ್ಕೆ ಕರೆದುಕೊಂಡು ಹೋದರು. ನಾನು ಇನ್ನೂ ಊಟ ಮಾಡಿಲ್ಲ ನೋಡಿ, ಯಾವುದೋ 2 ಲಕ್ಷ ರೂಪಾಯಿಯಲ್ಲಿ ಕಂಭ ಕಟ್ಟಿದ್ದೇನೆ, ಈ ಕಂಭಕ್ಕೆ ಎಷ್ಟಾಗುತ್ತಿದೆ ನೀವೇ ಹೇಳಿ? ಈ ಶಿಲೆಗೆ ಎಷ್ಟಾಗುತ್ತದೆ ನೋಡಿ, ಈ ಕಲ್ಲು ಎಷ್ಟು ತಂದೆ ನೋಡಿ? ಎಲ್ಲಾ ನನಗೆ ತೋರಿಸಿ, ಇಷ್ಟೆಲ್ಲಾ ನಾನು ಮಾಡುತ್ತಿದ್ದೇನೆ, ನನ್ನನ್ನು ಯಾವ ಉದ್ದೇಶಕ್ಕೆ ಎಳೆ ಎಳೆಯಾಗಿ ಹರಾಜು ಹಾಕುತ್ತಿದ್ದಾರೆ? ಬಹಳ ನೋವು ಪಟ್ಟರು. ನನಗೆನಿಸುತ್ತದೆ. ಆ ಮನುಷ್ಯನ ಸಾವು ನನಗಂತೂ ಬಹಳ ವೈಯಕ್ತಿಕವಾಗಿ, ನಾನು ಬಹಳ ಆತ್ಮೀಯತೆಯಿಂದ ನಾವಿಬ್ರೂ, ಒಂದು ರೀತಿ

ಇಲ್ಲಿ ತೋರಿಸಿಕೊಳ್ಳದೇ ಇದ್ದರೂ ಅಷ್ಟು ಸಹೋದರ ಭಾವನೆಯಲ್ಲಿ ಇದ್ದೆವು ಮತ್ತು ಯಾವ ಇಲಾಖೆ ಕೊಟ್ಟರೂ ಆ ಇಲಾಖೆಗೆ ಶಕ್ತಿ ಕೊಡುತ್ತಿದ್ದಂಥ ಒಬ್ಬ ವ್ಯಕ್ತಿ. ಕೊನೆಯಲ್ಲಿ ಅವರಿಗೆ ರಾಜಕಾರಣದಿಂದ, ಅದನ್ನು ಯಾರು ಕೊಟ್ಟರು ಬಿಟ್ರು ಎಂದು ಹೇಳುವುದಕ್ಕೆ ಹೋಗುವುದಿಲ್ಲ. ರಾಜಕಾರಣದಲ್ಲಿ ಕೆಲಸಕ್ಕೆ ಬಾರದ ಒಂದು ಇಲಾಖೆ ಕೊಟ್ಟಿದ್ದರು. ಆಮೇಲೆ ಅವರು ಬರೀ ಕಾರ್ಖಾನೆಗಳಿಗೆ ಅರ್ಜಿ ಬರೆದು ನೀವು ಗಾಳಿ ತೆಗೆದಿದ್ದೀಯಾ, ಅಲ್ಲಿ ನೀರು ಬಿಟ್ಟಿದ್ದೀಯಾ ಎಂದು, ಅದನ್ನು ಅಷ್ಟು ಶಕ್ತಿಯುತವಾಗಿ ಒಂದಾರು ತಿಂಗಳು ಇಡೀ ರಾಜ್ಯದ ಕಾರ್ಖಾನೆಗಳು, ಅವರೂ, ಇವರೂ, ಬಸ್‌ನವರು, ಪೆಟ್ರೋಲ್ ಬಂಕ್‌ನವರಿಗೆ ದೊಡ್ಡ ಚಳಿ ಜ್ವರ ಬರಿಸಿಬಿಟ್ಟರು. ಹಾಗೆ ಶಕ್ತಿವಂತರಾಗಿ ಕೆಲಸ ಮಾಡಿದಂಥ ಒಬ್ಬ ಧೀಮಂತ ಚೇತನ. ಅದನ್ನು ನಾವಂತೂ ಮರೆಯತಕ್ಕಂಥಾದ್ದಲ್ಲ. ಅಂಥವರು ಕೋಟಿಗೊಬ್ಬರು ಈ ದೇಶದಲ್ಲಿ ಒಬ್ಬೊಬ್ಬರು ಹುಟ್ಟುತ್ತಾರೆ, ಕೋಟಿಗೆ ಒಬ್ಬರು ಇಂಥವರು ಅನ್ನತಕ್ಕಂಥಾದ್ದದ್ದು. ನನಗಂತೂ ಅವರ ಬಗ್ಗೆ ಅಪಾರವಾದ ಗೌರವ ಇದೆ. ಒಂದು ಕಾಲದಲ್ಲಿ ಇಬ್ರೇ ಇಬ್ರು ಇದ್ದರು ಒಂದು ಕಡೆ ಎನ್. ರಾಚಯ್ಯನವರು ಮತ್ತೊಂದು ಕಡೆ ಬಸವಲಿಂಗಪ್ಪನವರು. ಸ್ವಾತಂತ್ರ್ಯದ ನಂತರ ಪ್ರಜಾಪ್ರಭುತ್ವ ಸರ್ಕಾರಗಳ ನಂತರ, ತುಳಿತಕ್ಕೆ ಸಿಕ್ಕಿದಂಥ ಜನತೆಯ ಪರವಾಗಿ ಕೂಗನ್ನು ಹಾಕುತ್ತಿದ್ದಂಥ ಇಬ್ಬರೇ ಇಬ್ಬರು ಶಕ್ತಿವಂತರು ಆ ಕಾಲದಲ್ಲಿ ಎನ್. ರಾಚಯ್ಯನವರು ಮತ್ತು ಬಸವಲಿಂಗಪ್ಪನವರು. ಆ ಮಾತು ಆವಾಗ ಕೇಳುತ್ತಿತ್ತು. ಈ ಒಂದು ಸಂದರ್ಭದಲ್ಲಿ ಈ ಸದನದಲ್ಲಿ ನಾನು ತಮಗೆ ತಮ್ಮ ಮುಖಾಂತರ ಸರ್ಕಾರಕ್ಕೆ ಅತ್ಯಂತ ಪ್ರಾಮಾಣಿಕವಾಗಿ ಮನವಿ ಮಾಡುತ್ತಿದ್ದೇನೆ, ಬಸವಲಿಂಗಪ್ಪನವರದು ವಿಶೇಷವಾದಂಥ ಒಂದು ವ್ಯಕ್ತಿತ್ವ ಎಂದು ತಿಳಿದುಕೊಂಡು ಅದಕ್ಕೆ ಸರ್ಕಾರವೇ ಸೂಕ್ತವಾದಂಥ ಸ್ಮಾರಕವನ್ನು ನಿರ್ಮಾಣ ಮಾಡಬೇಕು. ಈ ಸ್ಮಾರಕಕ್ಕೆ ಬೇಕಾದರೆ ತಕ್ಷಣವೇ ಒಂದು ಸಮಿತಿ ಮುಖ್ಯಮಂತ್ರಿ ಅಧ್ಯಕ್ಷತೆಯಲ್ಲಿ ರಚನೆಯಾಗಲಿ. ನಾವು ಎಲ್ಲಾ ಇರುತ್ತೇವೆ ಒಂದು ಸುಂದರವಾದಂಥ ಸ್ಮಾರಕವಾಗಬೇಕು. ಆ ಸ್ಮಾರಕದಲ್ಲಿ ಅವರು ನಡೆದುಕೊಂಡು ಬಂದಂಥ ಅವರ ವಿಚಾರಧಾರೆ, ಬಹುಶಃ ದೇಶವಿದೇಶಗಳಿಂದ ಬಂದಂಥ ಎಲ್ಲರೂ ಸ್ಮಾರಕಭವನದಲ್ಲಿ ನೋಡಿ ಅದರ ಬಗ್ಗೆ ಒಂದು ಹೆಚ್ಚಿನ ಚೈತನ್ಯ ಪಡೆಯತಕ್ಕಂಥ ಶಕ್ತಿಶಾಲಿಯಾಗಿ ಎಲ್ಲರೂ ಬರಬೇಕಾಗಿದೆ. ಅದಕ್ಕೋಸ್ಕರ ಈ ಸದನದಲ್ಲಿ ಅವರನ್ನು ಎಷ್ಟು ನೆನೆಸಿಕೊಂಡರೂ ಸಾಲದು. ನನಗನಿಸುತ್ತದೆ ಒಂದು ರೀತಿ ಈ ಸದನದ ಚರ್ಚೆ ಇದೆಯಲ್ಲಾ ಅದು ಅವರಿಲ್ಲದೆ ಬಡವಾಯಿತು,

ಅವರು ಚರ್ಚೆಗೆ ನಿಂತರೆ ಧಾಟಿನೇ ಧಾಟಿ. ಅವರು ಹೇಳುತ್ತಿದ್ದರು, ನಾನು ಏನಾದರೂ ಮಾಡಿ ಹೇಳುತ್ತೇನೆ, ಸುಮ್ಮನೆ ಇಡೀ ನಿಮ್ಮ ಸಭೆ ಕೂಗಾಡಬೇಕು ಎಂದು. ಆ ರೀತಿಯಾದಂಥ ವರ್ಣಮಯ ವ್ಯಕ್ತಿತ್ವ ಅವರದು. ಅಂಥಾ ವ್ಯಕ್ತಿತ್ವ ನಮ್ಮನ್ನು ಅಗಲಿದೆ. ಕರ್ನಾಟಕಕ್ಕೆ ಇದರಿಂದ ಅನ್ಯಾಯವಾಗಿದೆ ಎನ್ನತಕ್ಕಂಥ ಮಾತನ್ನು ಹೇಳಿ ಅವರ ಆತ್ಮಕ್ಕೆ ಶಾಂತಿ ದೊರಕಲಿ. ಅವರ ಮನೆಯವರು, ಅವರ ಪತ್ನಿಯವರು ನನಗೆ ಬಹಳ ಬೇಕಾದವರು, ಅವರ ಮಕ್ಕಳೆಲ್ಲಾ ನನಗೆ ಬೇಕಾದವರು. ಅವರ ಮನೆಗೆ ನಾನು ಹೋದರೆ, ರೀ ಕುಳಿತುಕೊಳ್ಳಿ ಕಲ್ಲಂಗಡಿ ಹಣ್ಣು ತಂದಿದ್ದೇವೆ ಕತ್ತರಿಸುತ್ತೇವೆ ಕುಳಿತುಕೊಳ್ಳಿ ಎಂದು ಕೊಡುತ್ತಿದ್ದರು. ಆ ಮನುಷ್ಯನ ವ್ಯಕ್ತಿತ್ವ, ಆ ಸ್ನೇಹ, ಆ ವಿಶ್ವಾಸ ನನಗಂತೂ ಬಹಳ ಹಿಡಿಸಿತು. ಅವರು ಸತ್ತ ದಿನ ನಾನು ಮೈಸೂರಿನಲ್ಲಿದ್ದೆ. ಮಾನ್ಯ ಮುಖ್ಯಮಂತ್ರಿಗಳು ಮಧ್ಯಾಹ್ನ ಒಂದು ಸಭೆ ಇದೆ ಎಂದು ಕರೆದಿದ್ದರು. 5 ಗಂಟೆಗೆ ಈ ತರಹ ಎಂದು ಸುದ್ದಿ ಕೇಳಿ ನನಗೆ ಇದ್ದ ಒಬ್ಬ ಉತ್ತಮವಾದಂಥ, ಮೇರು ಸ್ನೇಹಿತ ಒಳ್ಳೆಯ ಧೀಮಂತ ಶಕ್ತಿಯನ್ನು ಕಳೆದುಕೊಂಡಂಥ ಒಂದು ದುಃಖವಾಯಿತು. ಆ ದುಃಖ ಈ ತಕ್ಷಣಕ್ಕೆ ನಮಗೆ ಆರುತ್ತದೆಂದು ನಾನು ಅಂದುಕೊಂಡಿಲ್ಲ. ಈ ಮಾತುಗಳಿಂದಲೂ ನನಗೆ ಆರುತ್ತದೆಂದು ನಾನು ಅಂದುಕೊಂಡಿಲ್ಲ. ಇದು ನಿಜವಾಗಲೂ ಜೀವಂತವಾಗುಳಿಯುತ್ತದೆ. ಒಳಗಡೆ ಮಲಗಿದವರು ಮತ್ತೇ ಏಳಲಿಲ್ಲವೆಂದರೆ ಇದು ವಿಧಿಯ ವಿಪರ್ಯಾಸ. ಆದ್ದರಿಂದ ಈ ವಿಧಿಯ ವಿಪರ್ಯಾಸಕ್ಕೆ ನಾವೆಲ್ಲಾ ಸಿಕ್ಕಿದ್ದೇವೆ. ಆದರೂ ಅವರ ಸ್ಮಾರಕಕ್ಕೆ ಮಾತ್ರ ನಾವೆಲ್ಲರೂ ಭಾಗಿಗಳಾಗಬೇಕೆಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಪ್ರೊ: ಎಂ.ಡಿ. ನಂಜುಂಡಸ್ವಾಮಿ (ಧಾರವಾಡ ಗ್ರಾಮಾಂತರ ಕ್ಷೇತ್ರ):–** ಸನ್ಮಾನ್ಯ ಸಭಾಧ್ಯಕ್ಷಣಿಯವರೇ, ತಾವು ಅನ್ಯಥಾ ಭಾವಿಸಬಾರದು. ತಾವು ಮಂಡಿಸಿರತಕ್ಕಂಥ ನಿರ್ಣಯಕ್ಕೆ ನನ್ನ ಮತ್ತು ರೈತ ಸಂಘದ ಸಂಪೂರ್ಣ ಸಮ್ಮತಿ ಇದೆ. ಆದರೆ, ತಮ್ಮ ನಿರ್ಣಯದಲ್ಲಿ ಒಂದು ಸಣ್ಣ ತಿದ್ದುಪಡಿ ಮಾಡದೇ ಇದ್ದರೆ ಸನ್ಮಾನ್ಯ ಬಸವಲಿಂಗಪ್ಪನವರಿಗೆ ಹಾಗೂ ಅವರು ಭಾಗವಹಿಸಿದ್ದಂಥ ವಿಚಾರವಾಗಿ ಚಳುವಳಿಗೆ ನಾವು ಅಪಚಾರ ಮಾಡಿದಂತಾಗುತ್ತದೆ. ನಾನು ಈ ಮಾತುಗಳನ್ನು ಲಘುವಾಗಿ ಮಾತನಾಡುತ್ತಾ ಇಲ್ಲ. ಅವರ ಜೊತೆಗೆ ಅತ್ಯಂತ ನಿಕಟ ಸಂಪರ್ಕವನ್ನು ಹೊಂದಿದಂಥ, ಅವರು ಮಾಡಿದಂತಹ ಮತ್ತು ಹಾಕಿಕೊಂಡಂತಹ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಹಾಗೆಯೇ

ನಾನು ಕೂಡ ಈ ರಾಜ್ಯದ ವಿಚಾರವಾಗಿ ಸಂಘದ ಅಧ್ಯಕ್ಷನಾಗಿ ಹಾಕಿದ ಕಾರ್ಯಕ್ರಮಗಳಲ್ಲಿ ಅವರೂ ಕೂಡ ಭಾಗವಹಿಸಿದಾಗ ನನಗೆ ಪರಿಚಯ ಆದಂಥ ಅವರ ವ್ಯಕ್ತಿತ್ವದ ಆಧಾರದ ಮೇಲೆ ನಾನು ಈ ಮಾತುಗಳನ್ನು ಹೇಳುತ್ತಾ ಇದ್ದೇನೆ. ಅವರ ವಿಚಾರವಾಗಿ ಮಾನ್ಯ ಸದಸ್ಯರುಗಳೆಲ್ಲಾ ಮಾತನಾಡಿದ್ದಾರೆ. ಅವರ ಸಾಮಾಜಿಕ ಸುಸಂಬದ್ಧತೆಯ ವಿಚಾರಗಳ ಬಗ್ಗೆ ಅಲ್ಲದೆ ಕನ್ನಡ ಬರವಣಿಗೆಯ ಕುರಿತು ಬೂಸಾ ಸಾಹಿತ್ಯ ಎನ್ನುವ ಅವರ ಹೇಳಿಕೆ ಬಗ್ಗೆ ಕೂಡಾ ನಾನೀಗ ಇಲ್ಲಿ ಮಾತನಾಡುವುದಿಲ್ಲ. ಅದು ಎಲ್ಲರಿಗೂ ತಿಳಿದಿರುವ ವಿಚಾರವೇ ಆಗಿದೆ. ಅದೇ ರೀತಿಯಲ್ಲಿ ತಲೆಯ ಮೇಲೆ ಮಲ ಹೊರುವ ಪದ್ಧತಿಯನ್ನು ರದ್ದು ಮಾಡಿದ ವಿಚಾರದ ಬಗ್ಗೆಯೂ ಕೂಡ ನಾನು ಮಾತನಾಡುವುದಿಲ್ಲ. ಅದು ಇಡೀ ನಮ್ಮ ದೇಶಕ್ಕೆ ಗೊತ್ತಿರತಕ್ಕಂಥ ವಿಚಾರವಾಗಿದೆ. ಆದರೆ ನಾವೆಲ್ಲರೂ ಒಂದು ವಿಚಾರವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಅವರು ಈ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡಿದ್ದುದು ಒಬ್ಬ ವಿಚಾರವಾದಿಯಾಗಿ. ಬೂಸಾ ಸಾಹಿತ್ಯದ ಬಗ್ಗೆ ರಾಜ್ಯದಾದ್ಯಂತ ಉಂಟಾದ ಗೊಂದಲ ಮತ್ತು ಗಲಭೆಗಳ ಪರಿಣಾಮದಂತೆ ಅವರ ಮತ್ತೊಂದು ಹೇಳಿಕೆ ಕೂಡಾ ಅದೇ ರೀತಿಯಲ್ಲಿ ಪರಿಣಾಮವನ್ನು ಉಂಟು ಮಾಡಿತ್ತು, ಅದೇನೆಂದರೆ "ದೇವರ ಪಟಗಳನ್ನು ಗಟಾರಕ್ಕೆ ಬಿಸಾಕಿ" ಎನ್ನುವ ಓವರ್ ಮಾತುಗಳು. ಅವರು ಒಬ್ಬ ವಿಚಾರವಾದಿಯಾಗಿ ನಮ್ಮ ದೇಶದ ಸಮಾಜದಲ್ಲಿರುವಂಥ ಎಲ್ಲಾ ಮೂಢನಂಬಿಕೆಗಳ ವಿರುದ್ಧ ಹೋರಾಟ ಮಾಡಿದಂಥ ಹೋರಾಟಗಾರ. ಆ ಕಾರಣದಿಂದಾಗಿ ತಾವುಗಳು ಮಂಡಿಸಿರತಕ್ಕಂಥ ಸಂತಾಪ ಸೂಚನಾ ನಿರ್ಣಯದ ಮೊದಲನೆ ವಾಕ್ಯದಲ್ಲಿ "ಶಿವೈಕ್ಯರಾದರು" ಎಂಬ ಒಂದು ಪದ ಇದೆ. ಅದನ್ನು ದಯಮಾಡಿ ತಿದ್ದುಪಡಿ ಮಾಡಬೇಕು. ಮಾನ್ಯ ಮುಖ್ಯಮಂತ್ರಿಯವರು ಮಾತನಾಡುವಾಗ ಒಂದು ಒಳ್ಳೆಯ ಪದವನ್ನು ಉಪಯೋಗಿಸಿದರು. ಅವರು ಉಪಯೋಗಿಸಿದ "ಅಸ್ತಂಗತರಾದರು" ಎನ್ನುವ ಆ ಪದವನ್ನು ಉಪಯೋಗಿಸಿದರೆ, ನಮ್ಮಂಥ ವಿಚಾರವಾದಿಗಳಿಗೆ ಮತ್ತು ಬಸವಲಿಂಗಪ್ಪನವರ ವಿಚಾರವಾದಿಗಳ ಬಗೆಗೂ ಒಂದು ರೀತಿಯ ಸಮಾಧಾನವಾಗುತ್ತದೆ ಎಂದು ನಾನು ಹೇಳಬಯಸುತ್ತೇನೆ.

**ಉಪಾಧ್ಯಕ್ಷಣಿಯವರು:–** ಅದನ್ನು ತಿದ್ದುಪಡಿ ಮಾಡೋಣ....

**ಶ್ರೀ ಬಿ.ಎಸ್. ಯಡಿಯೂರಪ್ಪ:–** ಶಿವೈಕ್ಯರಾದರು ಎಂದು ಉಪಯೋಗಿಸಿದ್ದರಿಂದ ಏನೂ ತಪ್ಪು ಆಗಿಲ್ಲ. ಮಾನ್ಯ ಸದಸ್ಯರು ತಮ್ಮ

ಅಭಿಪ್ರಾಯವನ್ನು ಕೊಟ್ಟಿದ್ದಾರೆ. ಈಗ ಉಪಯೋಗಿಸಿದ ಶಬ್ದವನ್ನು ಬದಲಾವಣೆ ಮಾಡುವ ಅವಶ್ಯಕತೆ ಇಲ್ಲ. ....

**ಶ್ರೀ ಪಿ.ಜಿ.ಆರ್. ಸಿಂಧ್ಯ (ಕನಕಪುರ):–** ಮಾನ್ಯ ಅಧ್ಯಕ್ಷಣಿಯವರೇ ಮಾನ್ಯ ಬಸವಲಿಂಗಪ್ಪನವರು ಜೀವಂತವಿದ್ದಾಗಲೂ ಕೂಡ ಕಾಂಟ್ರವರ್ಸಿಯಾಗುತ್ತಿತ್ತು, ಅವರು ದಿವಂಗತರಾದ ಮೇಲೂ ಕೂಡ ಕಾಂಟ್ರವರ್ಸಿಯಾಗುತ್ತಾ ಇದೆ, ಇದು ಒಂದು ರೀತಿಯಲ್ಲಿ ವಿಪರ್ಯಾಸವಾಗಿ ಕಾಣುತ್ತಾ ಇದೆ. ಹಿರಿಯರಾಗಿರತಕ್ಕಂಥ ಬಸವಲಿಂಗಪ್ಪನವರು ನಿಧನರಾಗಿರತಕ್ಕಂಥ ಸುದ್ದಿಯು ನಮಗೆಲ್ಲರಿಗೂ ನೋವನ್ನು ಉಂಟು ಮಾಡಿದೆ. ಅವರು ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನಲ್ಲಿ ಹುಟ್ಟಿದ್ದರೂ ಕೂಡ ನಮ್ಮ ಜಿಲ್ಲೆಯವರಾಗಿದ್ದರು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಭಿವೃದ್ಧಿಯ ಬಗ್ಗೆ ಅವರು ದುಡಿದಿರತಕ್ಕಂಥದನ್ನು ಯಾರೂ ಕೂಡ ಮರೆಯುವುದಕ್ಕೆ ಆಗುವುದಿಲ್ಲ. ನಾನು ಇಲ್ಲಿ ಈ ಮಾತುಗಳನ್ನು ಯಾವುದೇ ವರ್ಗದ ಜನರ ಮನಸ್ಸನ್ನು ನೋಯಿಸಲು ಆಡುತ್ತಾ ಇಲ್ಲ, ಬಸವಲಿಂಗಪ್ಪನವರನ್ನು ಯಾರ ವ್ಯಕ್ತಿತ್ವಕ್ಕೂ ಹೋಲಿಸುವುದಕ್ಕೆ ನಾನು ತಯಾರಾಗಿಲ್ಲ. ಸ್ವಾತಂತ್ರ್ಯ ನಮ್ಮ ದೇಶಕ್ಕೆ ಬಂದು 47 ವರ್ಷಗಳು ಆದವು. ದಲಿತವರ್ಗದವರು ಮತ್ತು ಜನ ಸಾಮಾನ್ಯರು ವಿಶೇಷತೆ; ಗ್ರಾಮಾಂತರ ಪ್ರದೇಶಗಳಲ್ಲಿ ದಿವಂಗತ ಬಸವಲಿಂಗಪ್ಪನವರ ಬಗ್ಗೆ ವಿಶೇಷ ಗೌರವ ಮತ್ತು ವಿಶ್ವಾಸದ ಮನೋಭಾವನೆಗಳನ್ನು ಬೆಳೆಸಿಕೊಂಡಿದ್ದಾರೆ. ಬಸವಲಿಂಗಪ್ಪನವರು ಅಂದರೆ ನಮ್ಮವರು ಎನ್ನುವ ಭಾವನೆ ಅವರಲ್ಲಿ ಇತ್ತು. 1977ನೇ ಇಸವಿಯಲ್ಲಿ ಚಿಕ್ಕಮಗಳೂರು ಉಪಚುನಾವಣೆಯಲ್ಲಿ ಇಂದಿರಾಜಿಯವರು ಕಾಂಗ್ರೆಸ್ ವತಿಯಿಂದ ಸ್ಪರ್ಧೆ ಮಾಡಿದ್ದರು. ಆಗ ನಾವು ಬಹಳ ಪ್ರಯತ್ನ ಮಾಡಿದೆವು ಪರಿಶಿಷ್ಟ ಜಾತಿ ಮತ್ತು ವರ್ಗದವರ ಮತಗಳನ್ನು ಇಂದಿರಾಗಾಂಧಿಯವರ ವಿರುದ್ಧ ಪಡೆಯಬೇಕೆಂದು, ನಾವು ಯಾವುದೇ ಹರಿಜನರ ಕೇರಿಗಳಿಗೆ ಹೋದರೂ ಬಹಳ ಕೆಳಮಟ್ಟದ ಕೂಲಿ ಮಾಡುವ ಜನರೂ ಕೂಡಾ ನಾವೆಲ್ಲ ಬಸವಲಿಂಗಪ್ಪನವರ ಇಂದಿರಾಗಾಂಧಿಯವರ ಜೊತೆಯಲ್ಲಿದ್ದೇವೆ ಎಂದು ಹೇಳಿದರು. ಇವತ್ತಿಗೂ ಸಹ ರಾಜ್ಯದ ಯಾವುದೇ ಮೂಲೆಯ ಪರಿಶಿಷ್ಟ ಜಾತಿ ವರ್ಗಗಳ ಅದರಲ್ಲೂ ಬಸವಲಿಂಗಪ್ಪನವರು ನಮ್ಮವರು ಎಂಬ ಭಾವನೆ ಇತ್ತು ಹಾಗೆಂದು ಬೇರೆ ವರ್ಗದ ಜನರಲ್ಲಿ ಅವರಿಗೆ ಸ್ನೇಹಿತರು ಇರಲಿಲ್ಲ ಎಂದು ಅಲ್ಲ ನಾವು ಯಾರನ್ನು ಮೇಲ್ಜಾತಿಯವರು ಅಂತಕರೆಯುತ್ತೇವೆ ಅದರಲ್ಲೂ ಬಸವಲಿಂಗಪ್ಪನವರು ಸ್ನೇಹಿತರಿದ್ದರೂ ಕಾರಣ ಅವರು ಯಾವ ವಿಚಾರದಲ್ಲಿ

ನಂಬಿಕೆ ಇಟ್ಟಿದ್ದರೋ ಅದಕೋಸ್ಕರ ಹೋರಾಟ ಮಾಡಿದರು ನಮ್ಮ ಪಕ್ಷದ ಸರ್ಕಾರ ಕೇಂದ್ರದಲ್ಲಿ ಅಧಿಕಾರದಲ್ಲಿದ್ದಾಗ ಬುದ್ಧಧರ್ಮವನ್ನವಲಂಬಿಸಿರುವ ಕ್ರಿಶ್ಚಿಯನ್‌ರು ಅಥವಾ ಕ್ರಿಶ್ಚಿಯನ್ನರಾದ ಎಸ್ಸಿ ಎಸ್‌ಟಿಗಳಿಗೂ 18 ಪರ್ಸೆಂಟ್ ರಿಸರ್ವೇಶನನ್ನು ಎಕ್ಸ್‌ಟೆಂಡ್ ಮಾಡಿದ ಸಂದರ್ಭದಲ್ಲಿ ನಮ್ಮ ಪ್ರಧಾನಿಯಾಗಿದ್ದ ಶ್ರೀ ವಿ.ಪಿ. ಸಿಂಗರ ಕಾರ್ಯಕ್ರಮವನ್ನು ಸ್ವಾಗತ ಮಾಡಿದವರು ಬಹುಶಃ ಕಾಂಗ್ರೆಸ್‌ನಲ್ಲಿ ಇಡೀ ದೇಶದಲ್ಲಿ ಬಸವಲಿಂಗಪ್ಪನವರು ಒಬ್ಬರೇ. ನಾವು ಇಲ್ಲಿ ಆಡಳಿತ ಪಕ್ಷದಲ್ಲಿ ಆರೂವರೆ ವರ್ಷ ಕಾಲ ಇದ್ದಾಗ ನಮಗೆ ಕಿವಿಹಿಂಡಿ ಹೇಳುತ್ತಿದ್ದರು ನೋಡಿ ಇಲ್ಲಿ ತಪ್ಪು ಮಾಡುತ್ತಿದ್ದೀರಿ, ಸರಿ ಮಾಡಿಕೊಳ್ಳಬೇಕು ಎಂದು. ಅಂತಹ ನೈತಿಕತೆ ಅವರಿಗೆ ಇತ್ತು. ಅನೇಕ ಜನ ಯಾವುದಾದರೂ ಸ್ಥಾನದಲ್ಲಿ ಕುಳಿತುಕೊಂಡರೆ ಅವರಿಗೆ ಗೌರವ ಬರುತ್ತದೆ. ಆದರೆ ಬಸವಲಿಂಗಪ್ಪನವರು ಯಾವುದೇ ಸ್ಥಾನದಲ್ಲಿ ಕುಳಿತರೂ ಆ ಸ್ಥಾನದ ಗೌರವ ಹೆಚ್ಚಾಗುತ್ತಿತ್ತು. ಇವತ್ತು ಅವರು ನಮ್ಮ ಜೊತೆಯಲ್ಲಿ ಇಲ್ಲ. ಶ್ರೀ ವಾಟಾಳ್ ನಾಗರಾಜ್‌ರವರು ಹೇಳಿದಂತೆ ಸೂಚ್ಯವಾದ ಒಂದು ಕಾರ್ಯಕ್ರಮವನ್ನು ಅವರ ಹೆಸರಿನಲ್ಲಿ ಮಾಡಬೇಕಾಗಿದೆ. ಬಸವಲಿಂಗಪ್ಪನವರಿಗೆ ಒಂದು ಆಸೆ ಇತ್ತು ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಗೂ ಅವರು ಆ ಕಾರ್ಯಕ್ರಮ ಕೊಟ್ಟಿದ್ದರು ನಾನು ಮುಖ್ಯಮಂತ್ರಿಗಳಿಗೆ ಸಲಹೆ ಮಾಡುತ್ತೇನೆ. ಕಳೆದ ತಿಂಗಳು ನಮ್ಮ ಜಿಲ್ಲಾ ಪರಿಷತ್ತಿನ ಸಭೆಯಲ್ಲೂ ಆ ಬಗ್ಗೆ ಮಾತನಾಡಿದ್ದರು ಗ್ರಾಮಾಂತರ ಪ್ರದೇಶದ ಮಹಿಳೆಯರಿಗಾಗಿ ಒಂದು ವಿಶೇಷ ಕಾರ್ಯಕ್ರಮ ಅವರು ತಯಾರಿಸಿದ್ದರು ಅದನ್ನು ಎಐಸಿಸಿಗೂ ಸಬ್‌ಮಿಟ್ ಮಾಡಿದ್ದೇವೆಂದು ಹೇಳಿದ್ದರು ಹಾಗೆಯೇ ಹಿಂದಿನ ಮುಖ್ಯಮಂತ್ರಿಗಳಿಗೂ ಕೊಟ್ಟಿದ್ದೇನೆ ಎಂದು ಹೇಳಿದರು. ಈ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳಲ್ಲಿ ಒತ್ತಾಯ ಮಾಡುತ್ತೇನೆ. ಆ ಕಾರ್ಯಕ್ರಮವನ್ನು ಈ ವರ್ಷದ ಬಜೆಟ್‌ನಲ್ಲಿ ಕರ್ನಾಟಕದಲ್ಲಿ ತರುವುದಕ್ಕೆ ಪ್ರಯತ್ನ ಮಾಡಬೇಕು ಇದರಿಂದ ಅವರ ಆತ್ಮಕ್ಕೆ ಶಾಂತಿ ಸಿಗುತ್ತದೆಂದು ನಂಬಿರುವವನು. ಬಸವಲಿಂಗಪ್ಪನವರ ಬಗ್ಗೆ ಅವರ ಕುಟುಂಬವರ್ಗದವರಷ್ಟೇ ಅಲ್ಲ ಸಾವಿರಾರು ಲಕ್ಷಾಂತರ ಮಂದಿ ಅಭಿಮಾನಿಗಳು ಬರೀ ಕರ್ನಾಟಕದಲ್ಲಷ್ಟೇ ಅಲ್ಲ ಇಡೀ ದೇಶದಲ್ಲೇ ಎಲ್ಲಾ ರಾಜಕೀಯ ಪಕ್ಷಗಳಲ್ಲೂ ಸ್ನೇಹಿತರೂ ಇದ್ದರು. ನಮ್ಮ ಹಿಂದಿನ ಪ್ರಧಾನಿಗಳಾದ ಶ್ರೀ ಚಂದ್ರಶೇಖರ್‌ರವರು ಬಸವಲಿಂಗಪ್ಪನವರ ಬಗ್ಗೆ ಬಹಳ ಅಭಿಮಾನ ಇಟ್ಟುಕೊಂಡಿದ್ದರು. ಅವರು ಯಾವಾಗ ಬೆಂಗಳೂರಿಗೆ ಬಂದರೂ ಬಸವಲಿಂಗಪ್ಪ ಹೇಗಿದ್ದಾರೆಂದು ವಿಚಾರಿಸುತ್ತಿದ್ದರು. ಸಮಾಜದ ಕೆಳವರ್ಗದ

ಮತ್ತು ಪರಿಶಿಷ್ಟ ವರ್ಗ ಪಂಗಡಗಳ ಜನರಿಗೆ ಒಂದು ರೀತಿಯ ನೈತಿಕ ಶಕ್ತಿ ತುಂಬಾ ಅವರಿಗಾಗಿ ಹೋರಾಟ ಮಾಡಿದವರು ಅವರು. ಆ ಜನಕ್ಕೆ ನಾಯಕತ್ವ ಕೊಟ್ಟಂತಹ ಧೀಮಂತ ವ್ಯಕ್ತಿ. ಅವರ ಸಾವು ನಮ್ಮ ರಾಜ್ಯದ ಜನತೆಗಷ್ಟೇ ಅಲ್ಲ ರಾಷ್ಟ್ರದ ಜನತೆಗೆ ತುಂಬಲಾರದ ನಷ್ಟ. ಈ ಸಂದರ್ಭದಲ್ಲಿ ನೀವು ತಂದಿರುವ ನಿರ್ಣಯಕ್ಕೆ ನಾನೂ ಕೂಡಾ ಧ್ವನಿಯನ್ನುಗೂಡಿಸಿ ಅವರ ಆತ್ಮಕ್ಕೆ ಶಾಂತಿ ಸಿಗಲಿ ಎಂದು ಪ್ರಾರ್ಥಿಸುತ್ತೇನೆ. ಇಂದು ಅವರು ಧೈವಾಧೀನರಾಗಿದ್ದಾರೆ ಆದರೆ ಅವರ ವಿಚಾರಧಾರೆಗಳಾದ ವಿಶೇಷವಾಗಿ ಬಡಬಗ್ಗರ ಬಗ್ಗೆ ಪರಿಶಿಷ್ಟ ಜಾತಿ, ಪಂಗಡಗಳ ಕಲ್ಯಾಣ ಏನಿದೆ ಅದಕ್ಕಾಗಿ ನಾವೆಲ್ಲರೂ ಪ್ರಯತ್ನ ಮಾಡೋಣ ಎಂದು ಹೇಳಿ ನನಗೆ ಮಾತನಾಡಲು ಅವಕಾಶ ಕೊಟ್ಟಿದ್ದಕ್ಕೆ ತಮಗೆ ವಂದಿಸಿ ನನ್ನ ಮಾತು ಮುಗಿಸುತ್ತೇನೆ.

**ಶ್ರೀ ಡಿ.ಬಿ. ಚಂದ್ರೇಗೌಡ (ತೀರ್ಥಹಳ್ಳಿ):–** ಮಾನ್ಯ ಉಪಾಧ್ಯಕ್ಷಣಿಯವರೇ, ಶ್ರೀಮಾನ್ ಬಸವಲಿಂಗಪ್ಪನವರ ನಿಧನಕ್ಕೆ ಸಂತಾಪ ಸೂಚಕ ನಿರ್ಣಯವನ್ನು ತರುವುದರ ಮೂಲಕ ತಾವು ಮತ್ತು ಸಭಾನಾಯಕರು ಇನ್ನಿತರ ಸ್ನೇಹಿತರು ಅಭಿವ್ಯಕ್ತಮಾಡಿದಂಥ ಅಭಿಪ್ರಾಯಕ್ಕೆ ನನ್ನ ಧ್ವನಿಯನ್ನೂ ಕೂಡಿಸುತ್ತಾ ಶ್ರೀಮಾನ್ ಬಸವಲಿಂಗಪ್ಪನವರು ಇನ್ನಿಲ್ಲ, ಕಾಲಗರ್ಭದಲ್ಲಿ ಲೀನವಾಗಿದ್ದಾರೆ. ಆದರೆ ಅವರ ನೆನಪು ಸದಾ ಹಸಿರಾಗಿರುವಂಥಾ ವ್ಯಕ್ತಿ ಮತ್ತು ವ್ಯಕ್ತಿತ್ವ. ಈ ವ್ಯಕ್ತಿ ಮತ್ತು ವ್ಯಕ್ತಿತ್ವ ಎರಡನ್ನೂ ನಾನು ವಿಭಜನೆ ಮಾಡಿ ನೋಡಿದ್ದೇನೆ. ಅನೇಕ ವಿಚಾರಗಳು ಪ್ರಸಂಗಗಳು ಬಂದಾಗ ತನ್ನ ನಂಬಿಕೆಗಳಿಗೆ ಎಂಥ ದೊಡ್ಡವರಿಂದಲೇ ಅದಕ್ಕೆ ಪ್ರತಿರೋಧ ಬಂದರೂ ಮೆಟ್ಟಿ ನಿಲ್ಲತಕ್ಕಂಥ ಒಂದು ವ್ಯಕ್ತಿತ್ವ, ನನ್ನ ಮತ್ತು ಅವರ ಸಂಬಂಧ ತೀರಾ ನಿಕಟವಾದದ್ದು. ನಾನು ಸಂಭಂಧದ ವಿಚಾರಕ್ಕೆ ಹೆಚ್ಚು ಹೋಗುವುದಿಲ್ಲ. ಎಷ್ಟು ತೀರಾ ನಾವು ಅವರು ಹತ್ತಿರವಾಗಿದ್ದೆವು ಎಂದು ಹೇಳಿದರೆ ನಮ್ಮ ಕೌಟುಂಬಿಕ ವ್ಯವಹಾರ ಹಣ್ಣು ಕೊಟ್ಟು ತರುವವರೆಗೂ ಈ ಕೆಲಸವನ್ನು ನಮ್ಮ ಜೊತೆ ಸೇರಿ ಅವರು ಮಾಡಿಸುತ್ತಿದ್ದರು. ಆದರೆ ಒಂದು ವಿಶೇಷ ಬಸವಲಿಂಗಪ್ಪನವರು ಎಂದರೆ ಅಧಿಕಾರದಲ್ಲಿ ಇರಲಿ, ಇಲ್ಲದೇ ಇರಲಿ, ಬಸವಲಿಂಗಪ್ಪನವರು ಇದ್ದಾರೆಂದು ದೇಶದ ಜನರಿಗೆ ಗೊತ್ತಾಗುತ್ತಿತ್ತು. ಏನಾದರೂ ಒಂದನ್ನು ಸೃಷ್ಟಿ ಮಾಡುವವರು. ವಿಚಾರಕ್ಕೆ ಗ್ರಾಸವನ್ನು ಒದಗಿಸುವವರು. ಚರ್ಚೆಯ ವಸ್ತುವಾಗುವುದು. ಬೂಸಾ ಸಾಹಿತ್ಯ ಎಂದು ಹೇಳಿ ನಮ್ಮ ಕರ್ನಾಟಕ ರಾಜ್ಯದಲ್ಲಿ ಒಂದು ವರ್ಷ ಅದು ಚರ್ಚೆಗೆ ಗ್ರಾಸವಾಯಿತು. ಶ್ರೀಮಾನ್ ವಾಟಾಳ್ ನಾಗರಾಜ್‌ರವರು ಹೇಳಿದ

ಹಾಗೆ ಪರಿಸರ ಮತ್ತು ವಿಜ್ಞಾನದ ಇಲಾಖೆಯ ಮಂತ್ರಿಗಳಾದಾಗ ಸದನದಲ್ಲಿ ನಾವು ನಕ್ಕಿದುಂಟು. ಇದು ಯಾವುದೋ ಹೊಸದು ಖಾತೆ, ಇದಕ್ಕೆ ಒಬ್ಬ ಮಂತ್ರಿ ಬೇಕೆ? ಬಸವಲಿಂಗಪ್ಪನವರು ಈ ಖಾತೆಯ ಮಂತ್ರಿಯಾಗಬೇಕು ಎಂದು ಹೇಳಿದಾಗ ಅವರು ಹೇಳಿದ್ದು ಇದಕ್ಕೆ ಸ್ವಲ್ಪ ದಿವಸ ಕಾಯಿರಿ ಎಂದು ಹೇಳಿ ಉತ್ತರವನ್ನು ಕೊಟ್ಟರು. ಅದಕ್ಕೆ ದೊಡ್ಡ ಆಯಾಮವನ್ನೇ ಕೊಟ್ಟರು. ಕರ್ನಾಟಕ ರಾಜ್ಯದಲ್ಲಿ ಬಹುತೇಕ ಕೈಗಾರಿಕಾ ಇಲಾಖೆಯವರು ಕೈಗಾರಿಕೆಯಲ್ಲಿ ಕೆಲಸವನ್ನು ಮಾಡತಕ್ಕಂಥವರು ಮುಖ್ಯಮಂತ್ರಿಗಳ ಬಳಿಗೆ ದೂರು ಒಯ್ಯಬೇಕಾಯಿತು. ನಮಗೆ ಇವರ ಕಾಟ ತಪ್ಪಿಸಿ ಎನ್ನುವ ಒಂದು ಸ್ಥಿತಿಗೆ ಒಂದು ದೊಡ್ಡ ಆಯಾಮವನ್ನೇ ಒದಗಿಸಿದರು. ಇದರ ಹಿಂದೆ ಆ ಮನುಷ್ಯನಿಗೆ ಇದ್ದ ಕಳಕಳಿ ಒಂದು ಉದ್ದೇಶ, ಏನೋ ಮಾಡಬೇಕು ಎಂತಲ್ಲ, ತನಗೆ ಒದಗಿಸಿಕೊಟ್ಟಂಥ ಜವಾಬ್ದಾರಿಯನ್ನು ನಿರ್ವಹಿಸುವ ರೀತಿ ಅದು ಯಾವುದೇ ಇಲಾಖೆ ಇರಲಿ, ಒಂದು ಪ್ರಸಂಗ ನನ್ನ ಮನಸ್ಸಿನಲ್ಲಿ ಇಂದು ಉಳಿದಿದ್ದು ನಾವಿಬ್ಬರೂ ಈ ರಾಜ್ಯದ ಮಂತ್ರಿಮಂಡಲದಲ್ಲಿ ಸದಸ್ಯರಾಗಿದ್ದೆವು ಕೆಲವು ದಿವಸ. ಆ ಕಾಲಕ್ಕೆ ಭೂಶಾಸನ ಮಸೂದೆ ಮೇಲೆ ನಾನು ಅವರ ಜೊತೆ ಖಾಸಗಿಯಾಗಿ ಮಾತನಾಡುತ್ತಾ ಒಂದು ಮಾತನ್ನು ಹೇಳಿದೆ. ಇದರ ಲಾಭ ಪರಿಶಿಷ್ಟ ಜಾತಿ ಮತ್ತು ಜನಾಂಗದವರಿಗೆ ಆಗಲಿಲ್ಲ ಎಂದು. ಆದರೆ ಅವರು ಆ ಮಾತನ್ನು ಒಪ್ಪಲಿಲ್ಲ. ಆಗ ನಾನು ಅವರಿಗೆ ಹೇಳಿದೆ.

ಹರಿಜನ, ಗಿರಿಜನರು, ದಲಿತರು ಕೃಷಿ ಕಾರ್ಮಿಕರೇ ಹೊರತು ಭೂ ಮಾಲೀಕರೂ ಅಲ್ಲ, ಗೇಣಿದಾರರೂ ಅಲ್ಲ ಎಂದು ಮೂರು ತಿಂಗಳಾದ ಮೇಲೆ ನನ್ನ ಮನೆಗೆ ಬಂದು ಚಂದ್ರೇಗೌಡರೆ ನಿಮ್ಮ ಮಾತನ್ನು ನಾನು ಒಪ್ಪುತ್ತೇನೆ. ಎಂದರು. ಇಂತಹ ಅನೇಕ ನಿದರ್ಶನಗಳನ್ನು ನಾವು ಕೊಡಬಹುದು. ಅವರು ಬೊಂಬಾಯಿನ ಆಸ್ಪತ್ರೆಗೆ ಸೇರಿದಾಗಲೇ ಅವರ ಅಂತಿಮ ಯಾತ್ರೆ ಆಗುತ್ತದೆ ಏನೋ ಎಂದು ನಾನು ಅಂದುಕೊಂಡಿದ್ದೆ. ಆದರೆ ಅಲ್ಲಿಂದ ಸುಧಾರಿಸಿದ ಆರೋಗ್ಯ ಇನ್ನೂ ಬಹಳಷ್ಟು ಕಾಲ ಬದುಕತಕ್ಕ ನಿರೀಕ್ಷೆ ಮತ್ತು ಒಂದು ನಂಬಿಕೆ ನಮ್ಮಲ್ಲಿತ್ತು. ಇಷ್ಟುಬೇಗ ಅವರು ನಿಧನರಾಗುತ್ತಾರೆ ಎನ್ನತಕ್ಕಂಥ ವಿಷಯ ನನಗಂತೂ ಒಂದು ರೀತಿಯ ಬರ ಸಿಡಿಲು ಅಪ್ಪಳಿಸಿದ ಹಾಗೆ ಒಂದು ದೊಡ್ಡ ಆಘಾತ. ಇಂತಹ ವಿಚಾರಗಳು ಬಂದಾಗ, ಸಾಮೂಹಿಕ ಬದಲಾವಣೆಯ ವಿಚಾರ ಬಂದಾಗ ಯಾರ ಜೊತೆಗೆ ಚರ್ಚೆ ಮಾಬೇಕು? ಚರ್ಚೆಯನ್ನು ಯಾರ ಜೊತೆಗಾದರೂ ಮಾಡಬಹುದು. ಎಲ್ಲರ ಚರ್ಚೆ ಹೃದಯದಿಂದ ಬರುವುದಿಲ್ಲ,

ನಾಲಿಗೆಯಿಂದ ಬರುತ್ತದೆ. ಆದರೆ ಮಾನ್ಯ ಬಸವಲಿಂಗಪ್ಪನವರ ಚರ್ಚೆ ಹೃದಯದಿಂದ ಬರುತ್ತಿತ್ತು. ವೈಚಾರಿಕವಾಗಿ ಯಾರಿಗೂ ಎರಡನೆಯವರಾಗಿಯೂ ಅವರು ನಡೆದುಕೊಳ್ಳಲಿಲ್ಲ. ನಂಬಿಕೆ ವಿಚಾರಗಳು ಬಂದಾಗ ಯಾರ ಜೊತೆಗೂ ಸೆಣೆಸಾಟಕ್ಕೆ ನಿಂತುಕೊಳ್ಳದೇ ಇರುತ್ತಿದ್ದರು. ವ್ಯಕ್ತಿಗತವಾಗಿ ಹೇಳುವುದಾದರೆ ನನಗೆ ಇನ್ನೂ ಒಂದು ವಿಷಯ ನೆನಪು ಇದೆ. 1992ನೇ ಇಸವಿಯಲ್ಲಿ ನಾನು ಸಂಸತ್ ಸದಸ್ಯನಾಗಿದ್ದೆ. ಸಾಮಾನ್ಯ ಮನುಷ್ಯನ ಬದುಕಿಗೂ ಕೂಡ ಎಷ್ಟು ಆಸಕ್ತಿಯನ್ನು ಅವರು ವಹಿಸುತ್ತಿದ್ದರು, ಅದು ಆ ಕಾಲದಲ್ಲಿ ನನ್ನ ನೆನಪಿನಲ್ಲಿದೆ ಅವರು ಮಾನ್ಯ ನಗರಾಭಿವೃದ್ಧಿ ಮಂತ್ರಿಗಳಾಗಿದ್ದರು. ನನಗೆ ಒಂದು ಪತ್ರವನ್ನು ಕೊಡಿ ಚಂದ್ರೇಗೌಡರೇ, ನಿಮಗೆ ಒಂದು ಸೈಟ್ ಕೊಡುತ್ತೇನೆ ಎಂದರು. ಬೆಂಗಳೂರಿನಲ್ಲಿ ಒಂದು ಸೈಟ್ ಇರಬೇಕು, ಇಂದಲ್ಲ ನಾಳೆ ನೀವು ನಗರಕ್ಕೆ ಬರಬೇಕಾಗುತ್ತದೆ ಎನ್ನುವ ಮಾತನ್ನು ಹೇಳಿದರು. ಆಗ ನಾನು ಬಹಳ ಲಘುವಾಗಿ ಆ ವಿಷಯವನ್ನು ತೆಗೆದುಕೊಂಡೆ, ಮಾಡಲಿಲ್ಲ, 1982–83 ನೇ ಇಸವಿಯಲ್ಲಿ ನಾವು ಅಧಿಕಾರವನ್ನು ಕಳೆದುಕೊಂಡಾಗ ನಿವೇಶನಕ್ಕೆ ಹುಡುಕಾಟ ಶುರುವಾಯಿತು. ಆಗ ಮಾನ್ಯ ಬಸವಲಿಂಗಪ್ಪನವರಿಗೆ ಫೋನ್ ಮಾಡಿ ನೀವು ಕೊಟ್ಟ ಆದೇಶ ಎನ್ನಲೋ ನೀವು ಕೊಟ್ಟಂತಹ ಬುದ್ಧಿವಾದವನ್ನು ನಾವು ಮಾಡಲಿಲ್ಲ, ಈಗ ತೀರಾ ಸಂಕಟಕ್ಕೆ ಸಿಕ್ಕಿದ್ದೇವೆ ಎಂದು ಹೇಳಿದೆ. ಆಮೇಲೆ ನಾವೇ ರಚಿಸಿಕೊಂಡ ಸಹಕಾರ ಸಂಘ ನಮ್ಮ ಸಹಾಯಕ್ಕೆ ಬಂತು. ಅಷ್ಟರಮಟ್ಟಿಗೆ ವ್ಯಕ್ತಿ ಜೀವನದಲ್ಲಿ ಯಾರನ್ನಾದರೂ ಒಂದು ವಿಶ್ವಾಸಕ್ಕೆ ತೆಗೆದುಕೊಂಡರೆ ಆ ಮನುಷ್ಯನ ಬದುಕಿನಲ್ಲೂ ಕೂಡ ಚೆನ್ನಾಗಿ ಇರಬೇಕು ಎಂದು ಹೇಳುವ ಸ್ವಭಾವ ಇದ್ದಂತಹ ಒಬ್ಬ ಮಹಾನ್ ವ್ಯಕ್ತಿ. ಶ್ರೀಮಾನ್ ವಾಟಾಳ್ ನಾಗರಾಜ್ ಅವರು ಸಲಹೆ ಮಾಡಿದ ಹಾಗೆ ಅವರ ಹೆಸರಿನಲ್ಲಿ ಒಂದು ದತ್ತಿಯನ್ನು ಪ್ರಾರಂಭ ಮಾಡಬೇಕು. ಮುಂದೆ ಆ ದಿಸೆಯಲ್ಲಿ ಕೆಲಸ ಮಾಡತಕ್ಕಂಥವರಿಗೆ ಅದು ಉತ್ಸಾಹದ ಚಿಲುಮೆ ಆಗುತ್ತದೆ. ದತ್ತಿಗಳನ್ನು ಅನೇಕ ಪ್ರಾರಂಭ ಮಾಡಿದ್ದೇವೆ. ಆ ಚಿಲುಮೆಯಿಂದ ಇವರ ಚಿಂತನೆಗಳು ಏನು ಮೂಡಿ ಬಂದಿದ್ದಾವೆ, ಅಭಿವ್ಯಕ್ತನಾಗಿದ್ದಾನೆ, ಅಥವಾ ಹಮ್ಮಿಕೊಡಿದ್ದರು, ಈ ಕಾರ್ಯಾಚರಣೆಯ ವಿವಿಧ ಮುಖಗಳಿಗೆ ಆಯಾಮವನ್ನು ಒದಗಿಸತಕ್ಕಂಥ ಒಂದು ಕಾರ್ಯಕ್ಷೇತ್ರ ಆಗುವಂತೆ ಸರ್ಕಾರ ಪ್ರಯತ್ನಿಸುತ್ತದೆ ಎಂದು ಹೇಳಿ ನನಗೆ ಅಭಿಪ್ರಾಯಗಳನ್ನು ಅಭಿವ್ಯಕ್ತ ಮಾಡುವುದಕ್ಕೆ ಅವಕಾಶ ಕೊಟ್ಟು ತಮಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀ ಎಂ.ನಾರಾಯಣಸ್ವಾಮಿ (ಬೇತಮಂಗಲ):– ಮಾನ್ಯ ಅಧ್ಯಕ್ಷಣಿಯವರೇ, ನಿಜವಾಗಿಯೂ ದಿವಂಗತ ಬಸವಲಿಂಗಪ್ಪನವರು ವಿಚಾರವನ್ನು ನೆನೆಸಿಕೊಂಡಾಗ ಮೈಯೆಲ್ಲಾ ಜುಮ್ ಎನ್ನುತ್ತದೆ. ಮನಸ್ಸಿಗೆ ಆಘಾತವನ್ನು ಉಂಟು ಮಾಡತಕ್ಕ ವಿಚಾರ ಕೂಡ ಆಗಿದೆ. ಮಾನ್ಯ ಬಸವಲಿಂಗಪ್ಪನವರ ನಿಧನ ನಮ್ಮ ರಾಜ್ಯದ ನಮ್ಮ ದೇಶದ ದೊಡ್ಡ ದುರಂತ ಎಂದು ಹೇಳಿದರೆ ತಪ್ಪಾಗಲಾರದು. 1980ರ ದಶಕ ಮತ್ತು 1990ರ ದಶಕ ಇಡೀ ನಮ್ಮ ರಾಜ್ಯದ ಧೈರ್ಯವಂತ, ಅಥವಾ ಬುದ್ಧಿಜೀವಿಗಳಲ್ಲಿ ಒಬ್ಬರಾಗಿರತಕ್ಕ ವ್ಯಕ್ತಿ 1982ರ ಜೂನ್ ಆರನೇ ತಾರೀಖಿನಂದು ಶ್ರೀಮಾನ್ ದೇವರಾಜ್ ಅರಸ್ ಅವರ ಮರಣ. 1992ರ ಡಿಸೆಂಬರ್ 26–77 ರಲ್ಲಿ ಮಾನ್ಯ ಬಸವಲಿಂಗಪ್ಪನವರ ಮರಣ. ನಾನು ಏಕೆ ಇದನ್ನು ಪ್ರಸ್ತಾಪ ಮಾಡಿದೆ ಎಂದರೆ ನಿಜವಾಗಿಯೂ ಕೂಡ ಒಬ್ಬ ದಕ್ಷ ವ್ಯಕ್ತಿ. ಅಥವಾ ಸಾಹಸೀ ವ್ಯಕ್ತಿ ಅಥವಾ ವಿಚಾರವಂತ ವ್ಯಕ್ತಿ ಎಂದು ನಾವು ಕರೆಯುತ್ತೇವೆ. 1980ರ ದಶಕದಲ್ಲಿ ಶ್ರೀಮಾನ್ ದೇವರಾಜ್ ಅರಸ್ ಅವರ ನಿಧನದಿಂದ ನಷ್ಟ ಆಯಿತು. 1990ರ ದಶಕದಲ್ಲಿ ನಮ್ಮಂತಹ ಶಾಸಕರಿಗೆ ಯುವಕ ಮಿತ್ರರಿಗೆ ಕೂಡಾ ಮಾನ್ಯ ಬಸವಲಿಂಗಪ್ಪನವರ ನಿಧನದಿಂದ, ನಾವೆಲ್ಲರೂ ಕೂಡ ವಂಚಿತರಾಗಿದ್ದೇವೆ. ನಾನು ಹೆಚ್ಚಾಗಿ ವಿಷಯವನ್ನು ಪ್ರಸ್ತಾಪ ಮಾಡುವುದಕ್ಕೆ ಹೋಗುವುದಿಲ್ಲ. ಆದರೂ ಕೂಡ ವಿಧಿಯ ವಿಲಾಸ, ಮನುಷ್ಯ ಕಾಲ ಚಕ್ರದಲ್ಲಿ ಅಸಹಾಯಕ. ಆ ಮನುಷ್ಯ ಎಷ್ಟು ದೊಡ್ಡವನಾಗಿರಬಹುದು ಆ ಕಾಲ ಚಕ್ರಕ್ಕೆ ಮಣಿಯಬೇಕು. ಆ ಕಾಲಚಕ್ರದಲ್ಲಿ ಈ ವಿಧಿಯ ಕೈವಾಡದಿಂದ ವಶ ಆಗತಕ್ಕದ್ದು ಒಂದು ದೊಡ್ಡ ನಗ್ನ ಚರಿತ್ರೆ ಕೂಡ.

ದಿವಂಗತ ಬಸವಲಿಂಗಪ್ಪನವರು ಕೂಡ ಸುಮಾರು ವರ್ಷಗಳಿಂದ ನನಗೆ ಪರಿಚಯ ಇಲ್ಲದೆ ಇರಬಹುದು. ಆದರೂ ಕೂಡ 1978ರಲ್ಲಿ ದಿವಂಗತ ದೇವರಾಜ್ ಅರಸುರವರ ಸಂಪುಟವನ್ನು ರಚನೆ ಮಾಡಿದಾಗ ರಾಜ್ಯಾದ್ಯಂತ ಎಲ್ಲಾ ಕಡೆ ಬಸವಲಿಂಗಪ್ಪನವರು ಇದ್ದಾರೆ, ಮುಖ್ಯಮಂತ್ರಿಯವರನ್ನು ಆಯ್ಕೆ ಮಾಡುವಾಗ ಏನೇನೋ ದುರಂತ ಆಗುತ್ತದೆ ಎನ್ನುವ ಪ್ರಬಲವಾದ ಶಂಕೆ ಜನರಲ್ಲಿ ಇರತಕ್ಕ ಪರಿಸ್ಥಿತಿಯಲ್ಲಿ 1978ರಲ್ಲಿ ದೇವರಾಜ್ ಅರಸುರವರು ಕೂಡ ಎರಡನೆಯ ಭಾರಿ ಅವರೇ ಸೂಚನೆಯನ್ನು ಕೊಟ್ಟಿದ್ದಾರೆ. ಮುಖ್ಯಮಂತ್ರಿಯಾಗಿ ದಿವಂಗತ ದೇವರಾಜ್ ಅರಸು ಅವರು ಆಯ್ಕೆಯಾಗಿ ಇವರನ್ನು ಸಂಪುಟಕ್ಕೆ ತೆಗೆದುಕೊಂಡಾಗ ಅವರು ಸುವರ್ಣಾಕ್ಷರದಲ್ಲಿ ಬರೆಯತಕ್ಕ ಒಂದು ಇತಿಹಾಸ

ಮಾನ್ಯ ಬಸವಲಿಂಗಪ್ಪನವರಿಗೆ ಬಂತು. ಮತ್ತೆ ನಾನು ಎಂ.ಎಲ್.ಎ ಆದ ಮೇಲೂ ಕೂಡ ಅವರು ಡಿಸೆಂಬರ್ 22, 1989ರಲ್ಲಿ ರೆಸಿಡೆನ್ಸಿ ಹೋಟೆಲ್‌ನಲ್ಲಿ ಕೂಡ ನಮ್ಮೆಲ್ಲರ ಶಾಸಕರ ಸಭೆಯನ್ನು ಕೂಡ ಏರ್ಪಾಡು ಮಾಡಿದರು. ಮತ್ತೆ ಅಲ್ಲಿಯೂ ಕೂಡ ನಾನು ಅವರ ಪರಿಚಯವನ್ನು ಮಾಡಿಕೊಂಡೆ. ನೀನು ಎಲ್ಲಿಂದ ಬಂದೆ, ಯಾವ ಹಳ್ಳಿಯಿಂದ ಬಂದೆ ಎಂದು ಕೇಳಿದರು, ಏಕೆಂದರೆ ಅನೇಕ ಸಾರಿ ಅವರಿಂದ ಫೋನ್ ಕರೆ ಬಂತು. ಏನಪ್ಪ ನಾನು ಜನತಾದಳಕ್ಕೆ ಸೇರಿದ್ದೇನೆ, ಕಾಂಗ್ರೆಸ್ ಪಕ್ಷದ ದೊಡ್ಡ ಮಂತ್ರಿ ಅವರು ಆಗಿದ್ದಾಗ ಏಕೆ ಎಂದು ನಾನು ಮುಜುಗರಕ್ಕೆ ಸಿಕ್ಕಿಹಾಕಿಕೊಂಡಿದ್ದೇನೆ. ಅವರು ಹೇಳಿದರು, ಬನ್ನಿರಿ ಎಲ್ಲಿದೆ ಕಾಂಗ್ರೆಸ್, ದಳ ಅಂತ ಇಲ್ಲಿ ಕುಳಿತು ಏನಾದರೂ ಓದಪ್ಪ ನೀನು ಬರೀ ಎಂ.ಎಲ್.ಎ ಆಗಿದ್ದರೆ ಸಾಲದು ಏನಾದರೂ ಪುಸ್ತಕ ಓದದ ಹೊರತು ಅಸೆಂಬ್ಲಿಯನ್ನು ನೀನು ಸ್ಪರ್ಧೆ ಮಾಡಲಿಕ್ಕೆ ಆಗುವುದಿಲ್ಲ ಆದ್ದರಿಂದ ನೀನು ಓದಬೇಕು ಅಂತ ಅನೇಕಸಾರಿ ಕೂಡ ಬುದ್ಧಿವಾದ ಹೇಳಿದರು. ಅವರು ಹೇಳಿರತಕ್ಕದ್ದನ್ನು ನಾನು ನಿಜವಾಗಿ ಹೇಳುತ್ತೇನೆ. ದೊಡ್ಡ ಮಂತ್ರಿ ಪದವಿ ಸಿಕ್ಕಿದರೆ ಒಬ್ಬ ಶಾಸಕರು ಸಿಕ್ಕಿ, ಮಂತ್ರಿಗಳಿಗೆ ನಮಸ್ಕಾರ ಅಂದರೂ ಸಹ ನಮಸ್ಕಾರ ಅನ್ನುವುದಿಲ್ಲ. ಏಕೆಂದರೆ ಅಷ್ಟು ಮೇಲ್ಮಟ್ಟಕ್ಕೆ ಹೋಗಿರುತ್ತಾರೆ. ಏಕೆಂದರೆ ಟೀಕೆ ಅಂತು ಮಾಡುತ್ತಿಲ್ಲ. ಯಾವುದೇ ಒಂದು ದೊಡ್ಡ ಮಂತ್ರಿಗಳು ಆಗಿದ್ದ ತಕ್ಷಣ ಆಯಿತು ಅಂತ ಹೇಳುತ್ತಾರೆ 'ಆದರೆ ಅವರು ಎಷ್ಟು ಹಿರಿಯರು, ಎಷ್ಟೇ ದೊಡ್ಡ ಮಂತ್ರಿಯಾಗಿದ್ದರೂ ಕೂಡ ಸಿಕ್ಕಿದಾಗ ತಕ್ಷಣ ಬನ್ನಿರಿ ಏನಪ್ಪ ಸಮಾಚಾರ ಏನು ಬೇಕು, ಕನಿಷ್ಠ ಈ ವಿಚಾರ ಮಾಡತಕ್ಕವರ ಒಂದು ದೊಡ್ಡ ಸಾಲಿನಲ್ಲಿ ಸೇರತಕ್ಕ ಒಬ್ಬ ಧೀಮಂತ ನಾಯಕ, ಕೆಚ್ಚೆದೆಯ ವೀರ ಎನ್ನುವುದು ಕೂಡ ನನ್ನ ಭಾವನೆ. ನಾನು ಈ ಸದನವನ್ನು ಯಾವುದೇ ರೀತಿ ಟೀಕೆಯನ್ನು ಮಾಡುವುದಕ್ಕೆ ಇಷ್ಟವಿಲ್ಲ. ಆದರೂ ಕೂಡ ಜ್ಞಾಪಿಸಲಿಕ್ಕೆ ನಾನು ಪ್ರಯತ್ನ ಮಾಡುತ್ತೇನೆ. 1982ರಲ್ಲಿ ದಿವಂಗತ ದೇವರಾಜ ಅರಸು ಸತ್ತಾಗ ಮಾನ್ಯ ಗುಂಡೂರಾಯರು ಕೂಡ ಈ ಸದನದಲ್ಲಿ ಆಶ್ವಾಸನೆಯನ್ನು ಕೊಟ್ಟಿದ್ದರು. ದಿವಂಗತ ದೇವರಾಜ್ ಅರಸುರವರ ಪ್ರತಿಭೆಯನ್ನು ಇಲ್ಲಿ ವಿಧಾನ ಸೌಧದ ಮುಂದುಗಡೆ ಅನಾವರಣ ಮಾಡುತ್ತೇವೆಂದು ಹೇಳಿದರು. ಆದರೂ ಕೂಡ ಇವತ್ತಿನವರೆಗೂ ನೆರವೇರಲಿಲ್ಲ. ಸುಮಾರು 10 ವರ್ಷಗಳಿಂದಲೂ ನೆರವೇರಲಿಲ್ಲ. ದಿವಂಗತ ಬಸವಲಿಂಗಪ್ಪನವರ ವಿಚಾರ ಸರ್ಕಾರದ ಕಾರ್ಯಕ್ರಮದಲ್ಲಿ ನಡೆಯಬೇಕು ಎಂದು ನಾವೆಲ್ಲರೂ ಕೂಡ ಅಂದುಕೊಂಡಿದ್ದೇವೆ, ಆದರೆ ಅದು ಕಾರ್ಯಗತ ಆಗುತ್ತದೆಯೇ ಎನ್ನುವುದು

ಒಂದು ಪ್ರಶ್ನೆ. ಆದ್ದರಿಂದ ದಯಮಾಡಿ ಈ ಸದನದಲ್ಲಿ ಏನು ಆಶ್ವಾಸನೆಯನ್ನು ಕೊಡುತ್ತಾರೋ ಆ ಆಶ್ವಾಸನೆಗೆ ತಕ್ಕಹಾಗೆ ಕಾರ್ಯಕ್ರಮ ರೂಪಿಸತಕ್ಕ ಪದ್ಧತಿ ಜಾರಿಗೆ ಬರಲಿ ಎಂದು ಒತ್ತಾಯಿಸಿ, ನಮ್ಮ ದಿವಂಗತ ಬಸವಲಿಂಗಪ್ಪನವರು ಚಿರನಿದ್ದೆಯಲ್ಲಿರತಕ್ಕ ಈ ಸಂದರ್ಭದಲ್ಲಿ ನಾವೆಲ್ಲರೂ ಕೂಡ ಅವರ ಆತ್ಮಕ್ಕೆ ಶಾಂತಿಯನ್ನು ಕೋರಿ ಅವರ ಕುಟುಂಬವರ್ಗದವರಿಗೆ ಅವರ ಅಗಲಿಕೆಯನ್ನು ಸಹಿಸುವ ಶಕ್ತಿಯನ್ನು ಭಗವಂತನು ಕೊಡಲೆಂದು ನಾನು ಹಾರೈಸಿ ತಾವು ಮಂಡಿಸಿರತಕ್ಕ ಸಂತಾಪ ಸೂಚನೆ ನಿರ್ಣಯಕ್ಕೆ ನಾನು ನನ್ನ ಸಹ ಮತವನ್ನು ವ್ಯಕ್ತಿಮಾಡಿ ನನ್ನ ಭಾಷಣವನ್ನು ಮುಗಿಸುತ್ತೇನೆ.

**ಉಪಾಧ್ಯಕ್ಷಣಿಯವರು:–** ಮೃತ ಸದಸ್ಯರ ಕುಟುಂಬ ವರ್ಗದವರಿಗೆ ಈ ಸಭೆ ಅಂಗೀಕರಿಸಿದ ಸಂತಾಪಸೂಚಕ ಸಭೆಯ ನಿರ್ಣಯವನ್ನು ಕಳುಹಿಸಲಾಗುವುದು, ಸಭೆಯು ಈಗ ಮುಕ್ತಾಯವಾಗಿ ನಾಳೆ ಬೆಳಿಗ್ಗೆ 11 ಗಂಟೆಗೆ ಪುನಃ ಸಮಾವೇಶಗೊಳ್ಳುವುದು.

## ಕರ್ನಾಟಕ ವಿಧಾನ ಪರಿಷತ್ತು

## ಬುಧವಾರ 30ನೇ ಡಿಸೆಂಬರ್ 1992

ಸದನವು ವಿಧಾನ ಸೌಧದಲ್ಲಿರುವ ವಿಧಾನ ಪರಿಷತ್ತಿನ
ಸಭಾಂಗಣದಲ್ಲಿ ಮಧ್ಯಾಹ್ನ 1–05 ಗಂಟೆಗೆ ಸಮಾವೇಶಗೊಂಡಿತ್ತು
ಹಂಗಾಮಿಸಭಾಪತಿಯವರು (ಶ್ರೀ ಬಿ.ಆರ್. ಪಾಟೀಲ್)
ಪೀಠವನ್ನು ಅಲಂಕರಿಸಿದರು.

**ಹಂಗಾಮಿಸಭಾಪತಿಯವರು:–** ಹಿರಿಯ ರಾಜಕಾರಣಿ, ಸಂಸದೀಯ ಪಟು, ಪುಸ್ತಕ ವಿಧಾನಸಭೆಯ ಸದಸ್ಯರು ಹಾಗೂ ಮಾಜಿ ಮಂತ್ರಿಗಳೂ ಆದ ಶ್ರೀ ಬಿ. ಬಸವಲಿಂಗಪ್ಪ ದಿನಾಂಕ 27 ನೇ ಡಿಸೆಂಬರ್, 1992ರಂದು ಬೆಂಗಳೂರಿನಲ್ಲಿ ನಿಧನರಾದರು.

ಮಾನ್ಯರು 1957ರಿಂದ 1962, 1972 ರಿಂದ 1977, 1978–83, 1985–89 ಹಾಗೂ 1989–92 ರ ಅವಧಿಗಳಲ್ಲಿ ವಿಧಾನಸಭೆಗೆ ಯಲಹಂಕ ಕ್ಷೇತ್ರವನ್ನು ಪ್ರತಿನಿಧಿಸಿ, ಗೃಹ, ಕಂದಾಯ, ಗ್ರಾಮೀಣಾಭಿವೃದ್ಧಿ, ಪಂಚಾಯತ್ ರಾಜ್ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರಾಗಿ ಸೇವೆ ಸಲ್ಲಿಸಿರುವುದರ

ಜೊತೆಗೆ ಬೆಂಗಳೂರು ನಗರಸಭಾ ಸದಸ್ಯರಾಗಿ ಪೀಪಲ್ಸ್ ಎಜುಕೇಷನ್ ಸೊಸೈಟಿಯ ಆಡಳಿತಮಂಡಳಿಯ ಸ್ಥಾಪಕರು ಹಾಗೂ ಸದಸ್ಯರಾಗಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರಿಗೆ ಮೀಸಲಾತಿ ಸೌಲಭ್ಯ ಸಿಗಲು ಕಾರಣಕರ್ತರಾಗಿ, ಭೂಸುಧಾರಣಾ ವರದಿ ಮತ್ತು ಭೂಸುಧಾರಣಾ ಶಾಸನದ ಲೇಖಕರುಗಳಲ್ಲೊಬ್ಬರಾಗಿ, ದೀನದಲಿತರು ಹಾಗೂ ಶೋಷಿತ ವರ್ಗದ ಪುರೋಭಿವೃದ್ಧಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದರು. ಶ್ರೀಯುತರು ಜೀತದಾಳುಗಳಿಗೆ ಪುನರ್ ವಸತಿಕಲ್ಪಿಸುವ ಹಾಗೂ ಉದ್ಯೋಗದ ಖ್ಯಾತಿಗಾಗಿ ಕೃಷಿ ವಿಧೇಯಕದ ಎಸ್ಟೇಟುಗಳ ಸ್ಥಾಪಕರಾಗಿ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದ ಕೀರ್ತಿ ಶ್ರೀಯುತರದಾಗಿರುತ್ತದೆ.

**ಶ್ರೀ ಎಂ. ವೀರಪ್ಪ ಮೊಯಿಲಿ (ಮುಖ್ಯ ಮಂತ್ರಿಗಳು):-** ಸನ್ಮಾನ್ಯ ಸಭಾಪತಿಯವರೇ, ಈ ದಿವಸ ನಾವು ಅತ್ಯಂತ ದುಃಖದ ಸಂದರ್ಭದಲ್ಲಿ ಸೇರಿದ್ದೇವೆ. 1992ನೇ ಇಸವಿಯಲ್ಲಿ ಈ ರಾಷ್ಟ್ರದ ಈ ರಾಜ್ಯದ ಮೇರು ವ್ಯಕ್ತಿತ್ವವುಳ್ಳ ಅನೇಕ ವ್ಯಕ್ತಿಗಳು, ನಾನಾ ಕ್ಷೇತ್ರಗಳಲ್ಲಿ ತಮ್ಮದೇ ಆದಂಥ ವ್ಯಕ್ತಿತ್ವದಿಂದ. ತಮ್ಮದೇ ಆದಂಥ ಸಾಧನೆಯಿಂದ, ಚಿಂತನೆಗಳಿಂದ ಈ ರಾಷ್ಟ್ರದ ಜೀವನದ ಮೌಲ್ಯಗಳನ್ನು ಹೆಚ್ಚಿಸಿರುವ ಮಹಾಪುರುಷರನ್ನು ನಾವಿಂದು ಕಳೆದು ಕೊಂಡಿದ್ದೇವೆ. ಇದು ರಾಷ್ಟ್ರದ, ಮತ್ತು ನಮ್ಮ ರಾಜ್ಯದ ದುರ್ದೈವವೆಂದು ನಾನು ಇವೊತ್ತು ಹೇಳಲೇಬೇಕಾಗಿದೆ. ಶ್ರೀಯುತರುಗಳಾದ ಡಾ॥ ಹಿದಾಯತುಲ್ಲಾ ಬಿ. ಬಸವಲಿಂಗಪ್ಪ, ಪಂಡಿತ ಮಲ್ಲಿಕಾರ್ಜುನ ಮನ್ಸೂರ್, ವಿವೇಕಾನಂದಯ್ಯ, ಅಚ್ಯುತ ಪಟವರ್ಧನ್, ಡಾ॥ ಗೋಪಾಲಕೃಷ್ಣ ಅಡಿಗ. ಬಾಳಪ್ಪ ಹುಕ್ಕೇರಿ ಮತ್ತು ಹೊನ್ನಪ್ಪ ಭಾಗವತರ್. ಡಾ॥ ಹಿದಾಯತುಲ್ಲಾರವರು ಭಾರತದ ಮಾಜಿ ಉಪ ರಾಷ್ಟ್ರಪತಿ ಮಾತ್ರವಲ್ಲ ಅವರು ಭಾರತದ ಶ್ರೇಷ್ಠ ನ್ಯಾಯಾಲಯದಲ್ಲಿ ಶ್ರೇಷ್ಠ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿದ್ದರು ಮತ್ತು ನಾಗರಿಕ ಹಕ್ಕುಗಳ ವಿಚಾರದಲ್ಲಿ ಯಾವಾಗಲೂ ಕೂಡ ಹೋರಾಟ ಮಾಡಿದಂಥವರು, ಆ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದಂಥವರು ಮತ್ತು ಈಗ ಕೋಮು, ಹಿಂಸಾಚಾರ ಸಾಮಾಜಿಕವಾಗಿ ಸಂಘರ್ಷಗಳು ನಡೆಯುವಂಥ ಈ ಸಂದರ್ಭದಲ್ಲಿ ಇಂಥ ವ್ಯಕ್ತಿಗಳು ಬಹಳ ಪ್ರಸಕ್ತರಾಗಿದ್ದರು. ಮತ್ತು ಇಂತಹ ಅನಿಷ್ಟಗಳನ್ನು ತೊಡೆದು ಹಾಕುವಲ್ಲಿ ತಮ್ಮ ಜೀವನವಿಡೀ ಹೋರಾಟ ಮಾಡುವಂಥ ವ್ಯಕ್ತಿಗಳಾಗಿದ್ದರು. ಇನ್ನು ಶ್ರೀ ಬಸವಲಿಂಗಪ್ಪನವರು ಮೊನ್ನೆ ಮೊನ್ನೆ ತನಕ ನಮ್ಮ ಎದುರಿನಲ್ಲಿದ್ದು ಈಗ ಕಣ್ಮರೆಯಾಗಿದ್ದಾರೆ. ಶ್ರೀ ಬಸವಲಿಂಗಪ್ಪನವರು ಯಾವಾಗಲೂ

ಕೂಡ ವಿಶೇಷವಾಗಿ ಸುದ್ದಿ ಮಾಡತಕ್ಕವರು. ಅವರು ಒಬ್ಬ ಧೀಮಂತ ಹೋರಾಟಗಾರರಾಗಿದ್ದರು. ಅವರು ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಯಾವಾಗಲೂ ಮುಂಚೂಣಿಯಲ್ಲಿದ್ದರು. ಸುಮಾರು ನಾಲ್ಕು ದಶಕಗಳ ಕಾಲ ಕರ್ನಾಟಕ ರಾಜ್ಯದಲ್ಲಿ ಬಸವಲಿಂಗಪ್ಪನವರು ಅವರದೇ ಆದ ಒಂದು ವ್ಯಕ್ತಿತ್ವವನ್ನು ಹೊಂದಿದ್ದರು. ಒಂದು ವರ್ಣಮಯ ವ್ಯಕ್ತಿತ್ವ, ಶಕ್ತಿಮಾನ್ ವ್ಯಕ್ತಿತ್ವ ಮತ್ತು ತಾವು ನಂಬಿದಂಥ ಸಿದ್ಧಾಂತಗಳ ಬಗ್ಗೆ ಅಥವಾ ತಾವು ನಂಬಿದಂಥ ವಿಷಯಗಳ ಬಗ್ಗೆ ಯಾವಾಗಲೂ ಕೂಡ ಅವರು ಕಾಂಪ್ರಮೈಸ್ ಮಾಡಿದವರು ಅಲ್ಲ. ಒಪ್ಪಂದ ಮಾಡಿದವರು ಅಲ್ಲ. ಏನು ಈ ದಲಿತ ಚಳುವಳಿ ಕರ್ನಾಟಕದಲ್ಲಿ ಪ್ರಾರಂಭವಾಗಿದೆ. ಅದಕ್ಕೆ ಒಂದು ರೀತಿಯಲ್ಲಿ ದೀನ ದಲಿತರ ಹಕ್ಕು ಬಗ್ಗೆ ಪ್ರಶ್ನೆ ಮತ್ತು ಅದನ್ನು ಸಾಧನೆ ಮಾಡತಕ್ಕ ಒಂದು ಹೋರಾಟ ಮಾಡತಕ್ಕ ಮನೋಭೂಮಿಕೆ, ಅದು ಕರ್ನಾಟಕದಲ್ಲಿ ಹುಟ್ಟು ಹಾಕಿದಂಥವರು ಶ್ರೀಮಾನ್ ಬಸವಲಿಂಗಪ್ಪನವರು, ಅದರ ಜೊತೆಯುಲ್ಲಿಯೇ ಕೆಲಸ ಮಾಡಿದಂಥವರು ಶ್ರೀ ಬಸವಲಿಂಗಪ್ಪನವರು. He has been a pioneer. He has done pioneering work in the Dalit Movement. ಅಂತ ಹೇಳಿದರೆ ಅದು ಖಂಡಿತವಾಗಿ ಅತಿಶಯೋಕ್ತಿಯಾಗಲಾರದು. ಅವರು ಯಾವಾಗಲೂ ಬಿಚ್ಚು ಮನಸ್ಸಿನವರಾಗಿದ್ದರು. ಆ ಸದನದಲ್ಲಿ ಆಗಲಿ ಈ ಸದನದಲ್ಲೇ ಆಗಲಿ, ಇಲ್ಲಿ ಮಂತ್ರಿಗಳಾಗಿ ಯಾವಾಗಲೂ ಕೂಡ ಹಿಡಿದ ಪಟ್ಟನ್ನು ಅವರು ಬಿಡುತ್ತಿರಲಿಲ್ಲ. ಅನೇಕ ಬಾರಿ ಅವರು ಅಲೆಗಳ ಜೊತೆಯಲ್ಲಿ ತಳ್ಳಿಕೊಂಡು ಹೋಗತಕ್ಕ ಜನ ಅಲ್ಲ ಅಲೆಗಳ ವಿರುದ್ಧವಾಗಿ ಈಜಾಡಿ ಗೆಲ್ಲಲೇಬೇಕು ಎಂಬ ಹಠವನ್ನು ಯಾವಾಗಲೂ ಬೆಳಸಿಕೊಂಡಿದ್ದರು. ಆ ರೀತಿಯ ಸಂಕಲ್ಪ ಅವರದಾಗಿತ್ತು. ಈ ರೀತಿಯ ಮಾನಸಿಕ ಇಚ್ಛಾಶಕ್ತಿ ಅವರಲ್ಲಿತ್ತು That kind of revolting mentality ಅವರಲ್ಲಿ ಇತ್ತು. ಬಸವಲಿಂಗಪ್ಪನವರಲ್ಲಿ ಯಾವಾಗಲೂ ಕೂಡ ಆ ಸ್ಪಿರಿಟ್ ಜ್ವಲಿಸುತ್ತಿತ್ತು. ಅದು ಕೊನೆಯವರೆಗೂ ತಣ್ಣಗಾಗಲೇ ಇಲ್ಲ. ಆ ರೀತಿಯ ಛಲ. ಆ ರೀತಿಯ ಒಂದು ಇಚ್ಛಾ ಶಕ್ತಿಯನ್ನು ಬಸವಲಿಂಗಪ್ಪನವರು ಉಳಿಸಿಕೊಂಡಿದ್ದರು. ಶ್ರೀ ಬಸವಲಿಂಗಪ್ಪನವರಲ್ಲಿ ಅವರದೇ ಆದ ವ್ಯಕ್ತಿತ್ವ ಇತ್ತು ಅದನ್ನು ಮತ್ತೊಬ್ಬರ ಜೊತೆಯಲ್ಲಿ ಹೋಲಿಸಲು ಸಾಧ್ಯವಿಲ್ಲ ಎಂಬುದನ್ನು ಖಂಡಿತವಾಗಿ ನಾವು ಒಪ್ಪಿಕೊಳ್ಳಲೇ ಬೇಕು. ಈ ರಾಜ್ಯದಲ್ಲಿ ಅವರ ಕೊಡುಗೆ ಏನೆಂಬುದು ಎಲ್ಲರಿಗೂ ಗೊತ್ತಿದೆ. ದುರ್ಬಲ ವರ್ಗವದರ ಒಂದು ಜೀವನವನ್ನು ಎದುರಿಸಲು ಅಪಾರವಾಗಿ ಅವರು ಶ್ರಮಿಸಿದ್ದಾರೆ. ಅದರಲ್ಲಿ ಮಾನಸಿಕವಾಗಿ

ಕೂಡ ಶಕ್ತಿಯನ್ನು ಹೆಚ್ಚಿಸಲು ಆರ್ಥಿಕವಾಗಿ ಸಾಮಾಜಿಕವಾಗಿ ಈ ರಾಷ್ಟ್ರದ ಮೂಲ ಪ್ರವಾಹದಲ್ಲಿ ಜನರನ್ನು ಕೊಂಡೊಯ್ಯುವಲ್ಲಿ ಅವರು ಖಂಡಿತವಾಗಿ ತನ್ನದೇ ಆದಂಥ ಕೊಡುಗೆಯನ್ನು ಬಸವಲಿಂಗಪ್ಪನವರು ಕೊಟ್ಟಿದ್ದಾರೆ. ಅವರ ಹೆಸರು ದುರ್ಬಲವರ್ಗದವರ ಮನಸ್ಸಿನಲ್ಲಿ ಸದಾ ಹಸಿರಾಗಿ ಉಳಿಯುತ್ತದೆ ಎಂಬುದನ್ನು ನಾನು ಈವತ್ತು ಹೇಳಲಿಕ್ಕೆ ಇಷ್ಟಪಡುತ್ತೇನೆ. ಸನ್ಮಾನ್ಯ ಬಸವಲಿಂಗಪ್ಪನವರು ನಮ್ಮ ಜೊತೆಯಲ್ಲೇ ಯಾವಾಗಲೂ ಇದ್ದಾರೆಂದೇ ನಾವು ತಿಳಿದುಕೊಂಡಿದ್ದೇವೆ. ಅವರು ನೆಚ್ಚಿಕೊಂಡಂಥ ತತ್ವ, ಸಿದ್ಧಾಂತ, ಹೋರಾಟದ ಮನಸ್ಸು..... ಏಕೆಂದರೆ ನಾನು ತಿಳಿದುಕೊಂಡಿರುವ ಮಟ್ಟಿಗೆ ದುರ್ಬಲವರ್ಗದವರಲ್ಲಿ ಹೋರಾಟದ ಮನಸ್ಸು ಇದ್ದಾಗ ಮಾತ್ರ ಆ ಜನರ ಉದ್ಧಾರ ಸಾಧ್ಯ. ನಾವು ಎಷ್ಟೇ ಭೌತಿಕವಾದಂಥ ಸವಲತ್ತನ್ನು ಒದಗಿಸಬಹುದು ಆದರೆ ನಿಚ್ಚಳವಾಗಿರತಕ್ಕಂಥ ಹೋರಾಟದ ಮನಸ್ಸು ಈ ಸಮಾಜದ ಅನಿಷ್ಟಗಳಿಗೆ ವಿರುದ್ಧವಾಗಿ ಅಥವಾ ಸಮಾಜದ ಏನು ಒಂದು ಒತ್ತಡ ಅನೇಕ ಶತಮಾನಗಳಿಂದ ಆ ಜನರ ಮೇಲೆ ಬಿದ್ದಿದೆಯೋ ಅದನ್ನು ಒದ್ದು ಮೇಲೆ ಬರಬೇಕಾದರೆ ಬಹುಶಃ ಬಹಳ ಶಕ್ತಿ ಇರಬೇಕಾಗುತ್ತವೆ. ಇಲ್ಲದಿದ್ದರೆ ಆ ಸಮಾಜದ ಅನೇಕ ರೀತಿಯ ಒತ್ತಡಗಳಿಂದ ಅದು ಜಗ್ಗಿ ಹೋಗುತ್ತದೆ. ಅದನ್ನು ತಡೆಗಟ್ಟಿ ಮುಂದೆ ಬರಬೇಕಾದರೆ ಬರೇ ಆರ್ಥಿಕವಾದಂಥ ಅಥವಾ ಕೆಲವು fringe benefit ಇದ್ದರೆ ಸಾಧ್ಯವಾಗುವುದಿಲ್ಲ. ಆದ್ದರಿಂದ ನಾವು ಮೇಲೆ ಬರಬೇಕಾದರೆ ಈ ರೀತಿಯ ಹೋರಾಟ, ಈ ರೀತಿಯ ಛಲ ಈ ಜನಾಂಗಕ್ಕೆ ಇರಬೇಕು, ಆ ರೀತಿಯಾದ ಛಲದ ಸಂಪನ್ನತೆಯನ್ನು ಆ ಜನಾಂಗಕ್ಕೆ ತುಂಬಿದಂಥ ವ್ಯಕ್ತಿ ಖಂಡಿತವಾಗಿಯೂ ಶ್ರೀಮಾನ್ ಬಸವಲಿಂಗಪ್ಪನವರು ಎಂಬುದನ್ನು ಈ ಸಂದರ್ಭದಲ್ಲಿ ಹೇಳಲಿಚ್ಛೆಪಡುತ್ತೇನೆ. ನಮ್ಮೆಲ್ಲರ ಪರವಾಗಿ ಮತ್ತು ಕರ್ನಾಟಕ ರಾಜ್ಯದ ಜನತೆಯ ಪರವಾಗಿ ಹಾಗೂ ಈ ಸದನದ ಪರವಾಗಿ ನಾನು ವಿಶೇಷವಾದಂಥ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

**ಶ್ರೀ ಎಂ.ಸಿ. ನಾಣಯ್ಯ (ವಿರೋಧಪಕ್ಷದ ನಾಯಕರು):–** ಮಾನ್ಯ ಬಸವಲಿಂಗಪ್ಪನವರು, ರಾಜಕಾರಣದಲ್ಲಿ ನಾನು ಮೆಚ್ಚಿಕೊಂಡ ಕೇವಲ ಕೆಲವೇ ವ್ಯಕ್ತಿಗಳಲ್ಲಿ ಮಾನ್ಯ ಬಸವಲಿಂಗಪ್ಪನವರೂ ಒಬ್ಬರು. ಅವರ ಜೊತೆ ನಾನು ಅನೇಕಸಾರಿ ಜಗಳ ಮಾಡಿದ್ದೇನೆ. ಇದೇ ಸದನದಲ್ಲಿ ಅವರ ಬಗ್ಗೆ ವಿಚಾರಗಳನ್ನು ಎತ್ತಿ ಪ್ರಸ್ತಾಪ ಮಾಡಿದ್ದೇನೆ. ಆದರೆ ರಾಜಕೀಯ ಚಿಂತನೆಗಳನ್ನು ನಾನು ಒಪ್ಪುವುದಿಲ್ಲ. ಆದರೆ ಅವರು ಹಿಡಿದಂಥ ಹಾದಿ ಯಾವುದು ಇದೆ. ಆ

ಹಾದಿಯಲ್ಲಿ ಯಾವುದೇ ಸಂದರ್ಭದಲ್ಲೂ ಹೊಂದಾಣಿಕೆಯನ್ನು ಮಾಡಿಕೊಳ್ಳದೆ ತನ್ನದೇ ಸರಿ ಎನ್ನತಕ್ಕ ವಾದವನ್ನು ಕಡೆಯವರೆಗೆ ಮೆಟ್ಟಿನಿಂತ ಸಮಾಜದ ಒಬ್ಬ ಅತಿ ದೊಡ್ಡ ನಾಯಕ ಎಂದರೆ ಮಾನ್ಯ ಬಸವಲಿಂಗಪ್ಪನವರು. ಕಳೆದ ಸದನದಲ್ಲಿ ನಾನು ಅವರ ಬಗ್ಗೆ ಕೆಲವು ವಿಚಾರಗಳನ್ನು ಎತ್ತಿದಾಗ ಆ ಚರ್ಚೆಆದ ಮೇಲೆ ನನ್ನನ್ನು ಮಾನ್ಯ ಸಭಾಪತಿಯವರ ಕೊಠಡಿಯಲ್ಲಿ ಕಂಡು ನಾಣಯ್ಯನವರೇ ಬನ್ನಿ, Kindly hear it in mind. If at all there is one person. who has got greatest gratitude for anyone, it is Mr. Basavalingappa don't forget it ಎಂದು ಅವರು ನನಗೆ ಹೇಳಿದ್ದರು. ಆಗ ನಾನು ಅವರಿಗೆ ಹೇಳಿದೆ. ಬಸವಲಿಂಗಪ್ಪನವರೇ ನಿಮ್ಮ ವಿಚಾರಧಾರೆಗಳನ್ನು ನಾನು ಒಪ್ಪದೇ ಇರಬಹುದು. ಆದರೆ ನೀವು ನಡೆದುಕೊಂಡು ಬಂದಿರತಕ್ಕ ದಾರಿ ನಿಮ್ಮ ಬಿಚ್ಚು ಮನಸ್ಸಿನ ನುಡಿ ಯಾವುದೇ ಸಂದರ್ಭದಲ್ಲೂ ಕೂಡ ಸ್ವಾರ್ಥಕ್ಕಾಗಿ ಯಾವುದೇ ಚಿಂತನೆಯಲ್ಲಿ ಹೊಂದಾಣಿಕೆ ಮಾಡಿಕೊಳ್ಳದೇ ಇರತಕ್ಕ ನಿಮ್ಮ ಮನಸ್ಸನ್ನು ನಾನು ಮೆಚ್ಚುತ್ತೇನೆ. ಅದರಲ್ಲೂ ನಮ್ಮ ರಾಷ್ಟ್ರದ ಸಾಮಾಜಿಕ ಜೀವನದಲ್ಲಿ ಬಹುಶಃ ಅಂಬೇಡ್ಕರ್‌ರವರು ತೀರಿದ ಮೇಲೆ ಬಸವಲಿಂಗಪ್ಪನವರು ಈ ನಮ್ಮ ರಾಷ್ಟ್ರಕ್ಕೋಸ್ಕರ ಮಾಡಿರತಕ್ಕ ಬಹಳ ದೊಡ್ಡ ಕೆಲಸ ಎಂದರೆ ಮಲ ಹೊರತಕ್ಕ ಪದ್ಧತಿಯನ್ನು ರಾಷ್ಟ್ರದಲ್ಲಿ ಪ್ರಪ್ರಥಮವಾಗಿ ಕಿತ್ತುಹಾಕಿದ ಹೆಸರು ಮಾನ್ಯ ಬಸವಲಿಂಗಪ್ಪನವರಿಗೆ ಸಲ್ಲಬೇಕೇ ಹೊರತು ಬೇರೆ ಯಾರಿಗೂ ಅಲ್ಲ. ಇದರ ಬಗ್ಗೆ ಅವರ ಚಿಂತನೆ ಎಷ್ಟರಮಟ್ಟಿಗೆ ಅಗತ್ಯವಾಗಿತ್ತೆಂದರೆ, ಆ ಸಂದರ್ಭದಲ್ಲಿ ಅವರು ಹೆಚ್.ಯು.ಡಿ. ಮಂತ್ರಿಗಳಾಗಿದ್ದರು. ಅಧಿಕಾರವನ್ನು ಸ್ವೀಕಾರ ಮಾಡಿದ ಮಾರನೇ ದಿವಸವೇ ಎಲ್ಲ ಮುನಿಸಿಪಾಲಿಟಿಯವರಿಗೂ ಟೆಲೆಕ್ಸ್ ಮೆಸೇಜ್‌ನ್ನು ಕಳುಹಿಸುವ ಮುಖಾಂತರ ಈ ಕೆಲಸವನ್ನು ನೀವು ಇನ್ನು 3 ತಿಂಗಳೊಳಗೆ ನಿಲ್ಲಿಸದಿದ್ದರೆ ನಿಮ್ಮ ಮುನಿಸಿಪಾಲಿಟಿಯನ್ನು ರದ್ದುಮಾಡುತ್ತೇವೆಂಬ ಎಚ್ಚರಿಕೆಯನ್ನು ನೀಡಿ ಸಾಮಾಜಿಕವಾಗಿ ತುಳಿತಕ್ಕೆ ಒಳಪಟ್ಟಿದ್ದ ಜನರ ಬಗ್ಗೆ ಸ್ಪಂದಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದ ವ್ಯಕ್ತಿಯನ್ನು ಈ ಸಮಾಜದ ಒಬ್ಬ ಅತಿ ದೊಡ್ಡ ವ್ಯಕ್ತಿ ಎಂದು ಕರೆಯಬೇಕು. ಬಹಳ ಜನರು ಮಾನ್ಯ ಬಸವಲಿಂಗಪ್ಪನವರನ್ನು ದಲಿತರ ನಾಯಕ, ದಲಿತರನಾಯಕ ಎಂದು ಕರೆಯುತ್ತಾರೆ. ಅದೇರೀತಿ ಮಾನ್ಯ ಅಂಬೇಡ್ಕರ್‌ರವರನ್ನೂ ಕೂಡ ದಲಿತರ ನಾಯಕ, ದಲಿತರ ನಾಯಕ ಎಂದು ಕರೆಯುತ್ತಾರೆ. ಈ ಮಾತನ್ನು ಹೇಳತಕ್ಕದ್ದು ಅಪಮಾನ, ಮಾನ್ಯ ಅಂಬೇಡ್ಕರ್‌ರವರು ದಲಿತರ ನಾಯಕ ಅಲ್ಲ.

ಮಾನವ ಜನಾಂಗದಲ್ಲಿ ಹುಟ್ಟಿದಂಥ ಅತಿ ಉತ್ತಮವಾದ ನಾಯಕರೆಂದರೆ ಶ್ರೀಮಾನ್ ಅಂಬೇಡ್ಕರ್‌ರವರು ಇದೇ ರೀತಿ ಮಾನ್ಯ ಬಸವಲಿಂಗಪ್ಪನವರು ಅವರ ಜೀವನದುದ್ದಕ್ಕೂ ಅವರು ದುಃಖ ಮಾಡಿರತಕ್ಕಂತಹದ್ದು ಅವರ ಚಿಂತನೆ ಏನಿತ್ತು. ಅದನ್ನು ನಾವು ಈ ಸಂದರ್ಭದಲ್ಲಿ ಮಾನವ ಜನಾಂಗಕ್ಕೆ ಮಾಡಿದೆ ಸಾಮಾಜಿಕ ತುಳಿತಕ್ಕೆ ಒಳಪಟ್ಟವರನ್ನು ಮೇಲಕ್ಕೆ ಎತ್ತುವುದಕ್ಕೆ ಹಾಕಿಕೊಂಡಿರತಕ್ಕ ಕಾರ್ಯಕ್ರಮ ಇದ್ದುವು. ಆದುದರಿಂದ ಅವರನ್ನು ನಾವು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬೇಕು. ಅವರು ಕೊಟ್ಟಿರತಕ್ಕ ಮಾರ್ಗದರ್ಶನ ಮತ್ತು ಅವರು ಯಾವುದನ್ನು ನಿರೀಕ್ಷಣೆ ಮಾಡಿದ್ದರೊ ಆ ಕೆಲಸ ಸರ್ಕಾರ ಮುಂದುವರಿಸಿಕೊಂಡು ಹೋಗಬೇಕು. ನಾವೂ ಕೂಡ ಈ ಸಂದರ್ಭದಲ್ಲಿ ಸರ್ಕಾರದ ಸಹಕಾರವನ್ನು ಕೊಡುತ್ತೇವೆಂಬ ಭರವಸೆಯನ್ನು ಕೊಡುತ್ತೇನೆ. ಇವತ್ತು ಅವರ ನಿಧನದಿಂದ ಖಂಡಿತವಾಗಿ ಈ ಕರ್ನಾಟಕ ರಾಜ್ಯವು ಒಬ್ಬ ಹಿರಿಯ ರಾಜಕಾರಣಿಯನ್ನು ಕಳೆದುಕೊಂಡಿದೆ. ಅವರಿಗೆ 68 ವರ್ಷವಾಗಿತ್ತು ಎಂದರೆ ಅದೇನೂ ಇಳಿಯ ವಯಸ್ಸಲ್ಲ. ಆದರೆ ಕಾಲಚಕ್ರದ ಕಾಲಗರ್ಭದಲ್ಲಿ ಏನು ಅಡಗಿದೆ ಅದನ್ನು ಯಾರೂ ಹೇಳುವುದಕ್ಕಾಗುವುದಿಲ್ಲ. ಈ ಸಂದರ್ಭದಲ್ಲಿ ನನಗೆ ಡಿಸೆಂಬರ್ 6ನೇ ತಾರೀಖು ನೆನಪು ಬರುತ್ತದೆ. 1956ರಲ್ಲಿ ಮಾನ್ಯ ಅಂಬೇಡ್ಕರ್‌ರವರು ತೀರಿಕೊಂಡಾಗ ಅಂಬೇಡ್ಕರ್ ರವರಿಗೆ ತಾನು ಈ ಜಗತ್ತನ್ನು ಬಿಟ್ಟು ಹೋಗುತ್ತೇನೆಂದು ಗೊತ್ತಿರಲಿಲ್ಲ; A very big editorial ಅಂದು ಬರೆದಿತ್ತು. “The end of a crusade” ಎಂದು ಆ ಸಂದರ್ಭದಲ್ಲಿ ಅವರು ಹೇಳಿದರು. “He never knew that he would person this world because death over-took him in his sleep Similarly I feel now Sri Basavalingappa also died and death over took him in his sleep. ಆದ್ದರಿಂದ ಇವತ್ತು ಕರ್ನಾಟಕ ರಾಜ್ಯದಲ್ಲಿ ಒಬ್ಬ ಪ್ರತಿಭಾವಂತ ಹಿರಿಯ ರಾಜಕಾರಣಿಯನ್ನು ನಾವು ಕಳೆದುಕೊಂಡಿದ್ದೇವೆ. ಅವರ ಆತ್ಮಕ್ಕೆ ಈ ಸಂದರ್ಭದಲ್ಲಿ ಶಾಂತಿಯನ್ನು ಕೋರಬೇಕಾಗುತ್ತದೆ. ಇನ್ನು ಶ್ರೀಯುತರುಗಳಾದ ಡಾ॥ ಎಂ. ಹಿದಾಯತುಲ್ಲಾ. ಅಚ್ಯುತ ಪಟವರ್ಧನ್, ಗೋಪಾಲಕೃಷ್ಣ ಅಡಿಗ, ಬಾಳಪ್ಪ ಹುಕ್ಕೇರಿ ಮತ್ತು ಹೊನ್ನಪ್ಪ ಭಾಗವತರ್ ಇವರುಗಳು ನಮ್ಮ ರಾಷ್ಟ್ರದ ಬಹಳ ಉನ್ನತ ವ್ಯಕ್ತಿಗಳು. ಬಹು ಮುಖ್ಯ ಸೇವೆಯನ್ನು ಸಲ್ಲಿಸಿದವರು. ಹಾಡುಗಾರಿಕೆಯಲ್ಲಿ, ಜನಪದ ಗೀತೆಯಲ್ಲಿ ಮತ್ತು ರಾಷ್ಟ್ರದ ರಾಜಕಾರಣದಲ್ಲಿ ಜಾತ್ಯಾತೀತ ಸ್ವರೂಪ ನಿರಂತರವಾಗಿ ಉಳಿಯಬೇಕೆಂದು ಹೋರಾಟ ಮಾಡಿರತಕ್ಕ

ಮತ್ತು ನಮ್ಮ ಹಿರಿಯ ನ್ಯಾಯವಾದಿಗಳಾದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಆದಂಥ ಡಾ|| ಎಂ. ಹಿದಾಯತುಲ್ಲಾರವರು ಇಂಥವರೆಲ್ಲ ನಮ್ಮನ್ನು ಬಿಟ್ಟು ಅಗಲಿದ್ದಾರೆ. ಅವರು ಹಾಕಿಕೊಟ್ಟಿರತಕ್ಕ ಮಾರ್ಗದರ್ಶನ ನಮ್ಮ ಮುಂದಿನ ಪೀಳಿಗೆಗೂ ಮಾರ್ಗದರ್ಶನವಾಗಲಿ ಎಂದು ಈ ಸಂದರ್ಭದಲ್ಲಿ ಹೇಳಿ ತಾವು ಮತ್ತು ಮಾನ್ಯ ಮುಖ್ಯಮಂತ್ರಿಗಳು ತಂದಿರತಕ್ಕ ನಿರ್ಣಯಕ್ಕೆ ನಾನೂ ಕೂಡ ಈ ಸಂದರ್ಭದಲ್ಲಿ ಧ್ವನಿಗೂಡಿಸುತ್ತೇನೆ.

**ಶ್ರೀ ಡಿ. ಹೆಚ್. ಶಂಕರಮೂರ್ತಿ (ಪದವೀಧರರ ಕ್ಷೇತ್ರ):–** ಸನ್ಮಾನ್ಯ ಸಭಾಪತಿಯೇ, ಮಾನ್ಯ ಬಸವಲಿಂಗಪ್ಪನವರ ಬಗ್ಗೆ ನಾನೇನೂ ಹೆಚ್ಚಿಗೆ ಹೇಳಬೇಕಿಲ್ಲ. ನನ್ನ ಅವರ ಸಂಬಂಧದ ಬಗ್ಗೆ ಒಂದು ಮಾತನ್ನು ಇಲ್ಲಿ ಹೇಳಿದರೆ ಅದು ತುಂಬಾ ಪ್ರಸ್ತುತವಾಗುತ್ತದೆ. ಮಾನ್ಯ ಬಸವಲಿಂಗಪ್ಪನವರು ಬಹಳ ದೊಡ್ಡ ಮೇರು ಪರ್ವತ ಅದನ್ನು ನಾನು ಒಪ್ಪುತ್ತೇನೆ. ನಮ್ಮ ಜೊತೆಯಲ್ಲಿ ಅವರು ಇದ್ದಂತಹವರು. ಅವರ ಸ್ನೇಹಿತರಾಗಿ ಅವರು ಮಾಡಿದಂತಹ ಸರಿ ತಪ್ಪು ಎರಡನ್ನೂ ನಾನು ನೋಡಿದ್ದೇನೆ. ಮಾನ್ಯ ಬಸವಲಿಂಗಪ್ಪನವರು ನಮ್ಮ ಮಧ್ಯೆ ಇಲ್ಲವೆಂದು ಯೋಚನೆ ಮಾಡಿದಾಗ ಅವರ ಬಗ್ಗೆ ಒಂದು ಮಾತು ನೆನಪಿಗೆ ಬರುತ್ತದೆ. ತುಂಬಾ ಜನ ಸ್ನೇಹಿತರು ಅವರು ನಾಸ್ತಿಕರೆಂದು ತಿಳಿದಿದ್ದಾರೆ ನಾನೂ ಕೂಡ ಹಾಗೇ ತಿಳಿದಿದ್ದೆ. I thought he was an ಅವರು ನಮ್ಮ ಶಿವಮೊಗ್ಗಕ್ಕೆ ಬಂದಿದ್ದಾಗ ಅವರ ಜೊತೆಯಲ್ಲಿ ನಾನೂ ಮಾತನಾಡುವಾಗ ರಾಗಿ ಗುಡ್ಡದ ಮೇಲೆ ಭಗವಾನ್ ಬುದ್ಧನ ಚಿನ್ನದ ಪ್ರತಿಮೆ ಇಡಬೇಕೆಂದು ಹೇಳಿದ್ದರು. ನನ್ನನ್ನು ಸಲಿಗೆಯಿಂದ ಏಕವಚನದಲ್ಲಿಯೇ ಮಾತನಾಡಿಸುತ್ತಿದ್ದರು. ಭಗವಾನ್ ಬುದ್ಧನ ಚಿನ್ನದ ಪ್ರತಿಮೆಯನ್ನು ಫಿಲಿಫೈನ್ಸ್‌ನಲ್ಲಿ ಏನು ಇಟ್ಟಿದ್ದಾರೆ ಅದಕ್ಕಿಂತ ದೊಡ್ಡ ಪ್ರತಿಮೆಯನ್ನು ಅಲ್ಲಿ ಇಡಬೇಕೆಂದು ಅವರು ಹೇಳಿದ್ದರು. ಭಗವಾನ್ ಬುದ್ಧ ಹುಟ್ಟಿದ್ದು ಈ ದೇಶದಲ್ಲೇ. ಅವರು ಏನು ಆಸೆ ಪಟ್ಟಿದ್ದರು ಅದು ಆಗುತ್ತದೋ ಬಿಡುತ್ತದೋ ಅದು ಬೇರೆ ಪ್ರಶ್ನೆ. ಈ ದೇಶದ ಸಂಸ್ಕೃತಿ, ಚರಿತ್ರೆ ಬಗ್ಗೆ ಅವರು ಹೊಂದಿದ್ದಂತಹ ದೃಷ್ಟಿಕೋನ ಮತ್ತು ಭಗವಾನ್ ಬುದ್ಧ ದೇವರ ಅವತಾರವೆಂದು ನಂಬಿದ್ದಂಥ ಒಂದು ವ್ಯಕ್ತಿ ಅವರಾಗಿದ್ದರು. ಅವರು ನಾಸ್ತಿಕರಾಗಿರಲಿಲ್ಲ. ಆದರೆ ಈ ರಾಜ್ಯದಲ್ಲಿ ಅನೇಕ ಶತಮಾನಗಳಿಂದ ಏನು ತಪ್ಪುಗಳು ನಡೆಯುತ್ತಿತ್ತು ಅದನ್ನು ಅವರು ತಪ್ಪಿಸಿದ್ದಾರೆ. ತಲೆಯ ಮೇಲೆ ಮಲ ಹೊರುವ ಪದ್ಧತಿಯನ್ನು ಅವರು ತೆಗೆದು ಹಾಕಿದರು. ಅನೇಕ ಶತಮಾನಗಳಿಂದ ಸಮಾಜ ಮಾಡಿರತಕ್ಕಂತಹ ತಪ್ಪಿಗೆ ಅದನ್ನು ತೆಗೆದು ಹಾಕುವುದು ಹೇಗೆ ಎಂದು

ಬೇರೆಯವರು ಯೋಚಿಸುತ್ತಿದ್ದಾರೆ. ಆದರೆ ಇವರು ಕೃತಿಯಲ್ಲಿ ಮಾಡಿ ಮಲ ಹೊರುವುದನ್ನು ತೆಗೆದು ಹಾಕಿರುವಂತಹ ಒಬ್ಬ ಧೀಮಂತ ವ್ಯಕ್ತಿ ಈ ದೇಶದಲ್ಲಿ ಇನ್ನ್ಯಾರೂ ಈ ಕೆಲಸವನ್ನು ಮಾಡಿಲ್ಲ. ಬೇರೆ ಪ್ರಾಂತ್ಯಗಳವರು ಇದನ್ನು ತೆಗೆದು ಹಾಕುವುದು ಹೇಗೆಂದು ಯೋಚನೆ ಮಾಡುತ್ತಿದ್ದಾರೆ. ಕರ್ನಾಟಕದ ರಾಜ್ಯದವರಿಗೆ ಇದು ಮರೆತೇ ಹೋಗಿದೆ. ಈಗಿನ ವಿದ್ಯಾರ್ಥಿಗಳಿಗೆ, ಯುವಕರಿಗೆ ಹೇಳಿದರೆ ಅವರು ಈ ಪದ್ಧತಿ ಇತ್ತೇ ಎಂದು ಕೇಳುತ್ತಾರೆ. ಅಂತಹ ಕೆಲಸವನ್ನು ಮಾಡಿರತಕ್ಕಂತಹ ಮಾನ್ಯ ಬಸವಲಿಂಗಪ್ಪನವರು ನಮ್ಮನ್ನು ಬಿಟ್ಟು ಹೋಗಿದ್ದಾರೆ. ನಮ್ಮ ಸದನದ ಸದಸ್ಯರು ಕೂಡ ನಮ್ಮನ್ನಗಲಿ ಹೋಗಿ ನಮ್ಮ ಜೊತೆಯಲ್ಲಿ ತಮಾಷೆಗಳಲ್ಲಿ, ಮಾತುಕತೆಗಳಲ್ಲಿ ಸ್ನೇಹಿತರಾಗಿದ್ದಂತಹ ವ್ಯಕ್ತಿಗಳು ನಮ್ಮಿಂದ ಹೋದಾಗ ಮನಸ್ಸಿಗೆ ತುಂಬ ನೋವು ದುಃಖವಾಗುತ್ತದೆ. ಹಿರಿಯ ವ್ಯಕ್ತಿಗಳು ನಮ್ಮನ್ನು ಅಗಲಿದ್ದಾರೆ. ಇವರುಗಳ ಆತ್ಮಕ್ಕೆ ಪರಮಾತ್ಮ ಚಿರಶಾಂತಿಯನ್ನು ಕೊಡಲಿ ಎಂದು ನನ್ನ ಪಕ್ಷದ ಮತ್ತು ಅದರ ಜೊತೆಗೆ ನನ್ನ ಮಾತನ್ನೂ ಸೇರಿಸುತ್ತಾ ನನಗೆ ಇಷ್ಟು ಹೊತ್ತು ಮಾತನಾಡಲು ಅವಕಾಶ ಕೊಟ್ಟ ಹಂಗಾಮಿ ಸಭಾಪತಿಯವರಿಗೆ ವಂದಿಸುತ್ತಾ ಮಾನ್ಯ ಮುಖ್ಯ ಮಂತ್ರಿಗಳು ವಿರೋಧ ಪಕ್ಷದ ನಾಯಕರು ವ್ಯಕ್ತ ಮಾಡಿರತಕ್ಕಂತಹ ಭಾವನೆಗಳಿಗೆ ನಾನೂ ಸ್ಪಂದಿಸುತ್ತಾ ಮಾತನ್ನು ಮುಗಿಸುತ್ತೇನೆ.

**ಶ್ರೀ ಕೆ. ಬಿ. ಪಿಳ್ಳಪ್ಪ (ವಿಧಾನ ಸಭಾ ಕ್ಷೇತ್ರ):–** ಮಾನ್ಯ ಸಭಾಪತಿಯವರೆ, ಮಾನ್ಯ ಬಸವಲಿಂಗಪ್ಪನವರು ಅವರ ಬಗ್ಗೆ ಎಲ್ಲರೂ ಬಹಳವಾಗಿ ಮಾತನಾಡಿದ್ದಾರೆ. ನಾನು ಕೂಡ ಹೇಳಬೇಕಾದ್ದು ಇಷ್ಟೇನೆ. ಅವರು ಬಹಳ ಖಂಡಿತವಾದಿ ಅವರು ಹಿಡಿದ ಪಟ್ಟನ್ನು ಬಿಡುತ್ತಿರಲಿಲ್ಲ. ಮಲ ಹೊರುವ ಪದ್ಧತಿಯನ್ನು ಈ ರಾಜ್ಯದಲ್ಲಿ ಮೊಟ್ಟಮೊದಲನೆಯದಾಗಿ ತೆಗೆದವರು. ಅವರು ಈ ಅನಿಷ್ಟ ಪದ್ಧತಿಯನ್ನು ನಿರ್ಮೂಲನ ಮಾಡಿದ ಮೇಲೆ ಹತ್ತು ವರ್ಷಗಳಾದ ಮೇಲೆ ಬೇರೆ ಬೇರೆ ರಾಜ್ಯಗಳವರು ಈ ಮಲ ಹೊರುವ ಪದ್ಧತಿಯನ್ನು ತೆಗೆಯಬೇಕಾದರೆ ಇವರಿಗೆ ಎಷ್ಟೊಂದು ದೂರದೃಷ್ಟಿ ಇತ್ತು ಎಂದು ನಾವೆಲ್ಲರೂ ಚಿಂತನೆ ಮಾಡಬೇಕಾಗುತ್ತದೆ. ಹತ್ತು ವರ್ಷಕ್ಕೆ ಮುಂಚೆ ಅವರು ಮಲ ಹೊರುವ ಪದ್ಧತಿ. ನಿಕೃಷ್ಟವಾದ ಪದ್ಧತಿ ಏನು ಇತ್ತು ಅದನ್ನು ತೆಗೆಯುವಂಥ ಒಂದು ಒಳ್ಳೆಯ ಮುಂದಾಲೋಚನೆ. ಒಂದು ಮಾನವೀಯತೆ ಅವರಲ್ಲಿ ಇತ್ತು. ಹಾಗೆಯೇ ಯಾವ ಕ್ಷೇತ್ರದಲ್ಲಿಯೇ ಆಗಲಿ ಅವರು ಕೈಯಾಡಿಸಿ ಕೆಲಸ ಮಾಡಿರುವವರು. ಅವರು ಮಂತ್ರಿಗಳಾಗಿ ಎಂಥ ಖಾತೆಯನ್ನು

ಕೊಟ್ಟರು ಅದನ್ನು ಬಹಳ ಶಿಸ್ತಿನಿಂದ ನಡೆಸುತ್ತಿದ್ದರು. ಅವರಿಗೆ ಮೊನ್ನೆ ವಿಜ್ಞಾನ ಮತ್ತು ತಂತ್ರಜ್ಞಾನ ಖಾತೆಯನ್ನು ಕೊಟ್ಟಿದ್ದರು. ಅದರ ಹೆಸರನ್ನೇ ಯಾರು ಕೇಳಿರಲಿಲ್ಲ,. ಅದಕ್ಕೂ ಕೂಡ ಒಂದು ಮೆರುಗು ಬರುವಂತೆ ಮಾಡಿ ಅಲ್ಲೋಲ ಕಲ್ಲೋಲ ಉಂಟಾಗುವಂತೆ ಮಾಡಿದರು. ಇದು ಒಂದು ಖಾತೆ ಇದರಿಂದ ಎಷ್ಟೋ ಜನರಿಗೆ ಅನುಕೂಲವಾಗುವಂಥದ್ದು. ಇದೆ, ಈ ದೇಶಕ್ಕೆ ಇದು ಅನುಕೂಲವಾಗುವಂಥ ಖಾತೆ. ಇದನ್ನು ಸರಿಯಾಗಿ ನಡೆಯಿಸಬೇಕೆಂದು ಕೂಡ ಕಲ್ಪಿಸಿಕೊಟ್ಟು ಹೋಗಿದ್ದಾರೆ. ಅಂಥ ಮಾನವೀಯರು ಇಂದು ನಮ್ಮನ್ನು ಬಿಟ್ಟು ಅಗಲಿದ್ದಾರೆ ಅದಕ್ಕಾಗಿ ನಾವು ಬಹಳವಾಗಿ ನೋವು ಪಡಬೇಕಾಗಿದೆ. ವಿಷಾದ ಪಡಬೇಕಾಗಿದೆ. ಆದ್ದರಿಂದ ತಾವು ಏನು ಸಂತಾಪಸೂಚನಾ ನಿರ್ಣಯವನ್ನು ಈ ಸಭೆಯಲ್ಲಿ ಮಂಡಿಸಿದ್ದೀರಿ ಅದಕ್ಕೆ ನಾನೂ ಕೂಡ ಸ್ಪಂದಿಸಿ. ಮಾನ್ಯ ಮುಖ್ಯಮಂತ್ರಿಯವರು, ಮತ್ತಿತರ ಸ್ನೇಹಿತರು ಏನು ಮಾತನಾಡಿದ್ದಾರೆ ಅದಕ್ಕೆ ನನ್ನ ಒಪ್ಪಿಗೆ ಇದೆ. ಅದಕ್ಕೆ ನನ್ನಪರವಾಗಿ ಮತ್ತು ನಮ್ಮ ಪಕ್ಷದ ಪರವಾಗಿ ಭಾಗಿಯಾಗಲು ಇಚ್ಛೆಪಡುತ್ತೇನೆ.

**ಶ್ರೀ ಭೀಮಣ್ಣ ಖಂಡ್ರೆ (ಸಭಾನಾಯಕರು):-** ಮಾನ್ಯ ಉಪಸಭಾಪತಿಯವರೇ ಇವತ್ತು ಸಂತಾಪ ಸೂಚನೆಗಾಗಿ ನಾವು ಇಲ್ಲಿ ಕುಳಿತಿದ್ದೇವೆ. 1992ರ ವರ್ಷ ನನಗನಿಸುತ್ತದೆ. ಇದು ದುರಾದೃಷ್ಟದ ವರ್ಷವೆಂದು, ಎಲ್ಲ ದೃಷ್ಟಿಯಿಂದಲೂ ಧಾರ್ಮಿಕ ದೃಷ್ಟಿಯಿಂದ, ರಾಜಕೀಯದೃಷ್ಟಿಯಿಂದ ಮತ್ತು ಸಾಮಾಜಿಕದೃಷ್ಟಿಯಿಂದ ದೊಡ್ಡ ದೊಡ್ಡ ಜನರನ್ನು ನಾವು ಕಳೆದು ಕೊಂಡಿದ್ದೇವೆ. ನಾವು ಇವತ್ತು ಯಾವ ವ್ಯಕ್ತಿಗಳ ಬಗ್ಗೆ ಒಂದು ಗೌರವವನ್ನು ಸೂಚಿಸಲಿಕ್ಕಾಗಿ ಇಲ್ಲಿ ಕುಳಿತಿದ್ದೇವೆ ಅವರುಗಳ ಬಗ್ಗೆ ನಾನು ಹೇಳಬೇಕಾದರೆ ಅವರುಗಳು ಅವರವರ ಕರ್ತವ್ಯವನ್ನು ಅರಿತು ಬಹಳ ಚೆನ್ನಾಗಿ ಕೆಲಸ ಮಾಡಿ ಹೋಗಿದ್ದಾರೆ. ಅದನ್ನು ನೆನಪಿಗೆ ತಂದು ಅವರು ಏನು ಮಾರ್ಗದರ್ಶನ ಹಾಕಿಕೊಟ್ಟಿದ್ದಾರೆ. ಇದನ್ನು ನಾವು ಮುಂದೆ ತೆಗೆದುಕೊಂಡು ಹೋಗಬೇಕೆನ್ನುವ ದೃಷ್ಟಿಯಿಂದ ನಾನು ಹೇಳುತ್ತಿದ್ದೇನೆ. ಈ ದೃಷ್ಟಿಯಲ್ಲಿ ಈ ಜಗತ್ತು ಒಂದು ನಾಟಕ ರಂಗ: ನಾವೆಲ್ಲರೂ ನಟನಟಿಯರು, ವೇಶವನ್ನು ತೆಗೆದುಕೊಂಡು ಬಂದಿದ್ದೇವೆ. ಕೆಲಸ ಮಾಡುತ್ತಿದ್ದೇವೆ. ಹುಟ್ಟಿ ಸಾಯುತ್ತೇವೆ. ಆದರೆ ಕೆಲಸ ಮಾತ್ರ ಹಾಗೆಯೇ ಉಳಿದಿರುತ್ತದೆ. ಆ ಕೆಲಸ ಒಳ್ಳೆಯ ಕೆಲಸವಾದರೂ ಉಳಿದಿರುತ್ತದೆ, ಕೆಟ್ಟ ಕೆಲಸವಾದರೂ ಉಳಿದಿರುತ್ತದೆ. ಅದಕ್ಕೆ ಮನುಷ್ಯನಿಗೆ ಮುಕ್ತಿ ದೊರೆಯಬೇಕಾದರೆ ಒಳ್ಳೆಯ ಕೆಲಸ ಮಾಡಿದರೆ ಮುಕ್ತಿಯನ್ನು ಹೊಂದಬಹುದು. ನಾವು ಅದಕ್ಕೆ

ಶಿವೈಕ್ಯ ಎಂದು ಹೇಳಬಹುದು. ಲಿಂಗಐಕ್ಯವೆಂದು ಹೇಳಬಹುದು ದೇಹ ಬಿಟ್ಟರು ಎಂದು ಹೇಳಬಹುದು ಅದರ ಬಗ್ಗೆ ಚರ್ಚೆ ಇಲ್ಲ, ಏನು ವಾದವಿಲ್ಲ. ಆದರೂ ಈ ವಿಷಯದಲ್ಲಿ ಈಗ ಯಾವ ವ್ಯಕ್ತಿಗಳು ನಮ್ಮನ್ನು ಅಗಲಿ ಹೋಗಿದ್ದಾರೆ ಅವರು ಏನು ಕೆಲಸ ಮಾಡಿದ್ದಾರೆ, ಅವರ ಚರಿತ್ರೆ ಏನು, ಅವರು ಸಮಾಜಕ್ಕೆ ದೇಶಕ್ಕೆ ರಾಷ್ಟ್ರಕ್ಕೆ, ದಲಿತ ವರ್ಗಕ್ಕೆ ಏನು ಮಾಡಿದ್ದಾರೆ ಅದನ್ನು ನಾವು ಇವತ್ತು ಸ್ಮರಣೆ ಮಾಡುತ್ತಿದ್ದೇನೆ. ಬಸವಲಿಂಗಪ್ಪನವರು ಇಲ್ಲಿ ಏನು ಕೆಲಸ ಮಾಡಿದರು ಅದರ ಬಗ್ಗೆ ಬಹಳಷ್ಟು ಜನ ಅಸೆಂಬ್ಲಿಯಲ್ಲಿ ಮತ್ತು ಇಲ್ಲಿಯೂ ಹೇಳಿದ್ದಾರೆ. ನಾನು ಅದನ್ನು ಮತ್ತೊಮ್ಮೆ ಪುನರುಚ್ಚಾರ ಮಾಡುವುದಿಲ್ಲ. ಒಂದು ಮಾತು. ಮಿತ್ರರು ಹೇಳುತ್ತಿದ್ದರು. ಅವರು ಆಸ್ತಿಕರೆ, ನಾಸ್ತಿಕರೆ ಎಂದು? ಅವರು ಆಸ್ತಿಕರಿರಲಿ ನಾಸ್ತಿಕರಿರಲಿ. ದ್ವೈತಾದ್ವೈತ ವಾದಿಗಳಿರಲಿ, ವಿಶಿಷ್ಟಾದ್ವೈತವಿರಲಿ, ಏನೇ ಇರಲಿ ಪರಮಾತ್ಮ ಎಲ್ಲರಿಗೂ ಮುಕ್ತಿ ಕೊಟ್ಟಿದ್ದಾನೆ. ಪರಮಾತ್ಮನನ್ನು ಯಾರು ನಂಬುವುದಿಲ್ಲ ಅವನಿಗೂ ಮುಕ್ತಿ ಕೊಟ್ಟಿದ್ದಾನೆ. ನಾನು ಜಪಾನ್‌ಗೆ ಹೋಗಿದಾಗ ರಾಮಕೃಷ್ಣ ಆಶ್ರಮದಲ್ಲಿ ಒಂದು ಮಾತು ಹೇಳಿದರು. ಇಬ್ಬರು ಕಮ್ಯುನಿಷ್ಟರು ಪರಮಾತ್ಮನನ್ನು ನಂಬುತ್ತಿರಲಿಲ್ಲ. ಅವರು ಸತ್ತುಹೋದ ನಂತರ ಏನು ಮಾಡುವುದೆಂದು ಚಿಂತೆ ಮಾಡುತ್ತಿದ್ದರು, ಏಸುಕ್ರಿಸ್ತ ಇದನ್ನು ಒಪ್ಪಿದರೆ ಸ್ವರ್ಗಕ್ಕೆ ಹೋಗುತ್ತೇವೆ. ಇಲ್ಲದಿದ್ದರೆ ನರಕಕ್ಕೆ ಹೋಗುತ್ತೇವೆಯಲ್ಲ ಎಂದು. ಅವರು ಹೋಗಬೇಕಾದರೆ ಏಸುಕ್ರಿಸ್ತನ ಮೂಲಕ ಹೋಗಬೇಕು. ಆಗ ಅವರು ಕನಸಿನಲ್ಲಿ ನೋಡುತ್ತಾರೆ, ಪರಮಾತ್ಮ ಇಬ್ಬರನ್ನು ಸ್ವರ್ಗದಲ್ಲಿ ಕೂರಿಸಿಕೊಂಡು ಮಾತನಾಡುತ್ತಿದ್ದಾನೆ, ಸಂಭಾಷಣೆ ಮಾಡುತ್ತಿದ್ದಾನೆ. ಸಂಭಾಷಣೆ ಮಾಡುವ ಕಾಲಕ್ಕೆ ಸೇರುತ್ತಾರೆ. ನಾವು ನಿನ್ನನ್ನು ನೆನಸಲಿಲ್ಲ. ನೀನು ಇದ್ದೀಯ ಎಂದು ಒಪ್ಪಲಿಲ್ಲ. ಆಸ್ತಿಕರು ಒಪ್ಪಲಿಲ್ಲ. ನಾವೆಲ್ಲ ನಾಸ್ತಿಕರು, ಆದರೂ ನಮ್ಮನ್ನು ಸ್ವರ್ಗದಲ್ಲಿ ಇಟ್ಟಿದ್ದೀರಲ್ಲ ಏತಕ್ಕೆ ಎಂದರು? ಆಗ ಪರಮಾತ್ಮ ಹೇಳಿದ ನನ್ನನ್ನು ಸ್ಮರಣೆ ಮಾಡದಿದ್ದರೂ ಚಿಂತೆ ಇಲ್ಲ, ನನ್ನನ್ನು ಒಪ್ಪದಿದ್ದರೂ ಚಿಂತೆ ಇಲ್ಲ, ನೀವು ನನ್ನ ಮಕ್ಕಳ ಸೇವೆ ಮಾಡಿದ್ದೀರಿ. ಅದಕ್ಕೆ ನಿಮಗೆ ಸ್ವರ್ಗ ಅಂದ. ಹಾಗಾದರೆ ಸ್ವಾಮಿ. ನರಕ ಎಲ್ಲಿದೆ ತೋರಿಸಿ ಅಂದರು. ನಿಮ್ಮಂಥ ಪುಣ್ಯವಂತರು ನೋಡುವುದು ಬೇಡ ಅಂದ. ತೋರಿಸಿ ಎಂದು ಬಲವಂತ ಮಾಡಿದಕ್ಕೆ ಕರೆದುಕೊಂಡು ಹೋದರು. ಅಲ್ಲಿ ಟಿ.ವಿ. ನೋಡತಕ್ಕವರು, ಸುರೆ ಕುಡಿಯತಕ್ಕವರು, ಅಲ್ಲೋಲ ಕಲ್ಲೋಲ ಏನೇನೋ ನಡೆದಿತ್ತು. ಅದೆಲ್ಲ ನೋಡಿದ ನಂತರ ಈಗ ನಡೆಯಿರಿ ವಾಪಸ್ಸು ಅಂದ. ಆಗ ಅವರು ಅಂದರು ನಾವು ಹೋಗುವುದಿಲ್ಲವೆಂದು.

ಅದಕ್ಕೆ ಅವರು ಹೇಳಿದರು ಪುಣ್ಯವಂತರಿಗೆ ಸ್ವರ್ಗ ನರಕದಲ್ಲಿ ನೀವು ಏನು ಮಾಡುತ್ತೀರಿ ನೀವು ಇಲ್ಲಿ ಬೇಡ ಸ್ವರ್ಗಕ್ಕೆ ಬನ್ನಿ ಎಂದು ಕರೆದರು. ಪರಮಾತ್ಮನಿಗೆ ಅವರು ಹೇಳುತ್ತಾರೆ ನಾವು ಇಲ್ಲಿಯೂ ಸೇವೆ ಮಾಡುವುದು ಇದೆ, ಯಾರಿಗೆ ಔಷಧಿ ಬೇಕು ನೀರು ಬೇಕು ಅದನ್ನು ಕೊಡುತ್ತೇವೆ. ಸೇವೆ ಮಾಡುತ್ತೇವೆ ಎಂದು. ಹೀಗೆ ನಾಸ್ತಿಕ ಇದ್ದ ಅವನು ಪ್ರಜಾಸೇವೆಯಲ್ಲಿ ಜನಸೇವೆಯಲ್ಲಿ 24 ತಾಸು ತೊಡಗಿದ್ದರೆ ಅವನು ಆಸ್ತಿಕನೇ ಹೊರತು ನಾಸ್ತಿಕನಲ್ಲ. ಪರಮಾತ್ಮನನ್ನು ನಂಬಲಿ, ನಂಬದಿರಲಿ ಅವನು ಸಮಾಜಕ್ಕೆ ದೇಶಕ್ಕೆ ಒಳ್ಳೆಯ ಕೆಲಸ ಮಾಡಿದರೆ ಪರಮಾತ್ಮನ ದೃಷ್ಟಿಯಲ್ಲಿ ಒಳ್ಳೆಯವನೆಂದು ಹೇಳುತ್ತೇವೆ. ಬಸವಲಿಂಗಪ್ಪನವರು ಆಸ್ತಿಕರಿರಲಿ, ನಾಸ್ತಿಕರಿರಲಿ ಅವರು ಒಳ್ಳೆಯ ಕೆಲಸ ಮಾಡಿದ್ದಾರೆ. ನನಗೆ ಅವರ ಜೊತೆಯಲ್ಲಿ ಒಳ್ಳೆಯ ಸಂಬಂಧ. ನಾನು ಬಹಳಷ್ಟು ಸಾರಿ ಅವರ ಜೊತೆ ಮಾತನಾಡಿದ್ದೇನೆ. ಅವರ ವಿಚಾರ ಕೇಳಿದ್ದೇನೆ. ಬುದ್ಧ, ಬಸವ, ಅಂಬೇಡ್ಕರ್ ಈ ಮೂವರ ಬಗ್ಗೆ ಚರ್ಚೆ ಮಾಡುವುದಕ್ಕೆ ನನಗೆ ಬಹಳ ಸಾರಿ ಹೇಳಿದರು ನೀವು ಎಲ್ಲೆಲ್ಲಿ ಕರೆಯುತ್ತೀರಿ ಅಲ್ಲಿ ನಾನು ಈ ಮೂವರ ಬಗ್ಗೆ ಮಾತನಾಡುತ್ತೇನೆ ನಾನು ಬಹಳ ಪಾರಾಯಣ ಮಾಡಿದ್ದೇನೆಂದು ಹೇಳಿದರು. ನಾನು ಅವರೊಂದಿಗೆ ಹೋಗಿದ್ದಾಗ ಅವರು ಎಲ್ಲವನ್ನೂ ಹೋಲಿಕೆ ಮಾಡಿಕೊಂಡು ಹೇಳಿದರು. ಯಾವ ಯಾವ ಪ್ರಕಾರ ಸೇವೆ ಮಾಡಿದ್ದಾರೆಂದು ಹೇಳಿದರು. ಹೀಗೆ ಅವರ ವಿಚಾರ ಬಹಳ ದೊಡ್ಡದು. ಅವರು ಈವರೆಗೆ ಏನು ಒಳ್ಳೆಯ ಕೆಲಸ ಮಾಡಿದ್ದಾರೆಂಬುದನ್ನೆಲ್ಲ ಹೇಳಿದ್ದೀರಿ. ಆದ್ದರಿಂದ ನಾನು ಮತ್ತೊಮ್ಮೆ ಹೇಳುವುದಿಲ್ಲ. ಹುಟ್ಟುವುದು ಸಾಯುವುದು ನಮ್ಮ ಕೈಯಲ್ಲಿ ಇಲ್ಲ. ಒಬ್ಬ ಕವಿ ಮರಾಠಿಯಲ್ಲಿ ಹೇಳುವಂತೆ ನಾವು ಈ ಲೋಕಕ್ಕೆ ನಮ್ಮ ಇಚ್ಛೆಯಿಂದ ಬಂದಿಲ್ಲ. ನಮ್ಮ ಇಚ್ಛೆಯಂತೆ ಹೋಗುವುದಕ್ಕಾಗುವುದಿಲ್ಲ. ಈ ಪ್ರಕಾರ ಪ್ರತಿಯೊಬ್ಬರದ್ದು ಆಗಿದೆ. ಮತ್ತೊಬ್ಬ ಕವಿ.

"ಜಿಂದಗೀ ಕ್ಯಾಹೈ ಇನ್ಹಿ ಅಜಬ್‌ಕಾ ಜಮಾ ಹೋಗಾ ಮೌತ್ ಕ್ಯಾಹೈ ಇನ್ಹಿ ಅಜಬಾತ್ ಪರೇಶಾನ್ ಹೋಗಾ" ಎಂದು ಹೇಳುತ್ತಾನೆ. ಅಂದರೆ ಪಂಚ ಮಹಾಭೂತದಿಂದ ಕೂಡಿದ ಈ ದೇಹ ಜೀವಾತ್ಮ ಹೊರಟು ಹೋದ ಮೇಲೆ ಈ ನಮ್ಮ ಐದು ಭಾಗಗಳು ಹೊರಟು ಹೋಗುತ್ತದೆ. ಮುಂದೆ ಏನೂ ಇರುವುದಿಲ್ಲ. ಇಂಥ ಪರಿಸ್ಥಿತಿ ನಮ್ಮದು. ಅದು "ಬ್ರಹ್ಮ ಸತ್ಯ ಜಗನ್ಮಿತ ಎಂದು. ಅದರ ಬಗ್ಗೆ ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ. ಹೇಳುವುದಕ್ಕೆ ಹೋದರೆ

ವೇದಾಂತಕ್ಕೆ ಹೋಗಬೇಕಾಗುತ್ತದೆ. ಇಷ್ಟು ಮಾತ್ರ ಸರಿ. ಅವರು ಇವತ್ತು ನಮ್ಮನ್ನು ಅಗಲಿ ಹೋಗಿದ್ದಾರೆ ಅವರು ಏನು ಒಳ್ಳೆಯ ಕೆಲಸ ಮಾಡಿದ್ದಾರೆ ಅದು ನಮ್ಮ ಮನಸ್ಸಿನಲ್ಲಿದೆ. ಒಂದು ಬಾರಿ ನಾನು ಡೆಲ್ಲಿಗೆ ಹೋಗಿದ್ದಾಗ ಬಸವಲಿಂಗಪ್ಪನವರು ಕರ್ನಾಟಕ ಭವನದಲ್ಲಿದ್ದರು. ಒಬ್ಬ ಸಾಧು ಮನುಷ್ಯ 90 ವರ್ಷ ವಯಸ್ಸು. ಎರಡು ಸಾರಿ ಜೈಲಿಗೆ ಹೋಗಿದ್ದೇನೆಂದು ಹೇಳಿದ. ದೇಶ ಕಟ್ಟುವ ಸಲುವಾಗಿ 20–20 ಅಂದರೆ 40 ವರ್ಷ ಜೈಲಿನಲ್ಲಿದ್ದ ಈ ಮನುಷ್ಯನ ಬಗ್ಗೆ ಶ್ರೀ ಶಂಕರ್, ಎಂ.ಪಿ.ಯವರಿಗೆ ನನಗೆ ಪರಿಚಯ ಮಾಡಿಕೊಟ್ಟ ನಂತರ ನಾನು ಅವರ ಕಾಲಿಗೆ ಕೈಮುಗಿದೆ. ನಂತರ ಅವರಿಗೆ ಊಟ ಮಾಡಿಸಿ ಕರ್ನಾಟಕ ಭವನಕ್ಕೆ ಕರೆದುಕೊಂಡು ಹೋದೆ. ಬಸವಲಿಂಗಪ್ಪನವರಿಗೆ ಇಂಟ್ರಡ್ಯೂಸ್ ಮಾಡಿದಾಗ ಎಂತಹ ಸಣ್ಣಮನುಷ್ಯ ಅಪ್ಪ ಅಂತ ಎಂದರು. ನಾನು ಕೇಳಿದೆ, ನೀವು ಮಂತ್ರಿಯಾಗಿ ಇಂಥ ಮಾತನಾಡುತ್ತಿದ್ದೀರಲ್ಲ! ಎಂದು. ಇಂಥ ದೊಡ್ಡ ಮನುಷ್ಯರಿಗೆ ಕಾಲಿಗೆ ಬೀಳಬಾರದು ಎಂದರು. ಖಂಡ್ರೆ ಹೇಳುತ್ತೇನೆ ಕೇಳು. ಮನುಷ್ಯನಿಗೆ ಪರಮಾತ್ಮ ಜನ್ಮ ಕೊಟ್ಟ ಜನ್ಮ ಕೊಡುವಾಗ ಹೆಂಡರು ಮಕ್ಕಳನ್ನು ನೋಡಲಿಲ್ಲ. ಆಸ್ತಿ ಅಂತಸ್ತು ನೋಡಲಿಲ್ಲ. ಇವತ್ತಿನ ಕಾಲಕ್ಕೆ ಅವನು ದಡ್ಡ ಎನ್ನಬೇಕು ಅಂತ ಹೇಳಿದಾಗ ಸ್ಯಾಣೆ(ಬುದ್ಧಿವಂತ) ಎಂದು ಯಾರಿಗೆ ಹೇಳುತ್ತೇನೆ ಎಂದು ಕೇಳಿದ್ದಕ್ಕೆ ಸ್ಯಾಣೆ ಅಂದರೆ ಮುಂದೆ ಬಂದು ಯಾರು ಖುರ್ಚಿ ಮೇಲೆ ಕೂರುತ್ತಾರೆ ಅವರಿಗೆ ಸ್ಯಾಣೆ ಎನ್ನುತ್ತೇವೆ. ಅಂಥ ವಿಚಾರವಾದಿಗಳು ಅವರು, ಕ್ರಾಂತಿಕಾರಿ ಮನಸ್ಸಿನವರಂತೆ ವಿಚಾರ ಮಾಡುತ್ತಿದ್ದರು. ಅವರ ವಿಚಾರವನ್ನು ನಾನು ಈ ಪ್ರಕಾರ ಕೇಳಿದ್ದೇನೆ. ಒಂದು ತಿಂಗಳ ಮೊದಲು ಅವರು ನನ್ನನ್ನು ಕರೆದುಕೊಂಡು ಹೋಗಿ ಅವರ ಕಾಲೇಜು ತೋರಿಸಿ, ಅವರು ಮಾಡಿರುವ ಕೆಲಸ ತೋರಿಸಿ ಕೊನೆಯಲ್ಲಿ ಒಂದು ಮಾತನ್ನು ನನಗೆ ಹೇಳಿದರು. ಖಂಡ್ರೆಯವರೆ ನೀವು ಸ್ವಾಮಿಭಕ್ತರಲ್ಲ ಸ್ನೇಹಭಕ್ತರು ಎಂದು ಹೇಳಿದರು. ಕೆ. ಹೆಚ್. ಪಾಟೀಲರ ಜೊತೆ ಕೊನೆತನಕ ಇದ್ದೀರಿ, ಬೇರೆ ಯಾವುದೂ ಫಾಲೋ ಮಾಡಲಿಲ್ಲ. ಇವತ್ತು ನಾವೂ ನೀವೂ ಕೂಡಿದ್ದೇವೆ ಎಂದು ಹೇಳಿದರು. ಇವತ್ತು ಅವರ ಪ್ರೇಮ ತ್ಯಾಗ, ಒಂದು ವಿಚಾರ ಕ್ರಾಂತಿ ನೋಡಬೇಕು. ಯಾವಾಗಲೂ ಕ್ರಾಂತಿಪುರುಷರು ವಿವಾದಾಸ್ಪದ ವ್ಯಕ್ತಿಗಳಾಗಿರುತ್ತಾರೆ. ಜಗತ್ತಿನಲ್ಲಿ ಯಾರೇ ದೊಡ್ಡ ಮನುಷ್ಯ ದೇಶದಲ್ಲಿ ಬದಲಾವಣೆ ತರಲು ಕರೆಂಟ್ ವಿರುದ್ಧ ನಿಂತು ಕ್ರಾಂತಿ ಮಾಡಿ ಸಮಾಜಸೇವೆ ಮಾಡಿದ್ದಾರೆ. ಅವರೆಲ್ಲರೂ ಒಂದಲ್ಲಾ ಒಂದು ವಿಧದಲ್ಲಿ ವಿವಾದಾಸ್ಪದ ವ್ಯಕ್ತಿಗಳೇ, ಯಾರೇ ಒಳ್ಳೆ ಕೆಲಸಕ್ಕೆ ಕೈ ಹಾಕುತ್ತಾರೆ

ಅವರು ವಿವಾದಾಸ್ಪದ ವ್ಯಕ್ತಿಗಳಾಗಿರುವುದಕ್ಕೆ ಸಾಧ್ಯವಿಲ್ಲ. ಒಬ್ಬ ಉರ್ದು ಕವಿ ಹೇಳುತ್ತಾನೆ.

"ಗಿರತೆ ಹೈ ಶಹರ್ ಸವಾರ್ ಮೈದಾನ್ ಎ ಜಂಗಮೇ ಓ ತಿಫಲ್ ಕ್ಯಾಗಿರೆಂಗೇ ಗುಟ್ನೋಂಕೆ ಬಲ್ ಚಲೇ!" ಯುದ್ಧದ ಸಮಯದಲ್ಲಿ ಕುದುರೆಯ ಮೇಲೆ ಕುಳಿತು ಕತ್ತಿ ಹಿಡಿದು ಯುದ್ಧ ಮಾಡುವ ಯೋಧ ಯಾವುದಕ್ಕೂ ಅಂಜುವುದಿಲ್ಲ. ಯಾವ ಹುಡುಗನಿದ್ದಾನೆ ಅವನಿಗೆ ನಡೆಯುವುದಕ್ಕೂ ಬರುವುದಿಲ್ಲ, ಅದನ್ನು ಹೇಗೆ ತಾನೇ ಯುದ್ಧ ಮಾಡಬಲ್ಲ? ಹಾಗೆ ಬಸವಲಿಂಗಪ್ಪನವರು ಒಬ್ಬ ಕ್ರಾಂತಿಕಾರಕ ಮನುಷ್ಯ ಸಮಾಜದಲ್ಲಿ ಹೊಸ ಹೊಸ ಚಿಂತನೆಗಳನ್ನು ಮಾಡಿದ ಮನುಷ್ಯ. ಇಂತಹ ವ್ಯಕ್ತಿ ವಿವಾದಾಸ್ಪದ ವ್ಯಕ್ತಿ ಆಗಲೇಬೇಕು. ಇವತ್ತು ಯಾರು ಜ್ವಾಲೆಗೆ ಹೆದರುತ್ತಾರೆ, ಯುದ್ಧಕ್ಕೆ ಅಂಜುತ್ತಾರೆ ಅವರು ಜೀವನ ಮಾಡುವುದಕ್ಕೆ ಸಾಧ್ಯವಿಲ್ಲ. ಅವನು ಮನುಷ್ಯ ಅಲ್ಲ, ಮನುಷ್ಯ ಎಂದಾಗ, ಸತ್ಯಕ್ಕೆ ನ್ಯಾಯಕ್ಕೆ ಹೋರಾಟ ಮಾಡಿ ಎಂತಹ ಪ್ರಸಂಗ ಬಂದರೂ ಜಯಿಸಿ ಜೀವನ ಮಾಡುತ್ತಾನೋ ಅವನಿಗೆ ಮನುಷ್ಯ ಎಂದು ಹೇಳಬೇಕಾಗುತ್ತದೆ. ಇವತ್ತು ಬಸವಲಿಂಗಪ್ಪನವರು ಏನು ಕ್ರಾಂತಿಕಾರಕ ವಿಚಾರ ಧಾರೆ ಬಿಟ್ಟು ಹೋಗಿದ್ದಾರೆ ಆ ಬಗ್ಗೆ ಚಿಂತನೆ ಮಾಡಬೇಕು. ಅವರ ಪ್ರತಿಯೊಂದು ಮಾತೂ ಒಂದೊಂದು ಚಿಂತನೆ ಹುಟ್ಟುವಾಗ ನಗು ಸಾಯುವಾಗ ಅಳು, ಕವಿ ಒಬ್ಬರು ಹೀಗೆ ಹೇಳುತ್ತಾರೆ.

ಅದರ್ ಮುಸರತ್‌ಕಾ ಅಲಗ್ ಅಂಜಾಮ್‌ಹೈ ಜಿಂದಗಿ ಮಹರುಕಿ ಯಾಂಕನಾವತಾರ್! ಅಂದರೆ ಮನುಷ್ಯನನ್ನು ಮೊದಲಿನಿಂದಲೂ ಕೊನೆಯವರೆಗೂ ನೋಡಿದರೆ ಮೊದಲು ಸಂತೋಷ ಆಮೇಲೆ ದುಃಖ.

"ಚೌಕ್ ಧಾಮನ್ ಹೈ ಗಮ್ ಹಸೀನ್ ಫೂಲ್ ಯಹ ತಬಸ್ತು ತೊ ಬರಾಯೆ ನಾಮ್ ಹೈ" ಅಂದರೆ ಒಂದು ಹೂ ಒಂದು ಹೂ ಅರಳಿರುತ್ತದೆ. ಅದು ಒಂದು ದಿನ ಅರಳಿ ಎಲ್ಲರ ಮನಸ್ಸನ್ನು ಸಂತೋಷ ಪಡಿಸಿ ಅದು ಬಾಡುವಾಗ ದುಃಖಪಡುತ್ತಿದ್ದರೆ, ಅದು ಸಂತೋಷವಾಗಿದೆ ಎಂದು ಎಲ್ಲ ಜನರೂ ಅಂದುಕೊಳ್ಳುತ್ತಾರೆ. ಅದು ಅಳುತ್ತಿದ್ದರೂ ನಗುತ್ತಿದೆ ಎಂದು ಹೇಳುತ್ತೇವೆ. ಮಾನ್ಯ ಹಿದಾಯತುಲ್ಲಾ ಅವರು ಉಪರಾಷ್ಟ್ರಪತಿಗಳಾಗಿ ಕೆಲಸ ಮಾಡಿ ಅವರು ರಾಷ್ಟ್ರಸೇವೆ ಮಾಡಿದ್ದಾರೆ. ಸಂಗೀತ ಪ್ರವೀಣರಾದ ಮಲ್ಲಿಕಾರ್ಜುನ ಮನ್ಸೂರ್‌ರವರು. ಹುಕ್ಕೇರಿ ಬಾಳಪ್ಪನವರು, ವಿವೇಕಾನಂದಯ್ಯನವರು, ಅಡಿಗ

ಅವರು, ಅಚ್ಯುತ ಪಟವರ್ಧನ್‌ರವರು ನಮ್ಮ ಲೆಕ್ಚರರ್ ಆಗಿದ್ದರು. ನಾನು 16 ವರ್ಷದವನಿದ್ದಾಗ ಲೆಕ್ಚರರ್ ಆಗಿದ್ದರು. ಬೀದರ್‌ಗೆ ಅವರು ಮತ್ತು ಅರುಣ್ ಅಸಫಾಲಿ ಅವರು ಬಂದಿದ್ದರು. ಯಾರು ಯಾರು ಅಗಲಿದ್ದಾರೆ ಅವರು ಒಳ್ಳೊಳ್ಳೆಯ ಕೆಲಸ ಮಾಡಿದ್ದಾರೆ, ತ್ಯಾಗ ಮಾಡಿದ್ದಾರೆ. ದೇಶಕ್ಕೆ ಯಾರು ಯಾರು ತ್ಯಾಗ ಮಾಡಿದ್ದಾರೋ ಅವರು ಇಂದು ನಿಧನ ಹೊಂದಿದ್ದರೆ ಇವತ್ತು ಮಾನ್ಯ ಸಭಾಪತಿಯವರು ಮಹಾತ್ಮಾ ಗಾಂಧೀಜಿಯವರ ಫೋಟೋವನ್ನು ಈ ಸದನದಲ್ಲಿ ಅನಾವರಣ ಮಾಡಿಸಿದ್ದಾರೆ. ಇತ್ತು ನಮ್ಮ ವೀರಶೈವ ತತ್ವದಲ್ಲಿ ಇರುವುದನ್ನು ಹೇಳಬೇಕೆಂದರೆ ಮರಣವೇ ಮಹಾನವಮಿ ಎಂದು ಹೋಗುವುದು ಬರುವುದು ಇದ್ದೇ ಇದೆ. ದುಃಖಪಡುವ ವಿಷಯ ಅಲ್ಲ. ಬಹಳ ಜನರು ಮಾತನಾಡಿ ಬಸವಲಿಂಗಪ್ಪನವರ ಆತ್ಮಕ್ಕೆ ಶಾಂತಿ ಸಿಗಲಿ ಎಂದು ಹೇಳಿದ್ದಾರೆ. ಯಾರಿಗೆ ಮುಕ್ತಿಬೇಕು. ಪುನರ್‌ಜನ್ಮ ಬೇಡ ಅವರಿಗೆ ಶಾಂತಿ ಸ್ವರ್ಗ ಸಿಗಲಿ. ಆದರೆ ಬಸವಲಿಂಗಪ್ಪನವರಿಗೆ ಅದು ಬೇಕಾಗಿಲ್ಲ. ಅವರ ಆತ್ಮಕ್ಕೆ ಶಾಂತಿ ಬೇಡ ಎಂದು ನಾನು ಹೇಳುತ್ತೇನೆ. ಅವರು ಸವರ್ಗದಲ್ಲಿ ಇರಬಾರದು. ಅವರು ಮತ್ತೊಮ್ಮೆ ಹುಟ್ಟಬೇಕು. ಕಾರಣ, ಇಂತಹ ಕ್ರಾಂತಿಕಾರಕ ಜನ ಭಾರತದಲ್ಲಿ ಹುಟ್ಟಿ ಇವತ್ತು ನಡೆಯುತ್ತಿರುವುದರ ವಿರುದ್ಧ ಹೋರಾಟ ಮಾಡಬೇಕೆಂದು ನಾನು ಮಾಡುತ್ತೇನೆ. ಆ ದೃಷ್ಟಿಯಿಂದ ನಾನು ಈಗ ಪರಮಾತ್ಮನನ್ನು ಕೇಳುತ್ತೇನೆ. ಬಸವಲಿಂಗಪ್ಪನವರಿಗೆ ಸ್ವರ್ಗದಲ್ಲಿ ಸ್ಥಾನ ಕೊಡಬೇಡಿ, ಮತ್ತೆ ಕಳುಹಿಸಿ ಇಲ್ಲಿಗೆ ಕಳುಹಿಸಿ ಈ ದೇಶದ ಹಿತ ಕಾಪಾಡುವ ಸಲುವಾಗಿ ಕಳುಹಿಸಿ ಎಂದು ಭಗವಂತನಲ್ಲಿ ಕೇಳಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಎನ್. ತಿಪ್ಪಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):–** ಮಾನ್ಯ ಸಭಾಪತಿಯವರೆ, ತಾವು ಮಂಡಿಸಿದ ನಿರ್ಣಯದಲ್ಲಿರತಕ್ಕ ಎಲ್ಲ ಮಹನೀಯರಿಗೆ ನನ್ನ ಗೌರವವನ್ನು ಸೂಚಿಸುತ್ತಾ ಮಹಾನ್ ವ್ಯಕ್ತಿ ಬಗ್ಗೆ ನಮ್ಮ ವಿರೋಧ ಪಕ್ಷದ ನಾಯಕರು ಮುಖ್ಯಮಂತ್ರಿಗಳು ಸಭಾನಾಯಕರು ಎಲ್ಲರೂ ಮಾತನಾಡಿದ್ದಾರೆ. ಅವರು ಮಾನ್ಯ ಬಸವಲಿಂಗಪ್ಪನವರು ಅದರ ವಿಷಯವಾಗಿ ಎಷ್ಟು ಹೇಳಿದರೂ ಕಡಿಮೆಯೇ! ಅವರು ಒಬ್ಬ ವ್ಯಕ್ತಿ ಎನ್ನುವುದಕ್ಕಿಂತ ಒಂದು ದೊಡ್ಡಶಕ್ತಿಯಾಗಿದ್ದರು, ಆತ ಒಬ್ಬ ವಿಚಾರವಾದಿ, ಇದು ನಮಗೆಲ್ಲರಿಗೂ ಗೊತ್ತಿದೆ ಹುಟ್ಟು ನೇತಾರ, ಮೂಢ ನಂಬಿಕೆಗಳ ವಿರುದ್ಧ ಆ ರೀತಿ ಹೋರಾಟ ಮಾಡಿರತಕ್ಕಂಥ ಇನ್ನೊಬ್ಬ ವ್ಯಕ್ತಿಯನ್ನು ನಾನು ನೋಡಿಲ್ಲ. ಶೈಕ್ಷಣಿಕ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ತನ್ನದೇ ಆದ ಒಂದು ದೊಡ್ಡ ಕೊಡುಗೆಯನ್ನು

ಅವರು ಬಿಟ್ಟುಹೋಗಿದ್ದಾರೆ. ಇವತ್ತಿನ ದಿವಸ ರಾಷ್ಟ್ರ ಅಷ್ಟರಮಟ್ಟಿಗೆ ಬಡವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ನಮ್ಮ ಮಾನ್ಯ ಸಭಾನಾಯಕರು ಅವರ ಆತ್ಮಕ್ಕೆ ಶಾಂತಿ ಬೇಡ, ಅವರು ಮತ್ತೆ ಹುಟ್ಟಿ ಬರಲಿ ಎಂದು ಹೇಳಿದರು. ನಾವು ಅವರ ಆತ್ಮಕ್ಕೆ ಶಾಂತಿ ಇರಲಿ ಎಂದು ಹೇಳುವುದು. ಬರೆ ಬಡಿದಾಟಗಳಿಗೆ ಹುಟ್ಟಿಬರಬೇಕಾಗಿಲ್ಲ ಎಂದು. ಈ ರೀತಿ ಅವರು ಮತ್ತೆ ಹುಟ್ಟಿ ಬರಬೇಕೆಂದರೆ, ಈ ಎಲ್ಲಾ ವ್ಯಕ್ತಿಗಳು, ಯಾರ ವಿಷಯವಾಗಿ ನಾವು ಈ ಕಂಡೋಲೆನ್ಸ್ ಮೀಟಿಂಗು ನಡೆಸುತ್ತಿದ್ದೇವೆ. ಅವರೆಲ್ಲರೂ ಅಂತಹ ವ್ಯಕ್ತಿಗಳೇ, ಬರುವುದಾದರೆ ಎಲ್ಲರೂ ಬಂದುಬಿಡಲಿ, ಬಸವಲಿಂಗಪ್ಪನವರ ಜೊತೆಗೆ.

**ಶ್ರೀ ಬಿ.ಎ. ಮೊಯ್ದೀನ್**:– ಮತ್ತೆ ಹುಟ್ಟಿಬರುವ ಬಗ್ಗೆ ಅವರಿಗೆ ನಂಬಿಕೆ ಇರಲಿಲ್ಲ.

**ಶ್ರೀ ಎನ್. ತಿಪ್ಪಣ್ಣ**:– ಬಸವಲಿಂಗಪ್ಪನವರ ನಂಬಿಕೆ ಬೇರೆ. ಅವರಿಗೆ ಪುನರ್ ಜನ್ಮದ ಬಗ್ಗೆ ನಂಬಿಕೆ ಇರಲಿಲ್ಲ. ಅವರೆಲ್ಲ ಅಂತಹ ಮಹಾನ್ ವ್ಯಕ್ತಿಗಳು. ಇದ್ದಾಗ ಏನು ಮಾಡಿದ್ದಾರೆ. ಮಾಡಿ ಹೋಗಿದ್ದಾರೆ ಅದರ ಫಲ ನಮಗೆ ದೊರೆತಿದೆ ಇದನ್ನು ನಾವು ಅನುಭವಿಸಿದ್ದೇವೆ. ಅಂತಹ ವ್ಯಕ್ತಿಗಳ ಆತ್ಮಗಳಿಗೆ ಚಿರಶಾಂತಿ ಸಿಗಲಿ ಎಂದು ಹೇಳಿ, ಅವರೆಲ್ಲರ ಆತ್ಮಗಳಿಗೆ ನನ್ನ ಗೌರವವನ್ನು ಕೂಡ ಸೂಚಿಸುತ್ತಿದ್ದೇನೆ.

**ಶ್ರೀ ಎ.ಕೆ. ಸುಬ್ಬಯ್ಯ (ವಿಧಾನಸಭಾ ಕ್ಷೇತ್ರ)**:– ಮಾನ್ಯ ಸಭಾಪತಿಯವರೇ, ಅಗಲಿಹೋದ ಎಂಟು ಜನ ಮಹಾನ್ ಗಣ್ಯರ ಬಗ್ಗೆ ದುಃಖ ಸೂಚಕ ನಿರ್ಣಯವನ್ನು ತಾವು ಸಭೆಯ ಮುಂದೆ ಇಟ್ಟಿದ್ದೀರಿ. ಈ ದುಃಖದಲ್ಲಿ ಭಾಗಿಯಾಗುವಂಥ ಒಂದು ಕಷ್ಟದ ಕರ್ತವ್ಯ ನಮ್ಮೆಲ್ಲರದ್ದೂ ಕೂಡ ಆಗಿದೆ. ಈ ಅಗಲಿಹೋದ ಎಂಟು ಜನ ಗಣ್ಯರ ಪೈಕಿ ನನಗೆ ತೀರಾ ಹತ್ತಿರದ ಸ್ನೇಹಿತರಾಗಿದ್ದವರು ದಿವಂಗತ ಬಸವಲಿಂಗಪ್ಪನವರು. ಅವರ ಹಲವಾರು ಅಭಿಪ್ರಾಯಗಳನ್ನು ನಾನು ಸ್ವಾಗತ ಮಾಡಿದ್ದು ಉಂಟು. ಹಲವಾರು ಅಭಿಪ್ರಾಯಗಳನ್ನು ನಾನು ಟೀಕೆ ಮಾಡಿದ್ದೂ ಉಂಟು. ಅಂತಹ ಸ್ವಾಗತ ಮತ್ತು ಟೀಕೆ ಎರಡರ ನಡುವೆಯೂ ನಮ್ಮಿಬ್ಬರ ಸ್ನೇಹ ಮುಂದುವರೆಯುತ್ತಲೇ ಇತ್ತು. ಬಸವಲಿಂಗಪ್ಪನವರು ಎಬ್ಬಿಸಿದಂಥ ವಿವಾದದ ಮೂಲಕ ಈ ದೇಶದ ದೀನದಲಿತರಲ್ಲಿ ವಿಚಾರ ಪ್ರಚೋದನೆಯನ್ನು ಅವರು ಮಾಡಿದ್ದಾರೆ. ಅವರು ತಮ್ಮ ಜೀವನದಲ್ಲಿ ಇಟ್ಟುಕೊಂಡುಬಂದಥ ಬಹುಮುಖ್ಯ ಗುರಿಯೆಂದರೆ ಈ

ದೇಶದ, ಈ ಸಮಾಜದ ಶೂದ್ರ ಶಕ್ತಿಯನ್ನು ಜಾಗೃತಗೊಳಿಸಿ ಜಾಗೃತವಾದ ಶೂದ್ರ ಶಕ್ತಿಯ ಮೂಲಕ ರಾಷ್ಟ್ರದ ಕಲ್ಯಾಣ ಮಾಡಬೇಕು ಎನ್ನುವುದು. ಅದರ ಹಿಂದೆ ಅಡಗಿರತಕ್ಕ ಸೂಕ್ಷ್ಮವಾದ ವಿಚಾರ ಇಷ್ಟೆ. ಎಲ್ಲಿಯವರೆಗೆ ಈ ದೇಶದ ಶೂದ್ರ ಶಕ್ತಿ ಜಾಗೃತವಾಗುವುದಿಲ್ಲವೋ ಅಲ್ಲಿಯವರೆಗೆ ಈ ರಾಷ್ಟ್ರನಿರ್ಮಾಣ ಸಾಧ್ಯವಿಲ್ಲ. ಆದ್ದರಿಂದ, ಬಸವಲಿಂಗಪ್ಪನವರು ಎಬ್ಬಿಸಿದಂಥ ವಿಚಾರದಲ್ಲಿ, ರಾಷ್ಟ್ರನಿರ್ಮಾಣದ ಗುರಿ ಇತ್ತು. ಅದಕ್ಕಾಗಿ ಅವರು ಶೂದ್ರ ಶಕ್ತಿಯನ್ನು ಜಾಗೃತಗೊಳಿಸಬೇಕೆಂದು ಮಾಡಿದರು. ಯಾವ ಜನಾಂಗಕ್ಕೆ ಈ ದೇಶದಲ್ಲಿ ಬಾಯಿ ಇದ್ದರೂ ಕೂಡ ಮಾತನಾಡುವ ಶಕ್ತಿ ಇರಲಿಲ್ಲವೊ, ಆ ಜನಾಂಗಕ್ಕೆ ಮಾತನಾಡತಕ್ಕ ಶಕ್ತಿಯನ್ನು ಕೊಡುವುದರಲ್ಲಿ ಶ್ರೀ ಬಸವಲಿಂಗಪ್ಪನವರ ಒಂದು ಕಾಣಿಕೆ ಬಹಳ ದೊಡ್ಡದು. ಯಾವ ಜನಾಂಗಕ್ಕೆ ಕಾಲು ಇದ್ದರೂ ಎದ್ದು ನಿಲ್ಲುವ ಸಾಮರ್ಥ್ಯ ಇರಲಿಲ್ಲವೋ ಆ ಜನಾಂಗಕ್ಕೆ ಎದ್ದು ನಿಲ್ಲತಕ್ಕ ಶಕ್ತಿಯನ್ನು ಕೊಡಬೇಕೆಂದು ಹೆಣಗಿದವರು. ಶ್ರೀ ಬಸವಲಿಂಗಪ್ಪನವರು ಯಾವ ಜನಾಂಗಕ್ಕೆ ಕೈ ಇದ್ದೂ, ಕೈ ಎತ್ತುವ ಸಾಮರ್ಥ್ಯ ಇರಲಿಲ್ಲವೋ, ಆ ಜನಾಂಗಕ್ಕೆ ಕೈ ಎತ್ತುವ ಸಾಮರ್ಥ್ಯವನ್ನು ಕೊಡಬೇಕೆಂದು ಹೋರಾಟ ನಡೆಸಿದವರು ಶ್ರೀ ಬಸವಲಿಂಗಪ್ಪನವರು. ಅವರು ಆಸ್ತಿಕರಾಗಿದ್ದರು ಅಥವಾ ನಾಸ್ತಿರಾಗಿದ್ದರು ಎಂಬುದು ಮುಖ್ಯ ಅಂಶವಲ್ಲ. ಒಂದು ದೃಷ್ಟಿಯಿಂದ ಅವರು ಆಸ್ತಿಕರಾಗಿರಲಿಲ್ಲ. ನಾಸ್ತಿಕರಾಗಿದ್ದರು. ನಮ್ಮ ಈ ಸಮಾಜದಲ್ಲಿ ನಾಸ್ತಿಕರಾಗಿ ಬದುಕುವುದು ಎಷ್ಟು ಕಷ್ಟ ಎಂದು, ಆ ದಿಸೆಯಲ್ಲಿ ಪ್ರಯತ್ನ ಮಾಡಿದವರಿಗೆ ಗೊತ್ತಾಗುತ್ತದೆ. ಪ್ರಯತ್ನ ಮಾಡದಿದ್ದರೆ ಅದು ಗೊತ್ತಾಗುವುದಿಲ್ಲ. ದೇವರ ಹೆಸರು ಹೇಳಿಕೊಂಡು ಬೂಟಾಟಿಕೆಯ ಜೀವನ ಮಾಡುವುದು ಸುಲಭ. ದೇವರು ಇಲ್ಲ, ಮನುಷ್ಯ ಪ್ರಯತ್ನದಿಂದಲೇ ಎಲ್ಲವೂ ಆಗಬೇಕೆಂದು ಸತ್ಯಸಂಧರಾಗಿ ಜೀವಿಸುವುದು ಬಹಳ ಕಷ್ಟ. ಆದ್ದರಿಂದ, ಅವರು ನಾಸ್ತಿಕರಾಗಿ, ಸತ್ಯಸಂಧರಾಗಿ ಬಹಳ ಕಷ್ಟದ ಜೀವನವನ್ನು ನಡೆಸುತ್ತಾ ಶೂದ್ರಶಕ್ತಿಯ ಜಾಗೃತಿಯನ್ನು ಸಂಘಟನೆಯನ್ನು ಮಾಡುವಂಥ ಒಂದು ಪ್ರಯತ್ನವನ್ನು ಅವರು ಮಾಡಿದರು. ಅವರು ಮಾಡಿದಂಥ ಕೆಲಸದಿಂದಾಗಿ ನಮ್ಮ ಶೂದ್ರಶಕ್ತಿ ಜಾಗೃತವಾದರೆ ಬಾಯಿ ಇಲ್ಲದವರಿಗೆ ಬಾಯಿ ಇದ್ದು ಮಾತನಾಡುವ ಶಕ್ತಿ ಇಲ್ಲದವರಿಗೆ, ಮಾತನಾಡತಕ್ಕ ಶಕ್ತಿ ಬಂದರೆ ಕೈಇದ್ದೂ ಎತ್ತಲಾರದವರಿಗೆ ಕೈ ಎತ್ತುವ ಶಕ್ತಿ ಬಂದರೆ, ಕಾಲೂ ಇದ್ದೂ ನಡೆಯಲಾರದವರಿಗೆ ನಡೆಯುವ ಶಕ್ತಿ ಬಂದರೆ, ಅದು ಬಸವಲಿಂಗಪ್ಪನವರ ಬಹಳ ದೊಡ್ಡ ಸಾಧನೆಯಾಗುತ್ತದೆ. ಮತ್ತೆ ಅವರ ಕೆಲಸವನ್ನು ನಾವೆಲ್ಲರೂ

ಮುಂದುವರಿಸಿಕೊಂಡು ಹೋದಾಗ ಬಸವಲಿಂಗಪ್ಪನವರಿಗೆ ನಾವು ನೀಡುವ ಅತ್ಯಂತ ಗೌರವವಾಗುತ್ತದೆ. ಶ್ರದ್ಧಾಂಜಲಿಯಾಗುತ್ತದೆ. ಅವರು ಅಗಲಿದಾಗ ನಾನು ಬೆಂಗಳೂರಿನಲ್ಲಿ ಇರಲಿಲ್ಲ. ಎಲ್ಲೋ ಗ್ರಾಮಾಂತರ ಪ್ರದೇಶಕ್ಕೆ ಹೋಗಿದ್ದೆ. ಒಂದು ದಿವಸ ಪತ್ರಿಕೆಯನ್ನೂ ಓದಿರಲಿಲ್ಲ. ಆದ್ದರಿಂದ ಈ ಸುದ್ದಿ ನನಗೆ ತಿಳಿದಾಗ ಅವರ ಅಂತ್ಯಕ್ರಿಯೆಯೂ ಕೂಡ ನಡೆದುಹೋಗಿತ್ತು. ನನ್ನ ಮಿತ್ರರೊಬ್ಬರು ಹೇಳಿದಾಗ, ಅವರು ಒಬ್ಬ ವ್ಯಕ್ತಿಯಲ್ಲ, ಶಕ್ತಿಯಾಗಿ ಜೀವನವನ್ನು ನಡೆಸಿ ಪ್ರವಾಹಕ್ಕೆ ಎದುರಾಗಿ ಎದ್ದುನಿಂತು ಪ್ರವಾಹದ ದಿಕ್ಕು ಬದಲಿಸುವ ಪ್ರಯತ್ನ ಮಾಡಿದಂತ ಒಬ್ಬ ಮಹಾ ಸಾಹಸಿ ಬಸವಲಿಂಗಪ್ಪನವರಾಗಿದ್ದರು. ಅವರ ಅಗಲುವಿಕೆಯಿಂದ ನಮ್ಮ ರಾಜ್ಯ ಬಡವಾಗಿದೆ. ದಲಿತರ ಶಕ್ತಿ ಕಡಿಮೆಯಾಗಿದೆ. ಈ ಬಡವಾಗಿರುವ ರಾಜ್ಯದ ಬಡತನವನ್ನು ತುಂಬುವುದಕ್ಕೆ ಒಂದು ಅವಕಾಶವಿದರೆ, ದಲಿತರ ಶಕ್ತಿ ಇದರಿಂದ ಅಭಿವೃದ್ಧಿಯಾದರೆ, ಬಸವ ಲಿಂಗಪ್ಪನವರ ಜೀವನ ಸಾರ್ಥಕವಾದಂತಾಗುತ್ತದೆ. ಎಂದು ಹೇಳಿ ಈ ದುಃಖಿ ಸೂಚನೆಗೆ ನನ್ನ ಕಣ್ಣೀರಿನ ಹನಿಯನ್ನೂ ಸೇರಿಸುತ್ತೇನೆ.

**ಶ್ರೀ ಕೆ.ಎನ್. ನಾಗೇಗೌಡ** (ವಿಧಾನಸಭಾಕ್ಷೇತ್ರ):– ಮಾನ್ಯ ಉಪಸಭಾಪತಿಯವರೇ, ಈಗಾಗಲೇ ತಾವು ಮಂಡಿಸಿರತಕ್ಕಂಥ ನಿರ್ಣಯಕ್ಕೆ ಅನೇಕ ನಾಯಕರುಗಳು ತಮ್ಮ ಬೆಂಬಲ ಸೂಚಿಸಿದ್ದಾರೆ. ತಾವು ಇಟ್ಟಿರತಕ್ಕಂಥ ಎಂಟು ಜನ ಗಣ್ಯರ ನಿಧನದ ಬಗೆಗಿನ ಸಂತಾಪ ಸೂಚನೆಯಲ್ಲಿ ನನಗೆ ಅತ್ಯಂತ ಹತ್ತಿರವಾಗಿದ್ದವರು ಮಾನ್ಯ ಬಸವಲಿಂಗಪ್ಪನವರು. ಬಸವಲಿಂಗಪ್ಪನವರು 1967ನೇ ಇಸವಿಯಿಂದ ನನಗೆ ಸ್ನೇಹಿತರು ಮತ್ತು ನಮ್ಮ ಮಲ್ಲಿಕಾರ್ಜುನಸ್ವಾಮಿಯವರು ನಾವು ಸಹ ಒಟ್ಟಿಗೆ ಕೆಲಸ ಮಾಡಿದಂಥವರು. ಮಾನ್ಯ ಸುಬ್ಬಯ್ಯನವರು ಹೇಳಿದ ರೀತಿಯಲ್ಲಿ ಮಾನ್ಯ ಬಸವಲಿಂಗಪ್ಪನವರು ವಿಶೇಷವಾಗಿ 1965ನೇ ಇಸವಿಯಿಂದ ಈಚೆಗೆ, ಯಾರು ಶೋಷಿತ ವರ್ಗದವರು ಇದ್ದರು. ಯಾರು ದಲಿತ ವರ್ಗದವರು ಇದ್ದರು, ಯಾರಿಗೆ ಬಾಯಿದ್ದರೂ ಮಾತನಾಡುವುದಕ್ಕೆ ಆಗುತ್ತಿರಲಿಲ್ಲ. ಯಾರಿಗೆ ಕೈ ಇದ್ದರೂ ಸಹ ಕೈ ಎತ್ತುವುದಕ್ಕೆ ಆಗುತ್ತಿರಲಿಲ್ಲವೋ, ನೂರಾರು ವರ್ಷಗಳ ಕಾಲದಿಂದ ಈ ರೀತಿ ಇದ್ದರೋ, ಅಂತಹವರ ಕೈಯನ್ನು ಎತ್ತಿಸಿದವರು, ಅಂತಹವರ ಬಾಯನ್ನು ತೆಗೆಸಿದವರು. ಅಂತಹವರುಗಳಿಗೆ ಇದು ಪ್ರಜಾಪ್ರಭುತ್ವ ಎಂದು ಹೇಳಿದಂತಹವರು. ಮಾನ್ಯ ವಿರೋಧಪಕ್ಷದ ನಾಯಕರು ಹೇಳಿದ ರೀತಿ ಅವರ ಹೇಳುವ ಎಲ್ಲಾ ವಿಚಾರಗಳನ್ನೂ ಒಪ್ಪಿಕೊಳ್ಳುವುದಕ್ಕೆ ಆಗದಿದ್ದರೂ ಸಹ ಕೆಲವಾರು ವಿಚಾರಗಳನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ.

ಉದಾಹರಣೆಗೆ "ಬೂಸಾ" ಎಂಬ ದೊಡ್ಡ ಪ್ರಕರಣದಲ್ಲಿ ಬಸವಲಿಂಗಪ್ಪನವರ ಪರವಾಗಿ ನಿಂತವರು ಎಂದರೆ ನಾನು, ಟಿ.ಎ.ರಂಗಯ್ಯನವರು ಹಾಗೂ ಇನ್ನು 4-5 ಜನರು. ಅದರ ಹಿನ್ನೆಲೆ ಏನೇ ಇರಲಿ, ಯಾವ ವರ್ಗ ತುಳಿತಕ್ಕೆ ಒಳಗಾಗಿತ್ತು, ಯಾವ ವರ್ಗ ಕಣ್ಣು ತೆರೆದು ಈ ದೇಶವನ್ನು ನೋಡಿರಲಿಲ್ಲ, ಅಂತಹವರಿಗೆ ಕಣ್ಣು ಬಿಡಿಸಿ ನೋಡಿಸತಕ್ಕದ್ದು ದೊಡ್ಡ ಸಾಧನೆ ಈ ಪ್ರಜಾಪ್ರಭುತ್ವದಲ್ಲಿ ಇವತ್ತು ಇಷ್ಟು ವರ್ಷ ಇತಿಹಾಸವಿರುವ ಈ ವಿಧಾನ ಪರಿಷತ್ತಿನಲ್ಲಿ ಮಹಾತ್ಮಾ ಗಾಂಧಿಯವರ ಚಿತ್ರವನ್ನು ಹಾಕಿರಲಿಲ್ಲ. ನಾವೂ 15-20 ವರ್ಷದಿಂದ ಸದಸ್ಯರಾಗಿದ್ದೇವೆ. ಮಾನ್ಯ ನರಸಿಂಹಮೂರ್ತಿಯವರೂ 15-20 ವರ್ಷದಿಂದ ಸದಸ್ಯರಾಗಿದ್ದಾರೆ, ಮಾನ್ಯ ಸುಬ್ಬಯ್ಯನವರೂ 15-20 ವರ್ಷದಿಂದ ಸದಸ್ಯರಾಗಿದ್ದಾರೆ, ಅನೇಕ ಮುಖ್ಯ ಮಂತ್ರಿಗಳು, ಅನೇಕ ಸಭಾಪತಿಯವರು ಕೆಲಸ ಮಾಡಿದ್ದಾರೆ. ಯಾರಿಂದಲೋ ಅದಕ್ಕೆ ಘಳಿಗೆ ಕೂಡಿಬರಬೇಕಾಗಿತ್ತು, ಯಾರಿಂದಲೋ ಆ ಕಾರ್ಯ ಆಗಬೇಕಾಗಿತ್ತು, ಯಾರಿಂದ ಆ ಕಾರ್ಯ ಆಗುತ್ತದೆ ಅದನ್ನು ನಾವು ಮೆಚ್ಚಬೇಕಾಗುತ್ತದೆ. ಅದು ಎಲ್ಲರಿಗೂ ಸೇರಿದ ಧರ್ಮ. ಅದೇ ರೀತಿ ಡಾ॥ ಅಂಬೇಡ್ಕರ್‌ರವರು ಇದ್ದರು. ಆದರೆ ಕರ್ನಾಟಕ ರಾಜ್ಯದಲ್ಲಿ ಹರಿಜನರಿಗೆ ವಿಶೇಷವಾಗಿ ಒಂದು ರಾಜಕೀಯ ಜೀವಾಳವನ್ನು, ಸಾಮಾಜಿಕ ಶಕ್ತಿಯನ್ನು ತುಂಬಿದವರು ಬಸವಲಿಂಗಪ್ಪನವರು ಬೇಕಾದಷ್ಟು ಜನ ಹರಿಜನ ಮುಖಂಡರು ನಮ್ಮ ರಾಜ್ಯದಲ್ಲಿದ್ದಾರೆ. ರಾಷ್ಟ್ರದಲ್ಲಿ ಅತ್ಯಂತ ಎತ್ತರದ ಸ್ಥಾನದಲ್ಲಿದ್ದಂಥವರು ಇದ್ದಾರೆ. ಇಲ್ಲ ಎಂದು ಹೇಳುತ್ತಿಲ್ಲ. ಆದರೆ ಬಸವಲಿಂಗಪ್ಪನವರೊಬ್ಬರ ಬಗ್ಗೆ ಏತಕ್ಕೆ ಇಷ್ಟು ಕಳಕಳಿ ಎಂದರೆ, ಅವರು ಮಾಡಿದಂಥ ಸಾಧನೆಗಳು ಏನಿವೆ, ಅವುಗಳು ಸಣ್ಣ ಸಾಧನೆಗಳು ಎಂದು ಯಾರೂ ಭಾವಿಸಿಕೊಂಡಿಲ್ಲ. ಇವತ್ತು ದಲಿತ ವರ್ಗದ ಮುಖಂಡರು ಎಂದು ಹೇಳುವ ಸ್ಥೈರ್ಯವನ್ನು ಎಲ್ಲಾ ಮಾಡಿದ್ದಾರೆ. ಆದರೆ ಬಸವಲಿಂಗಪ್ಪನವರ ಎದುರುಗಡೆ ಯಾವ ವ್ಯಕ್ತಿಯೇ ಆಗಲೀ, ಯಾವ ನಾಯಕರಾಗಲೀ, ಮಾನ್ಯ ದೇವರಾಜ ಅರಸ್ ಅಂಥವರೇ ಆಗಲೀ, ಬಸವಲಿಂಗಪ್ಪನವರಿಗೆ, ಇಲ್ಲ ನೀವು ಹರಿಜನರಿಗೆ ಕೇಳುತ್ತಿರುವುದು ಎಂದು ಸರಿ ಇಲ್ಲ ಎಂದು ಹೇಳಲಿಲ್ಲ. ಅನೇಕ ಸಲ ಬಸವಲಿಂಗಪ್ಪನವರು ತಪ್ಪು ಮಾಡುತ್ತಿದ್ದರು. ಬೇಕಾದಷ್ಟು ತಪ್ಪುಗಳನ್ನು ಮಾಡಿದ್ದಾರೆ, ಆದರೆ ಅವರ ಎದುರಿಗೆ ನೀವು ಇಂಥ ತಪ್ಪುಗಳನ್ನು ಮಾಡಿದ್ದೀರಿ ಎಂದು ಹೇಳುವಂತಹ ಶಕ್ತಿಯನ್ನು ಯಾರೂ ಪಡೆದುಕೊಂಡಿರಲಿಲ್ಲ. ಒಂದು ಪ್ರಕರಣ ಅಲ್ಲ, ಎರಡು ಪ್ರಕರಣ ಅಲ್ಲ, ಇಂತಹ ನೂರಾರು ಪ್ರಕರಣಗಳು ಇವೆ. ನಾವು, ದೇವರಾಜ

ಅರಸು ಅವರು ಘೋರ್ಪಡೆಯವರು ಕುಳಿತುಕೊಂಡು ಮಾತನಾಡುವ ಸಂದರ್ಭದಲ್ಲಿ, ಮಾನ್ಯ ಬಸವಲಿಂಗಪ್ಪನವರನ್ನು ನೆನೆಸಿಕೊಳ್ಳುತ್ತಿದ್ದೆವು. ಇವತ್ತು ಅಂತಹ ದೊಡ್ಡ ವ್ಯಕ್ತಿಯನ್ನು, ಶಕ್ತಿಯನ್ನು ನಾವು ಕಳೆದುಕೊಂಡಿದ್ದೇವೆ. ನಾನು ಈಗ್ಗೆ 8–10 ದಿವಸಗಳ ಹಿಂದೆ ನಾಗಸೇನಾ ಸ್ಕೂಲ್ ಹತ್ತಿರ ಬೆಳಿಗ್ಗೆ ಆರೂವರೆ ಘಂಟೆಯಲ್ಲಿ ವಾಕಿಂಗ್ ಹೋಗುತ್ತಿದ್ದಾಗ ಅವರು ಸಿಕ್ಕಿದರು. ನಾನು ಬಹಳ ದೂರ ಹೊರಟು ಹೋಗಿದ್ದೆ. ಆಗ ಬಸವಲಿಂಗಪ್ಪನವರು ತಮ್ಮ ಅಟೆಂಡರ್‌ನ್ನು ಕಳುಹಿಸಿ, ನಾಗೇಗೌಡರು ಹೋಗುತ್ತಿದ್ದಾರೆ, ಕರೆದುಕೊಂಡು ಬಾ ಎಂದು ಹೇಳಿಕಳುಹಿಸಿದರು, ಅವರು ಬಂದು ನನ್ನನ್ನು ಕರೆದುಕೊಂಡು ಹೋದರು. ರಾಮಕೃಷ್ಣ ಹೆಗಡೆಯವರು ಮನೆಯ ಪಕ್ಕದ್ದು ನಾಗಸೇನಾ ಸ್ಕೂಲ್‌ನ ಒಂದು ಕಾಂಪೌಂಡ್ ಇದೆ. ಅಲ್ಲಿ ಅವರು ಬಹಳ ಹೊತ್ತು ನನ್ನೊಡನೆ ಒಂದು ಅರ್ಧ ಮುಕ್ಕಾಲು ಘಂಟೆ ಬ್ಲಡ್ ಪ್ರೆಜರ್ ಬಗ್ಗೆ ಡಿಸ್ಕಸ್ ಮಾಡಿದರು. ಈ ರಕ್ತದ ಕೆಲಸ ಹೇಗೆ, ಇದರ ಖಾಯಿಲೆಯನ್ನು ಕಂಟ್ರೋಲ್ ಮಾಡುವುದು ಬಹಳ ಕಷ್ಟ ಎಂದೆಲ್ಲಾ ಹೇಳಿದರು. ಅವರು ಅದರ ಬಗ್ಗೆ ಬೇಕಾದಷ್ಟು ಹೇಳಿದರು. ಅವರು ಉಪಯೋಗಿಸುತ್ತಿದ್ದ ಪದಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತಿತ್ತು. 10–15 ನಿಮಿಷ ಆದಮೇಲೆ ಅವರು ಉಪಯೋಗಿಸಿದ ಪದಗಳು ನಮಗೆ ಅರ್ಥ ಆಗುತ್ತಿದ್ದವು. ಅಷ್ಟೊಂದು ಜ್ಞಾನವನ್ನು ಅವರು ಪಡೆದುಕೊಂಡಿದ್ದರು. ಮಹದೇವ್ ಅವರು ನನಗೆ ಸುಮಾರು ನಾಲ್ಕೂ ಮುಕ್ಕಾಲು ಗಂಟೆಯಲ್ಲಿ ಫೋನ್ ಮಾಡಿ ರಾಮಸ್ವಾಮಿಯವರು, ಚೀಫ್ ಮಿನಿಸ್ಟರ್‌ರವರು ಇನ್ನೂ ಅನೇಕ ಜನ ಎಂ.ಎಲ್.ಎ.ಗಳು ಇದ್ದಾರೆ. ಬಸವಲಿಂಗಪ್ಪನವರು ತೀರಿ ಹೋದರು ಎಂದು ಹೇಳಿದರು. ನನಗೆ ಬಹಳಷ್ಟು ನೋವಾಗಿದ್ದು ಏನೆಂದರೆ ಕರ್ನಾಟಕ ರಾಜ್ಯದ ಇತಿಹಾಸದಲ್ಲಿ ಎಲ್ಲಾ ರಾಷ್ಟ್ರ ನಾಯಕರುಗಳನ್ನು ನಾವು ಕಳೆದುಕೊಂಡುಬಿಟ್ಟೆವಲ್ಲಾ ಅಂತ ಹೇಳಿ ದಿವಂಗತ ದೇವರಾಜ ಅರಸರಂಥ ಒಬ್ಬ ಹಿಂದುಳಿದ ವರ್ಗಗಳ ಮಹಾನ್ ನಾಯಕರು ಈ ರಾಷ್ಟ್ರದಲ್ಲಿ ಬೆಳೆದರು. ಅವರನ್ನು ನಾವು ಕಳೆದುಕೊಂಡೆವು. ಒಳ್ಳೆಯ ಮೇಧಾವಿ ಆಡಳಿತಗಾರ ಟಿ.ಎಂ. ಪೈರವರನ್ನು ಕಳೆದುಕೊಂಡೆವು. ಇನ್ನೊಬ್ಬ ಒಳ್ಳೆಯ ಆಡಳಿತಗಾರ ಅಂತ ಹೇಳುತ್ತಿದ್ದ ಹನುಮಂತಯ್ಯನವರನ್ನು ಕಳೆದುಕೊಂಡೆವು. ಇನ್ನು ಕೆ.ಎಚ್. ಪಾಟೀಲ್‌ರವರು, ಅವರ ಸೇವೆ ಆ ಭಾಗದ ಜನಗಳಿಗೆ ಆಗಿದೆ. ಅವರು ಒಳ್ಳೆಯ ಕೆಲಸ ಮಾಡಿದ್ದರು ಅವರನ್ನು ಕಳೆದುಕೊಂಡೆವು. ಬಸವಲಿಂಗಪ್ಪನವರು ಅವರೊಬ್ಬ ಹಿರಿಯ ನಾಯಕರು ಆಗಿದ್ದರು ಆ ವರ್ಗದಲ್ಲಿ ಆ ವರ್ಗದ

ನಾಯಕರನ್ನು ಕಳೆದುಕೊಂಡೆವು. ಕರ್ನಾಟಕ ರಾಜ್ಯ ಇಂಥ ಗಣ್ಯ ವ್ಯಕ್ತಿಗಳಿಂದ ಭೂಪಟದಲ್ಲಿ ಮೆರೆಯುತ್ತಿತ್ತೋ, ಇವತ್ತು ಅಂಥ ನಾಯಕರು ಯಾರೂ ಸಹ ಇಲ್ಲ. ಒಬ್ಬೊಬ್ಬರಾಗಿ ಕಳೆದುಕೊಳ್ಳುತ್ತಿದ್ದೇವೆ ಎನ್ನತಕ್ಕಂಥಾದ್ದು ನನಗೆ ಬಹಳ ದುಃಖ ತಂತು. ಇವತ್ತು ಬಸವಲಿಂಗಪ್ಪನವರ ಬಗ್ಗೆ ಹೇಳುವುದಾದರೆ ಮಾನ್ಯ ನಾಣಯ್ಯನವರು ಅವರು ಹಿಂದೆ ಜಗಳ ಆಡಿದಾಗ ನಾನು ಹೊರಗೆ ನೀವೊಬ್ಬರೆ ಇಂಥ ವ್ಯಕ್ತಿ ನಿಮ್ಮಂಥವರು ಮತ್ತೊಬ್ಬರು ಹುಟ್ಟಿ ಬರುವುದಿಲ್ಲ ಎನ್ನತಕ್ಕಂಥ ಮಾತನ್ನು ಹೇಳಿದ್ದೆ. ಅದು ಇವತ್ತು ನಿಜವಾಯಿತು. ಇವೊತ್ತು ಅವರನ್ನು ಬಿಟ್ಟರೆ ಮತ್ತೊಬ್ಬ ಬಸವಲಿಂಗಪ್ಪ ಬರುವುದಿಲ್ಲ ಎನ್ನತಕ್ಕಂಥಾದ್ದು ಅವರು ಸತ್ತ ಮೇಲೆ ಸಾಬೀತಾಗಿದೆ. ಅಂತ ನನಗನ್ನಿಸುತ್ತಿದೆ. ಒಟ್ಟಿನಲ್ಲಿ ನಮ್ಮ ದಲಿತ ನಾಯಕರುಗಳು ವಿಶೇಷವಾಗಿ ಬಸವಲಿಂಗಪ್ಪನವರ ಆದರ್ಶ ಇಟ್ಟುಕೊಳ್ಳಬೇಕು. ನಾವು ಇಟ್ಟುಕೊಳ್ಳಬಾರದು ಅಂತ ಅಲ್ಲ. ನಾವು ಇಟ್ಟುಕೊಳ್ಳುತ್ತೇವೆ. ಆದರೆ ಅವರು ಯಾವ ವರ್ಗದಿಂದ ಬೆಳೆದು ಬಂದಿದ್ದಾರೆ ಯಾವ ವರ್ಗದಿಂದ ಸೌಲತ್ತುಗಳನ್ನು ಪಡೆಯುತ್ತಿದ್ದಾರೆ ಆ ವರ್ಗದವರ ಸೇವೆ ಮಾಡಬೇಕೆಂದು ಇದ್ದಾರೆ ಅವರೆಲ್ಲರೂ ಸಹ ಕರ್ನಾಟಕ ರಾಜ್ಯದಲ್ಲಿ ಬಸವಲಿಂಗಪ್ಪನವರ ಚಾರಿತ್ರ್ಯ ಸ್ವಲ್ಪ ನೋಡಬೇಕು. ಅವರಿಂದ ಮೊದಲು ನೀವು ಕಲಿತುಕೊಂಡರೆ ನಂತರ ನಾವು ಕಲಿತುಕೊಳ್ಳಬಹುದು ಎನ್ನತಕ್ಕಂಥ ಮಾತನ್ನು ನಾನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ. ಇಷ್ಟು ಹೇಳಿ ಮೃತರ ಆತ್ಮಕ್ಕೆ ಶಾಂತಿಯನ್ನು ಕೋರಿ ಅವರು ವಾಪಸ್ ಬರುವುದಾಗಿದ್ದರೆ ಅಪ್ಲಿಕೇಷನ್ ಹಾಕಬಹುದಿತ್ತು. ಅವರು ವಾಪಸ್ ಬರುವುದಿಲ್ಲ ಎನ್ನುವುದರಲ್ಲಿ ನಿರ್ವಿವಾದ ಇಲ್ಲ. ಮೃತರ ಕುಟುಂಬಕ್ಕೆ ದೇವರು ಒಳ್ಳೆಯದು ಮಾಡಲಿ ಎಂದು ಹಾರೈಸಿ ಮಾನ್ಯ ಉಪಾಧ್ಯಕ್ಷರೇ ತಮಗೂ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

**ಟಿ.ಎನ್. ನರಸಿಂಹಮೂರ್ತಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):–** ಮಾನ್ಯ ಸಭಾಪತಿಯವರೇ, ಇಂದು ತಾವು ಒಂದು ದುಃಖತಪ್ತ ಸಂತಾಪ ಸೂಚಕವನ್ನು ಏನು ಮಂಡಿಸಿದ್ದೀರಿ ರಾಷ್ಟ್ರ ಗಣ್ಯರು ಮತ್ತು ನಮ್ಮ ರಾಜ್ಯದಲ್ಲಿ ತಮ್ಮದೇ ಆದಂತಹ ಕ್ಷೇತ್ರದಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿದ ಗಣ್ಯರ ಬಗ್ಗೆ ನಮ್ಮ ಸಂತಾಪ ಸೂಚಿಸುವ ಸಂದರ್ಭದಲ್ಲಿ ಈಗಾಗಲೇ ಮಾನ್ಯ ಮುಖ್ಯಮಂತ್ರಿಗಳು ಮಾನ್ಯ ಪ್ರತಿಪಕ್ಷದ ನಾಯಕರು, ಸಭಾನಾಯಕರು ಅನೇಕ ಮುಖಂಡರುಗಳು ತಮ್ಮದೇ ಆದ ರೀತಿಯಲ್ಲಿ ತಮ್ಮ ಗುಣಗಾನ ಮಾಡಿದ್ದಾರೆ. ಮಾನ್ಯ ಉಪಸಭಾಪತಿಯವರೇ, ಪ್ರತಿಯೊಬ್ಬ ವ್ಯಕ್ತಿಯ ಬಗ್ಗೆ ನಾನು ಮಾತನಾಡುವುದಕ್ಕೆ ಹೊರಟರೆ ಬಹುಶಃ

ಕಾಲಾವಕಾಶ ಬಹಳಷ್ಟು ಬೇಕಾಗುತ್ತದೆ. ಎನ್ನುವುದು ಗೊತ್ತಿದ್ದರೂ ಕೂಡ ನೀವು ಇವತ್ತು ಎನೆಲ್ಲಾ ತಮ್ಮ ನಿರ್ಣಯದಲ್ಲಿ ಪ್ರಸ್ತಾಪ ಮಾಡಿದ್ದೀರಿ, ಮತ್ತು ಅನೇಕ ಮುಖಂಡರುಗಳು ಪ್ರಸ್ತಾಪ ಮಾಡಿದ್ದಾರೆ ಅದರಲ್ಲಿ ನಾನು ಕೂಡ ಧ್ವನಿಗೂಡಿಸಿ ಈ ಗಣ್ಯರ ಆತ್ಮಕ್ಕೆ ಶಾಂತಿಯನ್ನು ಕೋರುತ್ತೇನೆ. ಅವರುಗಳು ನಮಗೆ ಬಿಟ್ಟು ಹೋಗಿರತಕ್ಕಂಥ ಕೆಲಸಗಳು ಏನಿವೆ ಹಾಗೂ ಮಾನ್ಯ ನಾಗೇಗೌಡರು, ಮತ್ತಿತರ ಅನೇಕ ಸ್ನೇಹಿತರು ಮಾತನಾಡಿ ಹೇಳಿದ ಹಾಗೆ ಅವುಗಳನ್ನು ನಾವು ನೆನಪಿನಲ್ಲಿಟ್ಟುಕೊಂಡು, ಅವುಗಳನ್ನು ಉಳಿಸಿಕೊಂಡು ಹೋಗತಕ್ಕಂಥಾದ್ದು ಒಂದೇ ನಮಗೆ ಉಳಿದಿರುವ ಮಾರ್ಗ. ಒಬ್ಬ ವ್ಯಕ್ತಿ ಹುಟ್ಟಿದ ಮೇಲೆ ಅಂತ್ಯವಾಗಲೇಬೇಕು ಎನ್ನುವುದು ಒಂದು ಸಿದ್ಧಾಂತ. ವ್ಯಕ್ತಿ ಹುಟ್ಟಿದ ಮೇಲೆ ಸಾಯುತಕ್ಕಂಥಾದ್ದು ಶತಸಿದ್ಧ, ಎನ್ನತಕ್ಕಂಥಾದ್ದು, ಆದರೆ ಯಾವಾಗ ಸಾಯುತ್ತಾನೆ ಎನ್ನುವುದು ಮಾತ್ರ ನಿಗೂಢವಾದ ವಿಷಯ. ಮಾನ್ಯ ಸಭಾಪತಿಯವರೆ, ಶ್ರೀಮಾನ್ ಬಸವಲಿಂಗಪ್ಪನವರು ಕಳೆದ 42 ವರ್ಷಗಳಿಂದ ಕರ್ನಾಟಕ ರಾಜ್ಯದ ರಾಜಕೀಯದಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರಾಗಿ 1948 ರಿಂದ ಕಾಂಗ್ರೇಸ್ ಪಕ್ಷದಲ್ಲಿ ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಮತ್ತು ರಾಷ್ಟ್ರ ಮಟ್ಟದ ಅನೇಕ ಕಾಂಗ್ರೆಸ್ ಪಕ್ಷದ ವೇದಿಕೆಗಳಲ್ಲಿ ಅವರು ಮುಖಂಡತ್ವವನ್ನು ವಹಿಸಿದ್ದಂಥದ್ದನ್ನು ನೋಡಿದ್ದೇವೆ. ನಾವು ಶಾಲೆಯಲ್ಲಿ, ಮಾಧ್ಯಮಿಕ ಶಾಲೆಯಲ್ಲಿ ಪ್ರೌಢ ಶಾಲೆಯಲ್ಲಿ ವಿದ್ಯಾರ್ಥಿಗಳಾಗಿದ್ದಾಗಲೇ ಅವರು ನಮ್ಮ ನಾಯಕರು ಎನ್ನತಕ್ಕಂಥಾದ್ದನ್ನು ಒಪ್ಪಿಕೊಂಡು ಅವರನ್ನು ಗೌರವವಾಗಿ ಕಾಣುತ್ತಿದ್ದೆವು. ಬಹುಶಃ ನಮ್ಮ ಭಾಗ್ಯವೇನೆಂದರೆ ಅವರ ಜೊತೆಯಲ್ಲಿ ಸಹೋದ್ಯೋಗಿಯಾಗಿ, ಮಂತ್ರಿಮಂಡಲದಲ್ಲೂ ಕೂಡಾ, ಶ್ರೀಮಾನ್ ವೀರೇಂದ್ರ ಪಾಟೀಲರ ಮಂತ್ರಿಮಂಡಲದಲ್ಲಿ, ಶ್ರೀಮಾನ್ ಬಂಗಾರಪ್ಪನವರ ಮಂತ್ರಿ ಮಂಡಲದಲ್ಲಿ ಅವರೊಡನೆ ಸೇವೆ ಮಾಡುವಂಥ ಭಾಗ್ಯ ನನ್ನ ಪಾಲಿಗೆ ಬಂದಿತ್ತು. ಬಹುಶಃ ಯಾವುದೇ ಮಂತ್ರಿಮಂಡಲದ ಸಭೆಯಲ್ಲಿ ಅವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಬಗ್ಗೆ ಬಹುಶಃ ಎಷ್ಟೊಂದು ರೀತಿಯಲ್ಲಿ ನಮಗೆ ಮಾರ್ಗದರ್ಶನ ನೀಡುತ್ತಿದ್ದರು. ಅದು ಬಹುಶಃ ಬಡ್ತಿಯಲ್ಲಿ ಕೊಡತಕ್ಕಂಥ ವಿಷಯ ಇರಬಹುದು ಮತ್ತು ನೇಮಕಾತಿಯಲ್ಲಿ ಇರತಕ್ಕಂಥಾದ್ದು ಇರಬಹುದು. ಬಡವರಿಗೆ ಕಾರ್ಯಕ್ರಮ ಕೊಡತಕ್ಕಂಥ ಕಾರ್ಯಕ್ರಮದಲ್ಲಿ ಇರಬಹುದು. ಖುದ್ದು ಮಂತ್ರಿಮಂಡಲದ ಸಭೆಯಲ್ಲಿ ಅವರನ್ನು ಚೆನ್ನಾಗಿ ಅರ್ಥ ಮಾಡಿಕೊಂಡಂಥ ವ್ಯಕ್ತಿಗಳಲ್ಲಿ ನಾನು ಇದ್ದೇನೆ. ಶ್ರೀಮಾನ್ ಬಸವಲಿಂಗಪ್ಪನವರು

ಸಾಮಾನ್ಯ ಬೆಂಗಳೂರು ನಗರ ಸಭೆಯಲ್ಲಿ ಸದಸ್ಯರಾಗಿದ್ದುಕೊಂಡು ಅವರ ಜೀವನವನ್ನು ಪ್ರಾರಂಭ ಮಾಡಿ, ವಕೀಲರಾಗಿ, ಕರ್ನಾಟಕ ಏಕೀಕರಣದಲ್ಲಿ ಶ್ರೀಮಾನ್ ನಿಜಲಿಂಗಪ್ಪನವರ ಜೊತೆಯಲ್ಲಿ ಇದ್ದುಕೊಂಡು, ಅವರು ಅಧ್ಯಕ್ಷರಾಗಿದ್ದರೆ ಇವರು ಕಾರ್ಯದರ್ಶಿಗಳಾಗಿ ಸೇವೆ ಮಾಡಿದ್ದಂಥಾದನ್ನು ನಾವು ಬಹಳ ಹತ್ತಿರದಲ್ಲೇ ಗಮನಿಸಿಕೊಂಡಿದ್ದೇವೆ. ಅವರು ನಮ್ಮ ರಾಜ್ಯದಲ್ಲಿ ಸುಮಾರು 22 ವರ್ಷಗಳ ಕಾಲ ಕೆಳಮನೆಯಲ್ಲಿ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಸುಮಾರು 10 ವರ್ಷಗಳ ಕಾಲ ರಾಜ್ಯದ ಮಂತ್ರಿಮಂಡಲದಲ್ಲಿ ಸದಸ್ಯರಾಗಿದ್ದುಕೊಂಡು ಬಹಳ ಅಪೂರ್ವವಾದ ಸಾಧನೆಯನ್ನು ಮಾಡಿದ್ದಾರೆ. ಬಹುಶಃ ಇದೆಲ್ಲಾ ಕಾಲಕ್ಕೂ ಮರೆಯದೇ ಇರತಕ್ಕಂಥ ವಿಚಾರ ಎನ್ನತಕ್ಕಂಥಾದ್ದನ್ನು ತಾವೆಲ್ಲರೂ ಕೂಡಾ ವ್ಯಕ್ತಪಡಿಸಿದ್ದೀರಿ. ಮಾನ್ಯ ಮುಖ್ಯ ಮಂತ್ರಿಗಳೂ ಅವರ ಮನೆಗೆ ಖುದ್ದಾಗಿ ಹೋಗಿ ಅವರ ಬಗ್ಗೆ ಅಪಾರವಾದ ರೀತಿಯಲ್ಲಿ ಗೌರವವನ್ನು ಸೂಚಿಸಿದ್ದಾರೆ, ರಾಜ್ಯದ ಜನತೆಯ ಪರವಾಗಿ ಶ್ರೀಮಾನ್ ಬಸವಲಿಂಗಪ್ಪನವರು ಕೈಗೊಂಡಂಥ ಅನೇಕ ಕಾರ್ಯಕ್ರಮಗಳು ಏನಿವೆ ಈ ಕಾರ್ಯಕ್ರಮಗಳು ಅಪೂರ್ಣವಾಗಿರತಕ್ಕಂಥಾದ್ದನ್ನು ಪೂರ್ಣಗೊಳಿಸತಕ್ಕಂಥ ಕೆಲಸದಲ್ಲಿ ನಮ್ಮ ಸರ್ಕಾರ ಮುಂದಾಗಬೇಕು ಎನ್ನತಕ್ಕಂಥ ಒಂದು ನಮ್ರ ಸಲಹೆಯನ್ನು ಕೂಡಾ ನಾನು ಸರ್ಕಾರಕ್ಕೆ ಕೊಡುತ್ತೇನೆ. ಮಾನ್ಯ ಬಸವಲಿಂಗಪ್ಪನವರು ಈ ಸದನದ ನಾಯಕರಾಗಿಯೂ ಕೆಲಸ ಮಾಡಿದ್ದಾರೆ. ಇನ್ನೂ ಅನೇಕ ಪ್ರಮುಖವಾದ ಖಾತೆಗಳನ್ನು ವಹಿಸಿಕೊಂಡು ಕೆಲಸವನ್ನು ಮಾಡಿದ್ದಾರೆ. "ಜಾಡಮಾಲಿಗಳು" ಎಂಬ ಪದವನ್ನು ಕೇಳಿ ಇವರು ಅಸ್ಪೃಶ್ಯರು, ಸಮಾಜದಲ್ಲಿ ಇವರು ಕೊನೆಯ ಸ್ಥಾನದಲ್ಲಿರುವಂಥವರು, ಬೇರೆಯವರ ಮಲವನ್ನು ತಮ್ಮ ತಲೆಯ ಮೇಲೆ ಹೊತ್ತುಕೊಳ್ಳುವವರು ಈ ಜನರು, ಇವರು ಸಹ ನಮ್ಮ ದೇಶದ ಪ್ರಜೆಗಳು. ಇದನ್ನು ತಪ್ಪಿಸಬೇಕು, ಇವರನ್ನು ಮೇಲಕ್ಕೆ ಎತ್ತಬೇಕು ಎಂಬ ಒಂದು ಕಳಕಳಿಯಿಂದ "ಜಾಡಮಾಲಿಗಳು" ಎಂಬ ಪದದ ಬದಲಾಗಿ "ಪೌರಕಾರ್ಮಿಕರು" ಎಂಬ ಪದವನ್ನು ಉಪಯೋಗಿಸಿದ್ದನ್ನು ಯಾರೂ ಮರೆಯುವ ಹಾಗಿಲ್ಲ. ಒಬ್ಬರ ಮಲವನ್ನು ಮತ್ತೊಬ್ಬರು ತಮ್ಮ ತಲೆಯ ಮೇಲೆ ಹೊತ್ತುಕೊಳ್ಳತಕ್ಕಂಥ ಹೇಸಿಗೆ ಪದ್ಧತಿಯು ಏನಿದೆ ಅದನ್ನು ತೊಡೆದು ಹಾಕಲು ಅದರ ಬಗ್ಗೆ ರಾಷ್ಟ್ರೀಯ ನೀತಿಯನ್ನು, ಒಂದು ಕಾರ್ಯಕ್ರಮವನ್ನು ರೂಪಿಸುವಲ್ಲಿ ಅದನ್ನು ಕಾರ್ಯರೂಪಕ್ಕೆ ತರುವಲ್ಲಿ ಶ್ರಮಿಸಿ ಒಂದು ಐತಿಹಾಸಿಕ ಮಹತ್ಕಾರ್ಯವನ್ನು ಮಾಡಿದ್ದಾರೆ. ಮಾನವ ಕುಲಕ್ಕೆ ಕಳಂಕಪ್ರಾಯವಾಗಿರತಕ್ಕಂಥ

"ಮಲ ಹೊರುವ" ಪದ್ಧತಿಯನ್ನು ರದ್ದು ಮಾಡಿದ ಕೀರ್ತಿಯು ದಿವಂಗತ ಬಸವಲಿಂಗಪ್ಪನವರಿಗೇ ಸಲ್ಲಬೇಕು. ಇಂಥ ಒಂದು ಮಹಾನ್ ಕೀರ್ತಿಯು ಅವರಿಗೆ ಸಲ್ಲಬೇಕೆಂಬ ವಿಚಾರದಲ್ಲಿ ಬೇರೆ ಮಾತಿಲ್ಲ. ನೇಗಿಲು ಹಿಡಿದು ತನ್ನ ಜೀವನವೆಲ್ಲ ದುಡಿದು ಜಮೀನ್ದಾರರಿಗೆ ಆಸರೆಯಾಗಿದ್ದ ಗೇಣಿದಾರರಿಗೆ ಭೂಒಡೆತನವನ್ನು ಕೊಡಿಸಲು ಬಸವಲಿಂಗಪ್ಪನವರ ಶ್ರಮ ಸ್ಮರಣೀಯ. ಯಾವ ಕಮ್ಯೂನಿಸ್ಟ್ ರಾಷ್ಟ್ರದಲ್ಲಿಯೂ ಕೂಡ ಆಗದ ಕೆಲಸವನ್ನು ನಮ್ಮಲ್ಲಿ ಮಾಡಿ ತೋರಿಸಿದರು. ಅಂಥ ಗೇಣಿದಾರರನ್ನು ಭೂಮಾಲೀಕರನ್ನಾಗಿ ಮಾನ್ಯ ದೇವರಾಜ್ ಅರಸ್‌ರವರ ಕಾಲದಲ್ಲಿ ಅವರ ನೇತೃತ್ವದಲ್ಲಿ ಬಸವಲಿಂಗಪ್ಪನವರು ಮಾಡಿದರು. ಆ ಕೀರ್ತಿಯು ಅವರಿಗೆ ಸಲ್ಲುತ್ತದೆ. ಆ ಕಾಲದಲ್ಲಿ ಬಹುಶಃ ಲಕ್ಷಾಂತರ ಜನ ಗೇಣಿದಾರರನ್ನು ಭೂಮಾಲೀಕರನ್ನಾಗಿ ಮಾಡಿದರು, ಅಲ್ಲದೆ ತಮ್ಮ ಭೂಮಿಯನ್ನು ಕಳೆದುಕೊಂಡವರಿಗೆ ತಿರುಗಿ ಕೊಡಿಸಿದರು. ಹೀಗೆ ಬಹಳಷ್ಟು ಸಾಧನೆಗಳನ್ನು ಅವರು ಮಾಡಿದ್ದಾರೆ. ಒಟ್ಟಿನಲ್ಲಿ ಅವರು ನಮ್ಮ ದಲಿತ ಜನಾಂಗದ ನೇತಾರರಾಗಿದ್ದರು. ರಾಷ್ಟ್ರಮಟ್ಟದಲ್ಲಿ ಜಗಜೀವನರಾಮ್‌ರವರ ನಂತರ ಬಸವಲಿಂಗಪ್ಪನವರೇ ದಲಿತ ಜನಾಂಗದ ನಾಯಕರಾಗಿದ್ದರು ಎಂಬ ಮಾತನ್ನು ಹೇಳಬೇಕಾಗುತ್ತದೆ. ಪೂಜ್ಯ ಅಂಬೇಡ್ಕರ್‌ರವರು ನಮ್ಮ ಭಾರತದ ಸಂವಿಧಾನವನ್ನು ಬರೆದಂಥವರು. ಅಂಥವರು ಎಲ್ಲಾ ಕಾಲಕ್ಕೂ ಅಮರರಾಗಿ ಇರತಕ್ಕಂಥ ಒಂದು ವ್ಯಕ್ತಿತ್ವವನ್ನು ಪಡೆದಿದ್ದರು. ಹೀಗೆ ಡಾ॥ ಅಂಬೇಡ್ಕರ್, ಜಗಜೀವನರಾಮ್‌ರವರನ್ನು ಬಿಟ್ಟರೆ ನಮ್ಮ ಬಸವಲಿಂಗಪ್ಪನವರೇ ನಂತರದ ಸ್ಥಾನದಲ್ಲಿ ಇದ್ದವರಾಗಿದ್ದರು. ಆದರೆ ರಾಷ್ಟ್ರಮಟ್ಟದಲ್ಲಿ ಅವರಿಗೆ ಯಾವ ರಾಜಕೀಯ ಸ್ಥಾನಮಾನ ಏನು ಸಲ್ಲಬೇಕಾಗಿತ್ತೋ ಅಷ್ಟು ಸಲ್ಲಲಿಲ್ಲ ಎಂದು ಹೇಳಬೇಕಾಗುತ್ತದೆ. ಆ ಬಗ್ಗೆ ನಮಗೆಲ್ಲರಿಗೂ ಬಹಳ ದುಃಖವಾಗುತ್ತಿದೆ. ರಾಷ್ಟ್ರಮಟ್ಟದಲ್ಲಿ ಅವರಿಗೆ ಸ್ಥಾನಮಾನಗಳು ಸಿಗಬೇಕಾದ ಪ್ರಮಾಣದಲ್ಲಿ ಸಿಗಲಿಲ್ಲ ಎನ್ನುವ ಕೊರತೆಯು ನಮ್ಮೆಲ್ಲರನ್ನೂ ಇವೊತ್ತಿಗೂ ಕಾಡುತ್ತಿದೆ. ಆದರಿಂದ ನಮ್ಮ ರಾಷ್ಟ್ರವನ್ನು ಆಳತಕ್ಕಂಥವರು, ಯಾರ್‍ಯಾರಿಗೆ ಆ ಸ್ಥಾನ ಮಾನಗಳನ್ನು ಕೊಟ್ಟು ಆ ಜನಾಂಗಕ್ಕೆ ಗೌರವವನ್ನು ಕೊಡಬೇಕಾಗುತ್ತದೆ. ಆ ಮುಖೇನ ಅವರು ರಾಷ್ಟ್ರದಲ್ಲಿ ಸೇವೆ ಮಾಡತಕ್ಕಂಥಾದ್ದು ನಮಗೆ ಗೊತ್ತಾಗುತ್ತದೆ. ಹಾಗೆಯೇ ಯಾರ್‍ಯಾರಿಗೆ ಯಾವ ರೀತಿಯ ಕಷ್ಟಗಳು ಇವೆ ಎಂಬುದು ನಮಗೂ ಗೊತ್ತಾಗುತ್ತದೆ. ಈ ರೀತಿಯಲ್ಲಿ ಬಸವಲಿಂಗಪ್ಪನವರು ಮಾಡಿದ ಸೇವೆ ಮತ್ತು ಅವರು ಪಡೆದಿರತಕ್ಕಂಥ ಕೀರ್ತಿಯು ಎಂದೆಂದಿಗೂ ಅಮರವಾಗಿರುತ್ತದೆ ಎಂದು ಹೇಳಬಯಸುತ್ತೇನೆ.

ಈ ಸಂದರ್ಭದಲ್ಲಿ ಆ ಕುರಿತು ಮಾತನಾಡಲು ನನಗೆ ಅವಕಾಶ ಕೊಟ್ಟಿದ್ದಕ್ಕಾಗಿ ಕೃತಜ್ಞತೆಗಳನ್ನು ತಮಗೆ ಸಲ್ಲಿಸುತ್ತಾ ದಿವಂಗತರುಗಳ ಆತ್ಮಕ್ಕೆ ಚಿರಶಾಂತಿಯನ್ನು ಮತ್ತೊಮ್ಮೆ ಕೋರಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಟಿ.ಎ. ರಂಗಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-** ಮಾನ್ಯ ಸಭಾಪತಿಯವರೇ ನನ್ನ ಮಾನ್ಯ ಸ್ನೇಹಿತರುಗಳು ಈಗಾಗಲೇ ಈ ಕುರಿತು ಸಾಕಷ್ಟು ತಮ್ಮ ವಿಚಾರಗಳನ್ನು ಸಭೆಯ ಮುಂದೆ ಮಂಡಿಸಿದ್ದಾರೆ. ಎಲ್ಲಾ ದಿವಂಗತ ಗಣ್ಯರುಗಳ ಮಾರ್ಗದರ್ಶನವು ನಮಗಿರಲಿ ಎಂದು ಹೇಳುತ್ತಾ ದಿವಂಗತ ಬಸವಲಿಂಗಪ್ಪನವರ ಬಗ್ಗೆ ಎರಡು ಮಾತುಗಳನ್ನು ಹೇಳಲಿಚ್ಛಿಸುತ್ತೇನೆ. ನಾನು ವಿದ್ಯಾರ್ಥಿ ದಿಸೆಯಿಂದಲೇ ಅವರ ಸಂಪರ್ಕವನ್ನು ಇಟ್ಟುಕೊಂಡಿದ್ದೇನೆ. ಒಮ್ಮೆ ಅವರು ಕನ್ನಡ ಸಾಹಿತ್ಯದ ಬಗ್ಗೆ ಬೂಸ ಎಂಬ ಒಂದು ಪದ ಪ್ರಯೋಗ ಮಾಡಿ ಆ ಕುರಿತು ಉಂಟಾದ ಕ್ಷೋಭೆಯಿಂದಾಗಿ ತನ್ನ ಅಧಿಕಾರವನ್ನೆ ಅವರು ತ್ಯಜಿಸಬೇಕಾಗಿ ಬಂತು. ಬಹುಶಃ ಅವರು ಕನ್ನಡ ಸಾಹಿತ್ಯ ಎಲ್ಲವನ್ನೂ ಬೂಸ ಸಾಹಿತ್ಯ ಎಂದು ಹೇಳಿರಲಿಲ್ಲ. ಕನ್ನಡದಲ್ಲಿಯೂ ಬೂಸಾ ಸಾಹಿತ್ಯ ಇದೆ ಎಂದು ಹೇಳಿರಬಹುದು. ಆದರೆ ಇವರ ವಾದವನ್ನು ಒಂದು ಸಂಘಟಿತ ವರ್ಗ ಒಪ್ಪದೇ ಹೋಯಿತು. ಅದಕ್ಕಾಗಿ ಇವರು ಅಧಿಕಾರ ತ್ಯಾಗ ಮಾಡಬೇಕಾಯಿತು. ಇಂಥ ಅನೇಕ ವಿಚಾರಗಳನ್ನು ಅವರು ತಮ್ಮ ಎದುರು ಬಂದಾಗ ಪ್ರತಿಭಟನೆ ಮಾಡತಕ್ಕಂಥ ಒಂದು ಮನೋಭಾವನೆಯನ್ನು ಹೊಂದಿರತಕ್ಕಂಥ ಧೀಮಂತ ವ್ಯಕ್ತಿಯಾಗಿದ್ದರು. ಇವರನ್ನು ಕೇವಲ ದಲಿತರ ನಾಯಕ ಎನ್ನುವುದನ್ನು ನಾನು ಒಪ್ಪುವುದಿಲ್ಲ. ಅವರು ಶೋಷಿತ ವರ್ಗದ ನಾಯಕರಾಗಿದ್ದರು. ಶೋಷಿತವರ್ಗದ ಏಳಿಗೆಗಾಗಿ ಅವರು ಶ್ರಮಿಸಿ ವಿಚಾರ ವಿನಿಮಯ ಮಾಡಿದ್ದವರು. ಅವರಿಗೆ ದೇವರ ಮೇಲೆ ನಂಬಿಕೆ ಇರಲಿಲ್ಲ. ಅವರು ಆಸ್ತಿಕರಲ್ಲ ನಾಸ್ತಿಕರು ಎಂದು ಪ್ರಸ್ತಾಪವಾಯಿತು. ನಾಸ್ತಿಕರು ಅಂದರೆ ಪ್ರೋಗ್ರೆಸಿವ್ ವಿಚಾರ ಇರತಕ್ಕಂಥವರು ಎಲ್ಲವನ್ನೂ ವೈಜ್ಞಾನಿಕ ಮತ್ತು ಆಧುನಿಕ ರೀತಿನೀತಿಗಳಿಗೆ ಹೋಲಿಸಿ ನೋಡುವ ಮನೋಭಾವನೆ ಮತ್ತು ಆಚರಣೆಯನ್ನು ಹೊಂದಿರತಕ್ಕಂಥವರು, ಆದ್ದರಿಂದ ನಾಸ್ತಿಕರು ಅಂದರೆ ತಪ್ಪು ಅಭಿಪ್ರಾಯವನ್ನು ಹೊಂದಬೇಕಾಗಿಲ್ಲ ಎಂದು ನಾನು ಅಭಿಪ್ರಾಯವನ್ನು ಪಡುತ್ತೇನೆ. ಈ ಸಮಾಜದಲ್ಲಿ ಯಾವುದು ಒಂದು ಸಂಘಟಿತ ವರ್ಗ ಇತ್ತು ಧರ್ಮ ದೇವರು ದಿಂಡರು ಎಂದಿಟ್ಟು ಶೋಷಣೆ ಮಾಡುತ್ತಿತ್ತೋ. ಸುಲಭವಾಗಿ ಅಂಥವರಿಗೆಲ್ಲ ಇದೆಲ್ಲ ಸುಳ್ಳು ಕಣ್ರಯ್ಯ ಪೊಳ್ಳು ಅಂತ ಹೇಳುವಂತಹ ಧೀಮಂತವ್ಯಕ್ತಿ ನಾವು ಅನೇಕ ಸಲ

ವಿದ್ಯಾರ್ಥಿಯಾಗಿದ್ದಾಗ, ಭೇಟಿಯಾಗಿದ್ದೆವು. ಅವರು ಯಾವ ಜಾತಿ ಧರ್ಮದ ಬಗ್ಗೆಯಾಗಲೀ ವಿರೋಧವಾಗಿ ಮಾತನಾಡುತ್ತಿರಲಿಲ್ಲ. ಕೆಲವರು ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾರದೆ ಏನು ಮಾಡಿದರು ಜಾತಿ ಬಣ್ಣ ಬಳಿದುಬಿಟ್ಟು, ಜಾತಿ ಬಣ್ಣ ಏಕೆ ಬಳೀತಾರೆ? ಬಸವಲಿಂಗಪ್ಪನವರು ಬಂದಿರೋದು ಬಹಳ ಕೆಳದರ್ಜೆಯಿಂದ ಬಂದಿರೋರು, ಯುಗಯುಗಾಂತರದಿಂದ ಶೋಷಣೆ ಆಗಿರೋರು ಆ ಶೋಷಣೆಗೆ ನಾವು ಆಗದ್ದಿದರೂ ನಮ್ಮಂತವರು ಗುರಿಯಾಗಿದ್ದಾರೆ, ನಾವೆಲ್ಲ ಶೋಷಣೆ ಮಾಡಿದ್ದೇವೆ ಯಾವ ದಲಿತ ವರ್ಗ ಇದೆ ಅಂತ್ಯಜರು ಅವರನ್ನು ಒಂದಲ್ಲ ಒಂದು ರೀತಿ ಬಹಳ ಹಿಡಿತದಲ್ಲಿಟ್ಟುಕೊಂಡು ಶೋಷಣೆ ಮಾಡಿದ್ದೇವೋ ಅಂತಹ ವರ್ಗದಲ್ಲಿ ಬಂದ ಒಂದು ಧೀಮಂತ ಶಕ್ತಿ. ಇವತ್ತೇನು ಕಳೆದುಕೊಂಡಿದ್ದೇವೆಂದರೆ ಯಾವ ಒಂದು ಶೋಷಿತ ವರ್ಗ ಇತ್ತೋ ಅದಕ್ಕೆ ಶಕ್ತಿ ತುಂಬೋ ಒಂದು ಶಕ್ತಿ ರೂಪಿಸಿಕೊಂಡಿದ್ದ ವ್ಯಕ್ತಿಯನ್ನು ನಾವು ಕಳೆದುಕೊಂಡಿದ್ದೇವೆ. ಅದೊಂದು ಫೋರ್ಸ್. ಅನೇಕ ಸಲ ನನಗೂ ಬಸವಲಿಂಗಪ್ಪನವರಿಗೂ ಜಿಲ್ಲಾಪರಿಷತ್ತಿನಲ್ಲಿ ವಾಗ್ವಾದ ಬಂದು ಕೋಪ ಮಾಡಿಕೊಳ್ಳುತ್ತಿದ್ದೆ. ಆದರೂ ಕೂಡ ಇವೆಲ್ಲ ತಪ್ಪಿಲ್ಲ ಬಸವಲಿಂಗಪ್ಪನೋರೇ, ನೀವು ಸ್ವಲ್ಪ ದುಡುಕಿ ಮಾತಾಡ್ತೀರಿ ಅಂತ ಹೇಳುತ್ತಿದ್ದೆವು. ನಾನು ಅಂದ್ಕೊಂಡೆ ಬಸವಲಿಂಗಪ್ಪ ಯಾವತ್ತೂ ದುಡುಕಿ ಮಾತಾಡೋಲ್ಲ. ಎಲ್ಲಿ ಶೋಷಣೆ ಇದೆ, ಎಲ್ಲಿ ಅನ್ಯಾಯ ಇದೆ, ಎಲ್ಲಿ ಒಬ್ಬನನ್ನು ಅನ್ಯಾಯದಿಂದ ಮೂಲೆಗುಂಪು ಮಾಡ್ತಾರೆ ಅಂತ ತಾವು ಅವರು ದುಡುಕಿ ಮಾತಾಡೋರು ಅಂತ ನನಗೆ ಅರ್ಥವಾಗುವುದು. ಏಕೆ ದುಡುಕಿ ಮಾತಾಡ್ತಾರೆ ಅಂದರೆ ಅವರದು ಸ್ವಲ್ಪ ಒರಟು ಭಾಷೆ ನನ್ನ ಹಾಗೆ. ಯಾವುದನ್ನೇ ಆಗಲಿ ದಿಢೀರನೆ ಹೇಳಿಬಿಡೋರು. ಅದನ್ನೇ ನಯವಾಗಿ ಹೇಳಬಹುದಿತ್ತು ಆ ಒಂದು ದೌರ್ಬಲ್ಯ ಅವರಲ್ಲಿತ್ತು. ಆದರೆ ಈ ಸಮಾಜದ ಜನರ ಬಗ್ಗೆ ಅವರಿಗಿದ್ದ ಕಾಳಜಿ ಬದಲಾವಣೆಯಾಗಬೇಕೆಂದು ಇಟ್ಟುಕೊಂಡಿದ್ದರೆ ಬಹುಶಃ ಈಗ ಏಳೆಂಟು ಜನರ ನಿಧನದ ಬಗ್ಗೆ ನಿರ್ಣಯ ತಂದಿದ್ದೀರಿ. ಇವರಿಗೂ ಅವರಿಗೂ ಸಂಬಂಧಾನೇ ಇಲ್ಲ. ಇವರದೇ ಒಬ್ಬ ಪ್ರತ್ಯೇಕ ಶಕ್ತಿಯನ್ನು ರೂಪಿಸಿಕೊಂಡಂತಹ ವ್ಯಕ್ತಿ ಆ ವಿಚಾರದಲ್ಲಿ ನಮ್ಮ ಸುಬ್ಬಯ್ಯನವರು ಹೇಳಿದರು. ಕಾಲಿಲ್ಲದವರಿಗೆ ಕಾಲು ಕೊಡೋದು, ಕೈ ಇಲ್ಲದೋರಿಗೆ ಕೈ ಎತ್ತುವುದು ಮತ್ತು ಬಾಯಿದ್ರೂನೂ ಮಾತಾಡೋಕೆ ಬರದೇ ಇರೋದು, ಇನ್ನೊಂದು ಶಬ್ದ ಸೇರಿಸಬೇಕಾಗಿದೆ ಏಕೆಂದರೆ ಪ್ರತಿಭಟನೆ ಮಾಡೋಕೆ ಶಕ್ತಿ ಇಲ್ಲದೇ ಇದ್ದರೂ ಪ್ರತಿಭಟನೆ ಮಾಡೋಕಿಲ್ಲ. ಅಂತಹ

ಪ್ರತಿಭಟನೆ ಮಾಡೋ ಶಕ್ತಿಯನ್ನು ರೂಪಿಸಿಕೊಡೋದು ಹೇಗೆ ಎಂದು ವಿಚಾರ ಮಾಡಿದವರು ಬಸವಲಿಂಗಪ್ಪನವರು ಎಂದು ನನ್ನ ಅಭಿಪ್ರಾಯ. ಹೆಚ್ಚಿಗೆ ಏನೂ ಮಾತಾಡುವುದಿಲ್ಲ ಆದರೆ ಎಲ್ಲಿ ಹೋದರೂ ಅವರು ಯಾವುದೋ ಒಂದು ಸಿದ್ಧಾಂತಕ್ಕೆ ಸೀಮಿತವಾಗಿ ಮಾತಾಡುತ್ತಾ ಇದ್ದರು. ಬುದ್ಧ ಮತ್ತು ಅಂಬೇಡ್ಕರ್ ಬಗ್ಗೆ ಸೀಮಿತವಾಗಿ ಅವರು ಜಾಸ್ತಿ ಮಾತಾಡುತ್ತಿದ್ದರು. ಹೋದ ಕಡೆಯೆಲ್ಲ ಅದನ್ನು ಹೇಳೋರು. ಇಂತಹ ಒಬ್ಬ ಶಕ್ತಿಯನ್ನು ಕಳೆದುಕೊಂಡಿದ್ದೇವೆ. ಇಂತಹ ಶಕ್ತಿಯನ್ನು ಇನ್ನ್ಯಾರಾದರೂ ತುಂಬಿಸಿ ಮೈಗೂಡಿಸಿಕೊಳ್ಳಲಿ ಅಂತ ಒಂದು ವ್ಯಕ್ತಿತ್ವ ನಾವು ಬೆಳೆಸಿಕೊಳ್ಳಲಿ ಹೇಳಿ ಇವತ್ತು ಅವರ ಆತ್ಮಕ್ಕೆ ಶಾಂತಿ ಕೋರಿ ಈ ನಾಲ್ಕು ಮಾತು ಆಡುವುದು ನನ್ನ ಕರ್ತವ್ಯ ಅಂತ ಹೇಳಿ ನನ್ನ ನಾಲ್ಕು ಮಾತು ಮುಗಿಸುತ್ತೇನೆ.

**ಡಾ॥ ಸಿದ್ಧಲಿಂಗಯ್ಯ (ನಾಮ ನಿರ್ದೇಶನ ಹೊಂದಿರುವವರು):–** ಸನ್ಮಾನ್ಯ ಉಪಸಭಾಪತಿಯವರೇ, ತಮ್ಮ ನಿರ್ಣಯಕ್ಕೆ ಅನುಮೋದನೆ ನೀಡುತ್ತಾ ಕೆಲವು ಅಭಿಪ್ರಾಯಗಳನ್ನು ಹಂಚಿಕೊಳ್ಳುವುದಕ್ಕೆ ಇಷ್ಟಪಡುತ್ತಾ ಇದ್ದೇನೆ. ಈಗಾಗಲೇ ಹಿರಿಯ ಸದಸ್ಯರು ಹೇಳಿದಂತೆ ನಾನಾ ರಂಗದ ಗಣ್ಯರನ್ನು ಕಳೆದುಕೊಂಡು ನಮ್ಮ ರಾಜ್ಯ ಮತ್ತು ನಮ್ಮ ದೇಶ ಬಡವಾಗಿದೆ. ಅದರಲ್ಲಿಯೂ ಸಹ ಮಾನ್ಯ ಬಸವಲಿಂಗಪ್ಪನವರ ಬಗ್ಗೆ ನಮಗೆ ತುಂಬಾ ಗೌರವ ಇತ್ತು. ಅಭಿಮಾನ ಇತ್ತು. ಅವರು ಶೋಷಿತ ವರ್ಗದ ಪ್ರತಿನಿಧಿಯಾಗಿದ್ದರು ಮತ್ತು ಒಬ್ಬ ಅಕ್ಕರೆಯ ನಾಯಕರಾಗಿದ್ದರು. ಶೋಷಿತ ವರ್ಗದ ನಾಯಕನಿಗೆ ಇರಬೇಕಾದಂಥ ತುಳಿತಕ್ಕೆ ಒಳಪಟ್ಟ ಜನಗಳನ್ನು ಕುರಿತು ಪ್ರೀತಿ ಮತ್ತು ತುಳಿಯುವ ಜನರನ್ನು ಕುರಿತು ಸಿಟ್ಟು ಎರಡೂ ಕೂಡ ಅವರ ವ್ಯಕ್ತಿತ್ವದಲ್ಲಿ ಮೇಳೈಸಿತ್ತು ಎಂದರೆ ತಪ್ಪಾಗಲಾರದು. ಅವರ ಚಿಂತನೆಗಳು ನಮ್ಮ ಕರ್ನಾಟಕ ರಾಜ್ಯದ ಹಲವಾರು ಜನಪರ ಚಳುವಳಿಗಳ ಹುಟ್ಟಿಗೆ ಕಾರಣ ಆದವು ಎಂದು ಈಗಾಗಲೇ ಹೇಳಿದ್ದಾರೆ. ಅಧಿಕಾರ ಸಂತೋಷದ ಸಾಧನ ಅಲ್ಲ. ಅದು ಸಮಾಜ ಬದಲಾವಣೆಯ ಒಂದು ಸಾಧನ ಎಂದು ಅವರು ಚೆನ್ನಾಗಿ ಪ್ರಾಮಾಣಿಕವಾಗಿ ಅರ್ಥ ಮಾಡಿಕೊಂಡಿದ್ದರು. ಅದೇ ರೀತಿ ಅಧಿಕಾರ ಬಂದಾಗ ಸಮಾಜವನ್ನು ಬದಲಾಯಿಸುವ ಒಂದು ಶಕ್ತಿಯಾಗಿ ಒಂದು ಅಸ್ತ್ರವನ್ನಾಗಿ ಅವರು ಪರಿಣಾಮಕಾರಿಯಾಗಿ ಬಳಸಿದ್ದು ಅವರ ಒಂದು ಶ್ರೇಷ್ಠತೆ ಎಂದು ನನ್ನ ಅಭಿಪ್ರಾಯ ಮತ್ತು ಕೊನೆಗಾಲದಲ್ಲಿ ಯಾವ ಇಲಾಖೆಯ ಹೆಸರು ಬಹುಪಾಲು ಜನರಿಗೆ ಗೊತ್ತಿರಲಿಲ್ಲವೋ ಅಂತಹ ಒಂದು ಇಲಾಖೆಯನ್ನು ತುಂಬಾ ಜನಪ್ರಿಯ ಇಲಾಖೆಯನ್ನಾಗಿ ಮಾಡಿದ್ದು ಕೂಡ

ಅವರ ಒಂದು ಪ್ರತಿಭೆ ಮತ್ತು ದಕ್ಷತೆಯ ಒಂದು ಪ್ರತೀಕವೆಂದು ಹೇಳಬಹುದು. ಆ ಇಲಾಖೆ ಪರಿಸರ ಇಲಾಖೆ ಅವರ ಕಾಲದಲ್ಲಿ ಏನು ಒಂದು ಮಹತ್ವ ಅವರ ಕಾಲದಲ್ಲಿ ಪಡೆಯಿತು ಆ ಒಂದು ಮಹತ್ವ ಮುಂದುವರಿಯಬೇಕು ಎಂದು ನಾನು ಪ್ರಾರ್ಥನೆ ಮಾಡುತ್ತೇನೆ. ಏಕೆಂದರೆ ಪರಿಸರದ ಅಗತ್ಯ ಆ ಪ್ರಾಮುಖ್ಯತೆ. ಪರಿಸರದ ಮಾಲಿನ್ಯದ ವಿರುದ್ಧ ಹೋರಾಟ ಮಾಡುವಂಥಾದ್ದು, ಪರಿಸರವನ್ನು ಕಾಪಾಡಿಕೊಳ್ಳತಕ್ಕ ಮಹತ್ವವನ್ನು ಕೊನೆಗಾಲದಲ್ಲಿ ಅವರು ನಮಗೆ ತೋರಿಸಿಕೊಟ್ಟಿದ್ದಾರೆ. ಅದು ಮುಂದುವರಿಯಬೇಕೆಂದು ಹೇಳುತ್ತಾ, ಅವರ ವಿಶಿಷ್ಟವಾದ ಕಳಕಳಿ ಮತ್ತು ಅವರ ಬದ್ಧತೆಯಿಂದ ರಾಜಕಾರಣಕ್ಕೂ ಕೂಡ ಘನತೆ ಮತ್ತು ಅರ್ಥವತ್ತತೆಯನ್ನು ತಂದುಕೊಟ್ಟಿದ್ದಾರೆ. ಹಿರಿಯ ಸದಸ್ಯರಾದ ಮಾನ್ಯ ನರಸಿಂಹಮೂರ್ತಿಯವರು ಹೇಳಿದಂತೆ ಅವರಿಗೆ ಖಂಡಿತವಾಗಿಯೂ ನಮ್ಮ ರಾಜ್ಯ ಸರ್ಕಾರ ಒಂದು ಸ್ಮಾರಕವನ್ನು ನಿರ್ಮಾಣ ಮಾಡಬೇಕೆಂದು ನಾನೂ ಕೂಡ ದನಿಗೂಡಿಸುತ್ತೇನೆ. ಇವರ ನೆನಪು ನಮ್ಮಲ್ಲಿ ಸದಾ ಹಸುರಾಗಿರಲಿ, ಇವರ ಅಭಿಪ್ರಾಯಗಳನ್ನು ಇವರ ಶಕ್ತಿಯನ್ನು ಇವರ ಪ್ರತಿಭೆಯನ್ನು ನಾವು ಮತ್ತೆ ಬೇರೆ ರೂಪದಲ್ಲಿ ಕಾಣುವಂತಾಗಲಿ ಅಂತ ಇವರೆಲ್ಲರಿಗೂ ನಾನು ತಮ್ಮ ಮೂಲಕ ನಮನವನ್ನು ಸಲ್ಲಿಸಿ ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಟಿ.ಕೆ. ಚಿನ್ನಸ್ವಾಮಿ (ಉಪಾಧ್ಯಾಯರ ಕ್ಷೇತ್ರ):–** ಮಾನ್ಯ ಉಪಸಭಾಪತಿಯವರೆ, ದಿವಂಗತರಾದ ಶ್ರೀ ಬಸವಲಿಂಗಪ್ಪನವರ ಬಗ್ಗೆ ಅನೇಕ ಜನ ಮಾನ್ಯಸದಸ್ಯರುಗಳು ಮಾತನಾಡಿದ್ದಾರೆ. ನಾನು ಕಂಡಂತೆ ಅವರು ಒಬ್ಬ ಧೀಮಂತನಾಯಕ ನನ್ನ ಅನಿಸಿಕೆಯಲ್ಲಿ ಅವರು 'ಕರ್ನಾಟಕದ ಅಂಬೇಡ್ಕರ್' ಎಂದು ಹೇಳಿದರೆ ಅತಿಶಯೋಕ್ತಿಯಲ್ಲ. ಏಕೆಂದರೆ, ಡಾ॥ ಅಂಬೇಡ್ಕರ್‌ರವರು ಯಾವ ಆದರ್ಶಗಳನ್ನು ಬಿಟ್ಟುಹೋಗಿದ್ದರೋ ಆ ಆದರ್ಶಗಳೆಲ್ಲವನ್ನೂ ಅವರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರು. ಇದಕ್ಕೊಂದು ಉದಾಹರಣೆ ಹೇಳುವುದಾದರೆ ಈ ಸದನದ ವಿರೋಧ ಪಕ್ಷದ ನಾಯಕರು ಒಂದು ಸಲ ಅವರು ಸ್ಥಾಪಿಸಿದ ನಾಗಸೇನಾ ಸಂಸ್ಥೆಯ ಬಗ್ಗೆ ಪ್ರಸ್ತಾಪ ಮಾಡಿದಂಥ ಆ ಸಮಯದಲ್ಲಿ ಅದರ ಬಗ್ಗೆ ಭಾರಿ ವಾದ–ವಿವಾದಗಳು ನಡೆಯಿತು. ನಾನು ಅವರ ನಾಗಸೇನ ಸಂಸ್ಥೆಗೆ ಭೇಟಿಯನ್ನು ಕೊಟ್ಟಿದ್ದೆ. ಆ ಸಂಸ್ಥೆಯಲ್ಲಿ ಶ್ರೀ ಬಸವಲಿಂಗಪ್ಪನವರು ಮಾಡಿದಂಥ ಕೆಲಸ–ಕಾರ್ಯಗಳನ್ನು ನೋಡಿದರೆ ನಿಜವಾಗಿಯೂ ಅವರು ವಕೀಲರಾಗಿದ್ದರೂ ಕೂಡ ಶಿಕ್ಷಣದ ಬಗ್ಗೆ ಎಂತಹ ಪ್ರೇಮವಿತ್ತು ಎನ್ನುವುದನ್ನು ಯಾರಾದರೂ ಕಾಣಬಹುದು. ಪ್ರತಿಯೊಬ್ಬರೂ

ಅವರನ್ನು ನೋಡಿ ಸರಿಯಾಗಿ ಅರ್ಥಮಾಡಿಕೊಂಡಿದ್ದರೆ ಅವರ ಆದರ್ಶಗಳು ಎಂತಹವು ಎಂಬುದನ್ನು ಕಾಣಬಹುದಾಗಿತ್ತು. ಅಂತಹ ಒಬ್ಬ ಶಿಕ್ಷಣ ಪ್ರೇಮಿಯಾಗಿದ್ದರು ಶ್ರೀ ಬಸವಲಿಂಗಪ್ಪನವರು. ಅವರ ಬಗ್ಗೆ ಎಷ್ಟು ಹೇಳಿದರೂ ಕೂಡ ಅದು ಕಡಿಮೆಯೇ. ಅವರ ಆತ್ಮಕ್ಕೂ ಕೂಡ ದಯಾಮಯನಾದ ಭಗವಂತ ಬುದ್ಧ ದೇವ ಶಾಂತಿಯನ್ನು ಕೊಡಲೆಂದು ನಾನು ಪ್ರಾರ್ಥಿಸುತ್ತೇನೆ. ಅಲ್ಲದೆ, ಇನ್ನು ಅನೇಕ ನಮ್ಮ ನಾಡಿನ ರಾಷ್ಟ್ರದ ನಾಯಕರು ಗತಿಸಿದ್ದಾರೆ. ಅವರೆಲ್ಲರ ಅತ್ಮಕ್ಕೆ ಶಾಂತಿಯನ್ನು ಕೋರಿ ನನ್ನ ಮಾತುಗಳನ್ನು ಮುಗಿಸುತ್ತೇನೆ. ವಂದನೆಗಳು.

**ಶ್ರೀ ಬಿ.ಎಂ. ಮೆಣಸಿನಕಾಯಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):**– ಸನ್ಮಾನ್ಯ ಉಪ ಸಭಾಪತಿಯವರೇ, ತಾವು ತಂದಿರುವ ಸಂತಾಪ ಸೂಚಕ ನಿರ್ಣಯದಲ್ಲಿ ನಾನು ಸಹ ಭಾಗಿಯಾಗುತ್ತಾ ಗತಿಸಿರುವ ಎಂಟು ಜನ ಧುರೀಣರು ತಮ್ಮ ವೈಯಕ್ತಿಕವಾದ ಪ್ರತಿಭೆಯನ್ನು ಸಮಾಜಕ್ಕೆ ಅನೇಕ ರೀತಿಯಿಂದ ಕೊಡುತ್ತಾ ಬಂದಿದ್ದರೂ ಕೂಡ ನನಗೆ ಪರಿಚಯವಿದ್ದಂಥ ಮೂರು ಜನರ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದಕ್ಕೆ ಇಷ್ಟ ಪಡುತ್ತೇನೆ. ಮುಖ್ಯವಾಗಿ ಬಸವಲಿಂಗಪ್ಪನವರ ಬಗ್ಗೆ ನಮ್ಮ ಮಿತ್ರ ಸದಸ್ಯರು ಬಹಳ ಮಟ್ಟಿಗೆ ಅನೇಕ ರೀತಿಯಿಂದ ಅವರ ಗುಣಗಾನ ಮಾಡಿದ್ದಾರೆ. ಹೋದ ವರ್ಷ ಶ್ರೀ ಬಸವಲಿಂಗಪ್ಪನವರು ಧಾರವಾಡಕ್ಕೆ ಬಂದಂಥ ಸಂದರ್ಭದಲ್ಲಿ, ಅವರು ಸರ್ಕ್ಯೂಟ್ ಹೌಸ್‌ನಲ್ಲಿ ತಂಗಿದ್ದಾಗ, ಅವರನ್ನು ಭೇಟಿಯಾಗಬೇಕೆಂದು ನಾನು ಕೇಳಿದೆ. ಆಗ ಅವರ ಭೇಟಿ ಮಾಡುವ ಚೀಟಿಯನ್ನು ಕೊಟ್ಟಾಗ ಆ ಸಮಯದಲ್ಲಿ ನಡೆದ ಘಟನೆ ಬಗ್ಗೆ ನಾನು ಉದಾಹರಣೆ ಕೊಟ್ಟು ಹೇಳಬೇಕಾಗಿದೆ. ಚೀಟಿ ಕೊಟ್ಟ ನಂತರ ಅವರು ನನ್ನನ್ನು ಕರೆದು ಸಿಟ್ಟಿನಿಂದ ಏನು ಕೆಲಸ ಇದೆಯೆಂದು ಕೇಳಿದರು. ಏಕೆಂದರೆ, ಆ ಸಮಯದಲ್ಲಿ ಬಹಳಷ್ಟು ಜನ ಬಡ–ಬಗ್ಗರು, ಹೆಣ್ಣು ಮಕ್ಕಳು ತಮ್ಮ ತಮ್ಮ ಸಮಸ್ಯೆಗಳನ್ನು ತೋಡಿಕೊಳ್ಳುವುದಕ್ಕೆ ಬಂದಿದ್ದರಿಂದ ಅವರೆಲ್ಲರ ಸಮಸ್ಯೆಗಳನ್ನು ಕೇಳುವುದಕ್ಕೆ ಅವರು ಹೊರಗಡೆ ಕುಳಿತಿದ್ದರು. ಆಗ ನಾನು ಹೇಳಿದೆ, ನಾನು ಬಂದಿರುವುದು ನನ್ನ ವೈಯಕ್ತಿಕ ಸಮಸ್ಯೆಗಾಗಿ ಅಲ್ಲ, ಒಂದೇ ಒಂದು ನಿಮಿಷ ಭೇಟಿಗೆ ಅವಕಾಶ ಮಾಡಿಕೊಡಿ ಎಂದು ಕೇಳಿಕೊಂಡ ಕೂಡಲೇ ಅವರು ಹೊರಗೆ ಬಂದರು. ಆಗ ನಾನು ಹೇಳಿದೆ, ಈ ಪರಿಶಿಷ್ಟ ಜಾತಿ ಮತ್ತು ಜನಾಂಗ ಸಮಾಜದ ತುಳಿತಕ್ಕೆ ಒಳಗಾಗಿರುವವರಿಗೆ ತಾವು ಧುರೀಣರಾಗಿ ಅಂತದ್ದು ಕೆಲಸ ಇನ್ನೂ ಏನೂ ಮಾಡಿಲ್ಲ. ಅದಕ್ಕೆ ನಾನೊಂದು ತಮಗೆ ಸೂಚನೆ

ಕೊಡುತ್ತೇನೆಂದು ಹೇಳಿದೆ. ಪ್ರತಿಯೊಂದು ಹಳ್ಳಿಯೊಳಗೂ, ಪಟ್ಟಣದೊಳಗೂ ಅವರ ಜನಸಂಖ್ಯೆಯ ಅಂಕಿ ಅಂಶ ಸಿಗುತ್ತದೆ, ಉದಾಹರಣೆಗೆ ನಮ್ಮ ಒಂದು ಹಳ್ಳಿಯಲ್ಲಿ 15-20 ಹರಿಜನ ಗಿರಿಜನರ ಕುಟುಂಬಗಳಿರುತ್ತದೆ, ಅದನ್ನು ಸರ್ವೆ ಮಾಡಿಸಿ ರಿಜಿಸ್ಟರ್‌ನ್ನು ಮೆನ್‌ಟೇನ್ ಮಾಡಿ ಅಂಥ ಕುಟುಂಬಗಳಿಗೆ ನೇರವಾಗಿ ಸರ್ಕಾರದಿಂದ ಸೌಲಭ್ಯವನ್ನು ಕೊಡತಕ್ಕಂಥ ವ್ಯವಸ್ಥೆಯನ್ನು ಮಾಡಬೇಕೆಂದು ಅವರ ಮುಂದೆ ವಿನಂತಿ ಮಾಡಿಕೊಂಡೆ. ಆಗ ಅವರು ಕೂಡಲೆ ಇದೊಂದು ಬಹಳ ಒಳ್ಳೆಯ ವಿಚಾರ, ನಾನು ಸರ್ಕಾರದ ಜೊತೆ ಇದರ ಬಗ್ಗೆ ಚರ್ಚೆ ಮಾಡುತ್ತೇನೆಂದು ಹೇಳಿದರು, ಆದರೆ ಸರ್ಕಾರ ಅದನ್ನು ಇದುವರೆಗೂ ಮಾಡಲು ಆಗಿಲ್ಲ. ಈಗ ಅಂಥ ಒಂದು ಕೆಲಸವನ್ನು ಈ ಸರ್ಕಾರ ಮಾಡಬೇಕೆಂದು ಮತ್ತು ಅವರ ಆತ್ಮಕ್ಕೆ ಶಾಂತಿ ನೀಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಮತ್ತೊಂದು ದುರ್ದೈವದ ವಿಚಾರವೇನೆಂದರೆ ನಮ್ಮ ಸಮಾಜದೊಳಗೆ ಪರಿಶಿಷ್ಟ ಜನರೆಂದು ಯಾರು ಹರಿಜನ ಗಿರಿಜನರಿದ್ದಾರೋ ಅವರ ಉದ್ಧಾರಕ್ಕೆ ಅವರದೇ ಜನಾಂಗದ, ಸಮಾಜದ ಮುಖಂಡರು ಇರಬೇಕಾಗುತ್ತದೆ. ಇದು ನಮ್ಮ ದೌರ್ಭಾಗ್ಯ, ಬೇರೆ ಸಮಾಜದ, ಜನಾಂಗದ ಜನರು ಮುಖಂಡರಾಗಲು ಅವರು ಒಪ್ಪುವುದಿಲ್ಲ. ಅದನ್ನು ಮಾನ್ಯ ಭೀಮಣ್ಣಖಂಡ್ರೆಯವರು ಮತ್ತೊಮ್ಮೆ ಹುಟ್ಟಿ ಬರಬೇಕೆಂದು ಹೇಳಿದರು. ಆದ್ದರಿಂದ ಈಗ ಇದ್ದವರ ಪೈಕಿ ಯಾರಾದರು ಅವರ ಸ್ಥಾನವನ್ನು ತೆಗೆದುಕೊಳ್ಳಬೇಕೆಂದು ಹೇಳುತ್ತಿದ್ದೇನೆ. ಮತ್ತೊಂದು ವಿಚಾರ ಏನೋ Difference of opinionನಿಂದ ಹಾಗೆ ಒಂದು ಸಾರಿ ಮಾನ್ಯ ನಾಣಯ್ಯನವರಿಗೂ ಬಸವಲಿಂಗಪ್ಪನವರಿಗೂ ಬಹಳ ಬಿರುಸಾಗಿ ವಾದ ನಡೆಯುತ್ತಿತ್ತು. ಕೊನೆಗೆ ಅವರು ತಡೆದು ತಡೆದೂ ಏನು ನಾಣಯ್ಯನವರೇ ದೇವರು ನಿಮ್ಮ ತಲೆಗೆ ಏನು ಬುದ್ಧಿಯನ್ನು ಕೊಟ್ಟಿದ್ದಾನೆ. ಅದನ್ನು ಸ್ವಲ್ಪ ಹೇಳುತ್ತೀರಾ? ಎಂದು ಕೇಳಿದ್ದರು. ಅಂದರೆ ಅವರಿಗೆ ಇವರ ಮಾತು ಸಾಕಾಗಿತ್ತು. ಅಂಥ ಒಂದು ಸಂದರ್ಭ ಅಂದು ಬಂದಿತ್ತು ಅಂದರೆ ಶಾಂತತೆಗೆ ಒಮ್ಮೊಮ್ಮೆ ಅವರಿಗೆ ತೊಂದರೆಯಾದರೆ ಬಹಳ ತಾಪ ಮಾಡಿಕೊಳ್ಳುತ್ತಿದ್ದರು. ಅವರ ಸಾವು ಬ್ರೇನ್‌ಹ್ಯಾಮರೇಜ್‌ನಿಂದ ಸಾವು ಆಯಿತು ಎಂದು ಕೇಳಿದ್ದೇನೆ. ಅವರು ಬಹಳ ವಿಚಾರವನ್ನು ಮಾಡುತ್ತಿದ್ದರು. ನಮಗೆ ಈವತ್ತಿನವರೆಗೆ ಅವರು ತೀರಿಕೊಂಡಿದ್ದಾರೆ ಎನ್ನತಕ್ಕ ಭಾವನೆ ಬರುವುದಿಲ್ಲ. ಅಷ್ಟೊಂದು ವ್ಯಕ್ತಿತ್ವ, ಅಂಥ ವ್ಯಕ್ತಿ ಅವರು. ಮತ್ತೆ ಅವರಿಗೆ ಬೇಜಾರಾಗಿದೆ ಇನ್ನೊಂದು ವಿಷಯವೇನೆಂದರೆ, ಹರಿಜನ ಗಿರಿಜನರಾದ ನಮಗೆ ಈ ಸಮಾಜದಲ್ಲಿ ಎಂದೂ

ಮುಕ್ತಿಯನ್ನು ಕೊಡುವುದಿಲ್ಲ, ನಮಗೆ ಯಾವಾಗಲೂ ಹಿಂದುಳಿದವರೆಂದು ಅರ್ಥಮಾಡಿಕೊಳ್ಳುತ್ತಾರೆ. ಅದೂ ಹರಿಜನರೆಂದೇ ಅರ್ಥ ಮಾಡಿಕೊಳ್ಳುತ್ತಾರೆ ಆದ್ದರಿಂದ ಬೌದ್ಧ ಧರ್ಮಕ್ಕೆ ಸೇರಿದರೆ ನಾವು ಮುಂದುವರೆದವರು ಆಗುತ್ತೇವೆ ಎನ್ನತಕ್ಕಂಥ ಅಭಿಪ್ರಾಯಕ್ಕೆ ಬಂದರು. ಆ ದೃಷ್ಟಿಯಿಂದ ನಾವು ಅವರ ನೋವನ್ನು ಕಡಿಮೆ ಮಾಡಬೇಕಾದರೆ, ಅದರ ನೋವಿಗೆ ಒಂದು ಉಪಚಾರ ಕೊಡಬೇಕಾಗಿದ್ದರೆ ಅವರೆಲ್ಲರನ್ನು ಸಮಾನ ಭಾವನೆಯಿಂದ ನೋಡಲು ಸರ್ಕಾರದವರು ನಾವು ಇದರ ಬಗ್ಗೆ ಹೆಚ್ಚಿನ ಆಸಕ್ತಿ ಕೊಡಬೇಕಾಗಿದೆ ಎಂದು ಹೇಳುತ್ತೇನೆ. ಅವರ ಗೌರವಾರ್ಥ ತಾವು ಮಾಡಿದಂಥ, ತಾವು ತಂದಂಥ ನಿರ್ಣಯಕ್ಕೆ ನಾನು ಪೂರ್ಣವಾಗಿ ಭಾಗಿಯಾಗಿ ಅವರ ಕುಟುಂಬಕ್ಕೆ ಇನ್ನೂ ಶಕ್ತಿ ಮತ್ತು ಧೈರ್ಯವನ್ನು ಕೊಡಲಿ ಎಂದು ದೇವರಲ್ಲಿ ಕೇಳಿಕೊಂಡು ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಬಿ.ಎಸ್. ಹೊರಟ್ಟಿ (ಶಿಕ್ಷಕರ ಕ್ಷೇತ್ರ):–** ಮಾನ್ಯ ಉಪ ಸಭಾಪತಿಯವರೆ, ತಾವು ತಂದಿರತಕ್ಕ ಈ ಸಂತಾಪ ಸೂಚನೆಯಲ್ಲಿ ಭಾಗವಹಿಸುವುದಕ್ಕೆ ಮತ್ತು ಅಸ್ತಂಗತವಾಗದಂತ ಎಲ್ಲ ಮಾನ್ಯ ಸದಸ್ಯರ ಬಗ್ಗೆ ಇಟ್ಟಿರುವ ಸಂತಾಪ ಸೂಚನೆಯಲ್ಲಿ ತಮ್ಮ ಜೊತೆ ನಾನೂ ಕೂಡ ಭಾಗವಹಿಸುತ್ತೇನೆ. ನಾಡಿನ ನಾನಾ ರಂಗದಲ್ಲಿ ಅಪರಿಮಿತವಾದ ಕೀರ್ತಿಯನ್ನು ಪಡೆದಂಥ ಎಲ್ಲಾ ಮಾನ್ಯ ಸದಸ್ಯರಿಗೂ ಈ ಸಂದರ್ಭದಲ್ಲಿ ನಾವು ಶ್ರದ್ಧಾಂಜಲಿಯನ್ನು ಅರ್ಪಿಸಬೇಕಾಗಿದೆ. ಅವರಲ್ಲಿರುವ ಗುಣಗಳನ್ನು ನಮ್ಮ ದಿನನಿತ್ಯದ ಜೀವನದಲ್ಲಿ ರೂಢಿಸಿಕೊಂಡು ಹೋಗಬೇಕೆಂದು ತಮ್ಮಲ್ಲಿ ನಾನು ಒತ್ತಾಯಪೂರ್ವಕವಾಗಿ ಕೇಳಿಕೊಳ್ಳುತ್ತಿದ್ದೇನೆ. ದಿವಂಗತರಾದ ಮಾನ್ಯ ಬಸವಲಿಂಗಪ್ಪನವರು ಇವರ ಬಗ್ಗೆ ಬಹಳಷ್ಟು ಜನ ಮಾನ್ಯ ಸದಸ್ಯರು ಮಾತನಾಡಿದ್ದಾರೆ. ನಾನು ಹೆಚ್ಚಿಗೆ ಮಾತನಾಡುವುದಕ್ಕೆ ಹೋಗುವುದಿಲ್ಲ. ಅವರು ಸಚಿವರಾಗಿದ್ದಾಗ ಜಿಲ್ಲಾ ಪರಿಷತ್ತಿನ ವಿಷಯ ಇಲ್ಲಿ ಬಂದಾಗ ಮಾನ್ಯ ಮೆಣಸಿನಕಾಯಿಯವರ ನೇತೃತ್ವದಲ್ಲಿ ಧಾರವಾಡದಲ್ಲಿ ಒಂದು ಸಭೆ ನಡೆಯಿತು. ಆಗ ನಾನು ಹೇಳಿದೆ, ನೀವು ಮಂತ್ರಿಗಳಾಗಿ ಈ ಜಿಲ್ಲಾ ಪರಿಷತ್ತಿನ ಕುತ್ತಿಗೆಯನ್ನು ಹಿಸುಕಿದಿರಿ ಅಂತ. ಅದಕ್ಕೆ ಅವರು ಒಂದು ಮಾತನ್ನು ಏನು ಹೇಳಿದರೆಂದರೆ ನಿಮಗೆ ಇದರ ಬಗ್ಗೆ ತಪ್ಪು ಕಲ್ಪನೆ ಇದೆ. ನಾವು ನಮ್ಮ ಅಧಿಕಾರವನ್ನು ಅಧಿಕಾರಿಗಳ ಕೈಗೆ ಕೊಟ್ಟಿದ್ದೇವೆ. ಆದ್ದರಿಂದ ಅದನ್ನು ನಾವು ಎಚ್ಚರಿಕೆಯಿಂದ ನೋಡುತ್ತಿರಬೇಕು ಅಂತ. ಏಕೆಂದರೆ ಸತ್ತ ಮೀನು ಪ್ರವಾಹದ ಜೊತೆಗೆ ತೇಲುತ್ತಾ ಹೋಗುತ್ತದೆ. ಆದರೆ ಜೀವಂತ ಪ್ರವಾಹದ ವಿರುದ್ಧ

ಈಜುತ್ತದೆ. ಅದೇ ರೀತಿ ನಾನೂ ಕೂಡ ಈಗ ಇದರ ವಿರುದ್ಧ ಈಜುವುದಕ್ಕೆ ಹತ್ತಿದ್ದೇನೆ. ಇದೆಲ್ಲಾ ಮುಗಿದ ಮೇಲೆ ಈ ಜಿಲ್ಲಾ ಪರಿಷತ್ತಿನ ವ್ಯವಸ್ಥೆ ಏನೆಂಬುದು ನಿಮಗೇ ಗೊತ್ತಾಗುತ್ತದೆಂದು ಹೇಳಿದರು. ನಾವು ಈ ಸದನದಲ್ಲಿ ಪ್ರಶ್ನೆಯನ್ನು ಕೇಳಿದಾಗ ಏನಾದರೂ ತಪ್ಪು ಉತ್ತರ ಬಂದರೆ ಈ ಉತ್ತರ ತಪ್ಪು ಎಂದು ನಾವು ಹೇಳಿದಾಗ ಇದು ನನಗೆ ಗೊತ್ತಿದೆ. ಇದು ಅಧಿಕಾರಿಗಳ ಉತ್ತರ, ನನ್ನ ಉತ್ತರವನ್ನು ನಾನು ಹೇಳುತ್ತೇನೆಂದು ಹೇಳುತ್ತಿದ್ದರು. ಅಷ್ಟೊಂದು ಧೈರ್ಯ ಇದ್ದಂಥ ಮಂತ್ರಿಗಳು ನಮ್ಮಲ್ಲಿ ಬಹಳಷ್ಟು ಕಡಿಮೆ ಎಂದು ನನ್ನ ಭಾವನೆ. ಈ ದೃಷ್ಟಿಯಿಂದ ನಾನು ಮಾನ್ಯ ಬಸವಲಿಂಗಪ್ಪನವರನ್ನು ಎಷ್ಟು ಶ್ಲಾಘಿಸಿದರು ಕಡಿಮೆ. ಅವರ ಮಾರ್ಗದರ್ಶನ ನಮ್ಮ ದಿನನಿತ್ಯದ ಜೀವನದಲ್ಲಿ ಬರಬೇಕೆಂದು ನಾನು ಹೇಳಬಯಸುತ್ತೇನೆ. ಅವರು ದಲಿತರ ನಾಯಕರು ಎಂದು ಅನೇಕ ಜನರು ಹೇಳುತ್ತಾರೆ. ಆದರೆ ಅದನ್ನು ನಾನು ಒಪ್ಪುವುದಿಲ್ಲ. ಅನೇಕ ಜನರು ಅವರನ್ನು ಶೋಷಿತ ವರ್ಗದ ನಾಯಕರೆಂದು ಹೇಳುತ್ತಾರೆ. ಇದನ್ನು ನಾನು ಒಪ್ಪಿಕೊಳ್ಳುತ್ತೇನೆ. ಬಹಳ ಹಿಂದಿನಿಂದಲೂ ಇದ್ದಂಥ ತಲೆಯ ಮೇಲೆ "ಮಲ ಹೊರುವ" ಪದ್ಧತಿಯನ್ನು ಈ ವ್ಯಕ್ತಿ ನಮ್ಮ ರಾಜ್ಯದಲ್ಲಿ ನಿಲ್ಲಿಸಿದರು. ಅನಂತರ ರಾಷ್ಟ್ರಮಟ್ಟದಲ್ಲೂ ಇದು ನಿಂತಿತು. ಇಂಥ ವಿಚಾರವಾದಿ ವ್ಯಕ್ತಿಯನ್ನು ನಾವು ಇಂದು ಅಗಲಿದ್ದೇವೆ. ನಿಧನರಾಗಿರುವ ಎಲ್ಲ ಮಹಾನ್ ವ್ಯಕ್ತಿಗಳಿಗೂ ಈ ಸದನ ತನ್ನ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತಿದೆ. ನಾನು ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಿದರೆ ಅದು ಈ ಸದನಕ್ಕೆ ಎಷ್ಟರ ಮಟ್ಟಿಗೆ ಹಿಡಿಸುತ್ತದೋ ಗೊತ್ತಿಲ್ಲ. ಇಂಥ ಮಹಾನ್ ವ್ಯಕ್ತಿಗಳು ನಿಧನರಾದಾಗ ಈ ಸಭೆಯನ್ನು ಮುಂದೂಡಿ ರಜೆಯನ್ನು ಕೊಡತಕ್ಕ ಪದ್ಧತಿ ಸರಿಯಲ್ಲವೆಂದು ನನಗನ್ನಿಸುತ್ತದೆ ಇಂಥ ಜನರು ನಿಧನರಾದಾಗ ಅವರ ಬಗ್ಗೆ ಇನ್ನಷ್ಟು ಶ್ರದ್ಧಾಂಜಲಿಯನ್ನು ಅರ್ಪಿಸಿ ಅವರ ಆತ್ಮಗಳಿಗೆ ಶಾಂತಿಯನ್ನು ಕೋರಬೇಕೆಂಬ ನನ್ನ ಅಭಿಪ್ರಾಯವನ್ನು ಈ ಸದನದ ಮುಂದಿಡುತ್ತಾ ದೈವಾಧೀನರಾದ ಎಲ್ಲ ಮಾನ್ಯ ಸದಸ್ಯರ ಆತ್ಮಗಳಿಗೂ ಶಾಂತಿ ದೊರೆಯಲಿ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಕರಂಬಳ್ಳಿ ಸಂಜೀವ ಶೆಟ್ಟಿ (ಪದವೀಧರರ ಕ್ಷೇತ್ರ):–** ಮಾನ್ಯ ಸಭಾಪತಿಯವರೆ, ಶ್ರೀ ಬಸವಲಿಂಗಪ್ಪನವರ ದೊಡ್ಡ ಸಾಧನೆ ಕೆಲಸದ ಬಗ್ಗೆ ಈ ಸದನದಲ್ಲಿ ಕೆಳ ಮನೆಯಲ್ಲೂ ಸಹ ಈ ರಾಜ್ಯದ ಎಲ್ಲಾ ಕಡೆ ಮುಕ್ತವಾಗಿ ಅವರನ್ನು ಹೊಗಳುತ್ತಾರೆ. ತಲೆ ಮೇಲೆ ಮಲ ಹೊರುವ ಪದ್ಧತಿಯನ್ನು ಇಲ್ಲಿಂದ ತೆಗೆದು ಹಾಕಿರತಕ್ಕಂತಹ ದೊಡ್ಡ ಕೀರ್ತಿ ಅವರಿಗೆ ಸಲ್ಲುತ್ತದೆ. ಇದೇ

ಸಂದರ್ಭದಲ್ಲಿ ನಮ್ಮ ಪಾರ್ಟಿಯ ಸಹಯೋಗ ಸಹಕಾರ ಕೊಡತಕ್ಕಂಥಾದ್ದು ಇದೆ. ಇದನ್ನು ಹೇಳತಕ್ಕಂಥಾದ್ದು ನಮಗೆ ಸಂತೋಷ ತಂದು ಕೊಡತಕ್ಕಂತಹ ವಿಚಾರವಾಗಿದೆ. ಆಗ ಉಡುಪಿಯಲ್ಲಿರತಕ್ಕಂತಹ ಮುನಿಸಿಪಾಲಿಟಿಯಲ್ಲಿ ನಮ್ಮ ಪಾರ್ಟಿ ಅಧಿಕಾರದಲ್ಲಿ ಇತ್ತು. ಮಲ ಹೊರತಕ್ಕಂತಹ ಪದ್ಧತಿಯನ್ನು ತೆಗೆದು ಹಾಕಬೇಕೆಂದು ತೀರ್ಮಾನ ಮಾಡಿದಾಗ ಅಲ್ಲಿಯ 'ನಗರ ಸಭೆ' ಅಧ್ಯಕ್ಷರು ಬಸವಲಿಂಗಪ್ಪನವರನ್ನು ಅವರ ಚೇಂಬರಿನಲ್ಲಿ ಭೇಟಿ ಮಾಡಿದ್ದರು. ಮಾತನಾಡುತ್ತಾ ನೀವು ಇದು ಉಚ್ಚಾಟನೆಯಾಗಬೇಕೆಂದು ಹೇಳಿದ್ದೀರಿ, ಇದಕ್ಕೆ ತಮ್ಮ ಕಾರ್ಯ ಯೋಜನೆ ಏನು ಇದೆ, ಎಂದು ಚರ್ಚೆ ಮಾಡಿದರು ಆಗ ಅವರು ಹೇಳಿದರು, ನಾವು ಸರಕಾರದ ಜತೆಯಲ್ಲಿ ಮಾತನಾಡುತ್ತಿರುವುದು ಗೊತ್ತಿರಬೇಕು ಎಂದು. ನಾನು ಒಂದು ಸಂಗತಿಯನ್ನು ಹೇಳಿದರೆ ಅದನ್ನು ಮುನಿಸಿಪಾಲಿಟಿಯವರು ಮಾಡಬೇಕು. ಕ್ಯಾರಿ ಔಟ್ ಮಾಡಬೇಕೆಂದು ನೆನಪಿಸಿದರು. ಆಗ ಮುನಿಸಿಪಾಲಿಟಿಯ ಅಧ್ಯಕ್ಷರಾಗಿದ್ದ ವಿ.ಎಸ್. ಆಚಾರ್ ಅವರು ಹೇಳಿದರು ತಾವು ಹೇಳಿದ್ದನ್ನು ಬಹಳ ಸುಲಭ ರೀತಿಯಲ್ಲಿ ಕಾರ್ಯಗತ ಮಾಡಲಿಕ್ಕೆ ನಮ್ಮ ಹತ್ತಿರ ಸಲಹೆ ಇದೆ ಅದಕ್ಕೆ ತಾವು ಬೆಂಬಲ ಕೊಟ್ಟು ಅದನ್ನು ಮಾಡಬಹುದು ಎಂದು ಹೇಳಿದ್ದಾರೆ. ಒಂದು ಸಲ ಚಾಲೆಂಜ್ ಮಾಡಲಿಕ್ಕೋಸ್ಕರ ಈಗಿರತಕ್ಕಂತ ಡ್ರೈಲೆಟ್ರಿನ್ಸ್ ಏನಿದೆ ಅದನ್ನು ಲೀಜ್ ಸಿಸ್ಟರಿಗೆ ಪರಿವರ್ತನೆ ಮಾಡಬೇಕಾಗುತ್ತದೆ ಪರಿವರ್ತನೆ ಮಾಡಬೇಕಾದ ಕೆಲಸಕ್ಕೆ ಮೋಟಿವೇಶನ್‌ಗೋಸ್ಕರ ನಮ್ಮ ಮುನಸಿಪಾಲಿಟಿಯಲ್ಲಿ ಯೋಚನೆ ಮಾಡಿದೆ ಅದಕ್ಕೆ ಬೇಕಾಗಿರತಕ್ಕಂಥ ಬೇಸಿನ್ ಫಿಟ್ಟಿಂಗ್ಸ್, ಎರಡು ಚೀಲ ಸಿಮೆಂಟ್ ಇವುಗಳನ್ನು ಯಾರು ಯಾರು ಕನ್‌ವರ್ಟ್ ಮಾಡುತ್ತಾರೆ ಈ ಲೆಟ್ರಿನ್‌ಗಳನ್ನು ಅದಕ್ಕೆ ನಾವು ಕೊಡಲಿಕ್ಕೆ ತಯಾರಿದ್ದೇನೆ ಇದಕ್ಕೆ ತಮ್ಮ ಒಪ್ಪಿಗೆ ಇದೆಯೇ? ಇದಕ್ಕೆ ತಮ್ಮ ಸಮರ್ಥನೆ ಇದೆಯೇ ಎಂದು ಕೇಳಿದ್ದರು. ಆ ಮೇಲೆ ಚರ್ಚೆ ಮಾಡಿದ ನಂತರ ಬಹಳ ಉತ್ತಮವಾಗಿರತಕ್ಕಂಥ ವಿಚಾರವಿದೆ. ತಾವು ಏನು ಮಾಡಲಿಕ್ಕೆ ಹೊರಟಿದ್ದೀರಿ ಅದಕ್ಕೆ ಸಂಪೂರ್ಣ ಸಮರ್ಥನೆ ಇದೆ. ನಾನು ಈ ರಾಜ್ಯದಲ್ಲಿರತಕ್ಕಂಥ ಬೇರೆ ಬೇರೆ ಮುನಿಸಿಪಾಲಿಟಿಗಳಿಗೂ ಸಹ ಇದನ್ನು ಸಲಹೆ ಮಾಡುತ್ತೇನೆ ಎನ್ನತಕ್ಕಂಥ ರೀತಿಯಲ್ಲಿ ಮಾಡಿದ್ದಾರೆ. ಆದ್ದರಿಂದ ಘೋಷಣೆಯನ್ನು ಕಾರ್ಯಗತ ಮಾಡಲಿಕ್ಕೆ ಅನುಷ್ಠಾನಕ್ಕೆ ತರಲಿಕ್ಕೆ ಎಷ್ಟು ಕಳಕಳಿ ಬೇಕೋ ಎಷ್ಟು ಗ್ರಹವು ಬೇಕು. ಅವರು ಅಷ್ಟು ಗ್ರಹದಿಂದ ಕೂಡಿದ ವ್ಯಕ್ತಿ ಎಂದು ಹೇಳಿ ಅವರನ್ನು ಅಭಿನಂದನೆ ಮಾಡುತ್ತಾ ಅವರಿಗೆ ಶ್ರದ್ಧಾಂಜಲಿಯನ್ನು ಈ ಸದನದಲ್ಲಿ ಸಲ್ಲಿಸಲಿಕ್ಕೆ ನಾನು ಬಯಸುತ್ತೇನೆ.

ಶ್ರೀ ಎಂ.ಎಸ್. ಕಟಗಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):- ಸನ್ಮಾನ್ಯ ಸಭಾಪತಿಯವರೆ, ಸಮಾಜದ ಅನೇಕ ಕ್ಷೇತ್ರಗಳಲ್ಲಿ, ಸಾಮಾಜಿಕ, ರಾಜಕೀಯ, ಸಾಹಿತ್ಯ ಮತ್ತು ಸಂಗೀತ ಈ ಕ್ಷೇತ್ರಗಳಲ್ಲಿ ಅಪಾರವಾದಂಥ ಅಪರಿಮಿತವಾದಂಥ ಒಂದು ಕೊಡುಗೆಯನ್ನು ಸೇವೆಯನ್ನು ಸಲ್ಲಿಸಿ ಕಣ್ಮರೆಯಾದಂಥ ಎಂಟು ಜನ ಮಹಾನ್ ವ್ಯಕ್ತಿಗಳ ಬಗ್ಗೆ ತಾವು ಈ ಸದನದಲ್ಲಿ ಮಂಡಿಸಿದಂಥ ಒಂದು ನಿರ್ಣಯಕ್ಕೆ ನಾನು ಕೂಡ ಭಾಗಿಯಾಗಿ ಕೆಲವೇ ಮಾತುಗಳನ್ನು ಈವರೆಗೆ ಪುರುಕ್ತಿಯಾಗದ ರೀತಿಯಲ್ಲಿ ಮತ್ತು ಈವರೆಗೆ ಅನೇಕ ಮಹನೀಯರು ಹೇಳಿದ ಮಾತುಗಳನ್ನು ಬಿಟ್ಟು ಕೆಲವು ಮಾತುಗಳನ್ನು ಹೇಳಲು ಅಪೇಕ್ಷಿಪಡುತ್ತೇನೆ. ವಿಶೇಷವಾಗಿ ಮಾನ್ಯ ಬಸವಲಿಂಗಪ್ಪನವರ ಸಂಪರ್ಕ ನನಗೂ 20 ವರ್ಷದಿಂದ ಇತ್ತು. ಅವರ ಅನೇಕ ವಿಚಾರಗಳನ್ನು ನಾನು ಕೂಡ ಮನಸ್ಸಿನಲ್ಲಿಟ್ಟು ಎಲ್ಲ ಅವರ ವಿಚಾರ ಮತ್ತು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದೇನೆ. ಈ ತಲೆ ಮೇಲೆ ಮಲ ಹೊರುವಂಥ ಪದ್ಧತಿ ಏನಿತ್ತು. ಅದರ ಬಗ್ಗೆ ಮುನಿಸಿಪಾಲಿಟಿ ಅಧ್ಯಕ್ಷನಾಗಿದ್ದಾಗ, ಆ ಪದ್ಧತಿಯನ್ನು ನಿರ್ಮೂಲನಗೊಳಿಸಲು ಪ್ರಯತ್ನಿಸಿದೆವು. ಅವರು ಅಂಥ ಒಂದು ಕ್ರಾಂತಿಕಾರಕ ಕಾರ್ಯಕ್ರಮವನ್ನು ಈ ಕರ್ನಾಟಕದಲ್ಲಿ ಪ್ರಾರಂಭ ಮಾಡಿದಂಥ ವ್ಯಕ್ತಿ. ಇವತ್ತು ಅವರ ಹೆಸರಿನಲ್ಲೇ ಆ ಕಾರ್ಯಕ್ರಮ ಇಡೀ ದೇಶದಲ್ಲಿಯೇ ಜಾರಿಯಾಗಬೇಕಾಗಿದೆ. ಅದಕ್ಕಾಗಿ ನಮ್ಮ ಸರ್ಕಾರವನ್ನು ಕೇಳುತ್ತಿದ್ದೇನೆ, ಕೇಂದ್ರದವರಿಗೆ ಇವತ್ತು ಈ ಬಸವಲಿಂಗಪ್ಪನವರು ಇಂಥ ಮಲ ಹೊರುವ ಒಂದು ಕಾರ್ಯಕ್ರಮವನ್ನು ರದ್ದು ಮಾಡಿದರು. ಆ ಕಾರ್ಯಕ್ರಮ ಈ ರಾಷ್ಟ್ರದಾದ್ಯಂತ ಮಾಡುವಂಥದ್ದನ್ನು ಕೇಂದ್ರ ಸರ್ಕಾರದವರು ಮಾಡಬೇಕು. ಅದಕ್ಕೆ ಒಂದು ಸಲಹೆಯನ್ನು ಅವರ ಹೆಸರಿನಲ್ಲಿ ಆ ಕಾರ್ಯಕ್ರಮ ನಡೆಯತಕ್ಕಂಥದ್ದು ಮಾಡಬೇಕು. ಟಿ.ವಿ. ಕಾರ್ಯಕ್ರಮ, ಬಸವಲಿಂಗಪ್ಪನವರ ಕಾರ್ಯಕ್ರಮವೆಂದು ತಿಳಿದುಕೊಂಡು ಈ ದೇಶದಲ್ಲಿ ಅವರ ಹೆಸರು ಸ್ಮಾರಕವಾಗಿ ಉಳಿಯಬೇಕೆನ್ನುವ ದೃಷ್ಟಿಯಿಂದ ಒಂದು ಸಲಹೆಯನ್ನು ಕೂಡ ಈ ಸಂದರ್ಭದಲ್ಲಿ ಕೊಡಬಯಸುತ್ತೇನೆ. ವೇಳೆ ಜಾಸ್ತಿ ಇಲ್ಲದಿರುವುದರಿಂದ ಇಷ್ಟು ಕಾಲಾವಕಾಶ ಕೊಟ್ಟಿದ್ದಕ್ಕೆ ಮಾನ್ಯ ಸಭಾಪತಿಯವರಿಗೆ ವಂದಿಸಿ ಮೃತರ ಆತ್ಮಕ್ಕೆ ಶಾಂತಿ ಕೋರಿ ಭಗವಂತನು ಅವರ ಅಗಲಿಕೆಯಿಂದ ಉಂಟಾಗಿರುವ ತಾಪವನ್ನು ತಡೆದುಕೊಳ್ಳುವುದಕ್ಕೆ ಶಕ್ತಿ ಕೊಡಲಿ ಎಂದು ಪ್ರಾರ್ಥಿಸಿ ನನ್ನ ಮಾತು ಮುಗಿಸುತ್ತೇನೆ.

**ಹಂಗಾಮಿ ಸಭಾಪತಿಯವರು:-** ಸಂತಾಪ ಸೂಚಕ ನಿರ್ಣಯದ ಮೇಲೆ ಸದನದಲ್ಲಿ 17 ಜನರು ಮಾತನಾಡಿ ನಾನು ಮಂಡಿಸಿದ ನಿರ್ಣಯಕ್ಕೆ ಧ್ವನಿಗೂಡಿಸಿದ್ದೀರಿ. ನಾನು ನನ್ನದೇ ಆದ ಎರಡು ಮಾತುಗಳನ್ನು ಹೇಳಬೇಕೆಂದು ಅನ್ನಿಸುತ್ತದೆ. ಬಸವಲಿಂಗಪ್ಪನವರ ಜೀವನ ಅಂದರೆ ಕ್ರಾಂತಿಯ ಅಲೆಗಳನ್ನು ಎಬ್ಬಿಸುವ ರೀತಿಯಲ್ಲಿ ಜೀವನ ನಡೆಸಿದವರು. ಅಂಥವರ ನಿಧನ ವಾರ್ತೆ ಕೇಳಿ ನನಗೆ ಆಶ್ಚರ್ಯವಾಯಿತು. ಯಾವತ್ತೂ ಅಸ್ವಸ್ಥರಾಗಿರಲಿಲ್ಲ. ಅವರು ಆಕಸ್ಮಿಕವಾಗಿ ನಿಧನರಾದುದು ಕೇಳಿ ದಿಗ್ಭ್ರಮೆಯಾಯಿತು. ಅಂಥ ವ್ಯಕ್ತಿತ್ವವನ್ನು ತಾಳಿದವರು ಶ್ರೀ ಬಸವಲಿಂಗಪ್ಪನವರು. ಅವರು ಇವತ್ತು ನಮ್ಮನ್ನು ಅಗಲಿ ಹೋಗಿದ್ದಾರೆ. ಈ ಎಲ್ಲಾ ಮಹಾನ್ ವ್ಯಕ್ತಿಗಳಿಗೆ ನಾನೂ ಕೂಡಾ ಸಂತಾಪ ವ್ಯಕ್ತಪಡಿಸಿ ಎಲ್ಲಾ ಮಹಾನ್ ವ್ಯಕ್ತಿಗಳಿಗೆ ಈ ಸದನದ ಸಂತಾಪವನ್ನು ವ್ಯಕ್ತಪಡಿಸುತ್ತಾ ಮೃತರ ಆತ್ಮಕ್ಕೆ ಶಾಂತಿ ಕೋರುವ ಸಲುವಾಗಿ ಎರಡು ನಿಮಿಷ ಮೌನ ಆಚರಿಸಬೇಕೆಂದು ಕೇಳಿಕೊಳ್ಳುತ್ತೇನೆ.

(ಮೃತರ ಗೌರವಾರ್ಥ ಮಾನ್ಯ ಸದಸ್ಯರುಗಳು ಎರಡು ನಿಮಿಷಗಳ ಕಾಲ ಎದ್ದು ನಿಂತು ಮೌನವನ್ನು ಆಚರಿಸಿದರು)

ದಿವಂಗತರ ಕುಟುಂಬ ವರ್ಗದವರಿಗೆ ಸಂತಾಪ ಸೂಚಕ ನಿರ್ಣಯವನ್ನು ಕಳುಹಿಸಿಕೊಡಲಾಗುವುದು.

ಈಗ ಸಭೆಯು ಮೇಲೆದ್ದು ಮತ್ತೆ ನಾಳೆ ಮಧ್ಯಾಹ್ನ 12.15ಕ್ಕೆ ಸಮಾವೇಶಗೊಳ್ಳುವುದು.

(ಸದನವು ಮಧ್ಯಾಹ್ನ 3 ಗಂಟೆ 20 ನಿಮಿಷಕ್ಕೆ ಮುಕ್ತಾಯವಾಗಿ ಮತ್ತೆ ಗುರುವಾಗ 31ನೇ ಡಿಸೆಂಬರ್ 1992ರ ಮಧ್ಯಾಹ್ನ 12 ಗಂಟೆ 15 ನಿಮಿಷಕ್ಕೆ ಸೇರಲು ನಿಶ್ಚಯಿಸಿತು)

# ಭಾಗ – IV

## ಗಣ್ಯರ ದೃಷ್ಟಿಯಲ್ಲಿ ಶ್ರೀಯುತರು

**ಡಾ. ಯು.ಆರ್. ಅನಂತಮೂರ್ತಿ**
ಬೆಂಗಳೂರು.

ಬಿ.ಬಸವಲಿಂಗಪ್ಪ ಅವರಿದ್ದ ಕಾಲದಲ್ಲಿ ಇಡೀ ರಾಷ್ಟ್ರದಲ್ಲೇ ಬಹಳ ದೊಡ್ಡ ದಲಿತ ನಾಯಕ ಅಂತ ಇದ್ದದ್ದು ನಮ್ಮ ಕರ್ನಾಟಕದಲ್ಲಿ ಅದು ಬಸವಲಿಂಗಪ್ಪನವರೇ. ನಾವು ಕ್ರಿಯೆಯ ವಿಷಯ ಹೇಳುತ್ತೇವೆ. ದಲಿತರು ಮಲಹೊರುವುದನ್ನು ಅದೆಷ್ಟು ನಿಶ್ಚಿತವಾದ ಕಾರ್ಯಕ್ರಮ ಮಾಡಿಕೊಂಡು ಅವರು ನಿಲ್ಲಿಸಿದರು. ಆಗ ಬಂದ ವಾಗ್ವಾದಗಳು, ಜನ ಕೋರ್ಟಿಗೆ ಹೋಗಿದ್ದು ಮತ್ತು ದೆಹಲಿಯಿಂದ ಇಂದಿರಾಗಾಂದಿ ಸರ್ಕಾರದಿಂದ ಒಬ್ಬರು ಬಂದು ಸದ್ಯಕ್ಕೆ ಇದಾಗದೆ ಇದ್ದರೆ ಕೊನೆ ಪಕ್ಷ ಒಂದು ಗಂಟೆಯಾದರೂ ಮಲ ತೆಗೆದುಕೊಂಡು ಹೋಗುವುದಕ್ಕೆ ಒಪ್ಪಬಹುದಲ್ಲ ಅಂತ ಅಂದಾಗ ಅದಕ್ಕೂ ಒಪ್ಪದೆ ಬಸವಲಿಂಗಪ್ಪನವರು ಅದನ್ನು ಸಾಧಿಸಿದ್ದು ನಮ್ಮ ಕಾಲದ ದೊಡ್ಡ ಸಾಧನೆ ಎಂದು ಹೇಳಬಹುದು.

ನಾನು ಮೊದಲು ಅವರನ್ನು ನೋಡಿದ್ದು ಗೋಪಾಲಗೌಡರ ಜೊತೆ. ಅವರ ಮನೆಗೆ ಹೋಗಿ ಬರುತ್ತಿದ್ದ ಗೋಪಾಲ್ ಜೊತೆ ಗಂಟೆಗಟ್ಟಲೆ ನಾವು ನಮಗೆ ಪ್ರಿಯವಾದ ವಿಚಾರಗಳನ್ನು ಅವರ ಜೊತೆ ಮಾತಾಡುತ್ತಿದ್ದೆವು. ಅವರು ಎಷ್ಟು ದಲಿತರ ಸಕ್ರಿಯ ನಾಯಕರೊ ಅಷ್ಟೇ ಧೀಮಂತ ವ್ಯಕ್ತಿಯೂ ಆಗಿದ್ದರು. ಚರಿತ್ರೆಯನ್ನು ಚೆನ್ನಾಗಿ ಓದಿದ್ದು, ರಾಜಕೀಯ ಸಿದ್ದಾಂತಗಳ ಬಗ್ಗೆ ಯೋಚನೆ ಮಾಡಿದ್ದರು, ಬಹಳ ಮುಖ್ಯವಾಗಿ ಹೇಳಬೇಕಾಗಿದ್ದು ಅವರು ನಿಜವಾದ ಕ್ರಾಂತಿಕಾರರಾಗಿದ್ದರಿಂದ ಜಾತಿವಾದಿಯಾಗಿರಲಿಲ್ಲ. ಅದಕ್ಕೆ ಅವರಿಗೆ ಯಾರು ಬೇಕಾದರೂ ಪ್ರಿಯರಾಗುತ್ತಿದ್ದರು. ನಾನು ಜಾತಿಯಲ್ಲಿ ಬ್ರಾಹ್ಮಣ; ಅವರಿಗೆ ಅದೇನೂ ತೊಡಕಿನ ವಿಷಯವಾಗಿರಲಿಲ್ಲ. ಗೌಡರು ಲಿಂಗಾಯತರು ಬೇರೆ ಯಾವ ಜಾತಿಯವರೇ ಆಗಲಿ ಸ್ನೇಹಕ್ಕೆ ಪ್ರೀತಿಗೆ ಯಾವುದೇ ಅಡ್ಡಿ ಇಲ್ಲದೆ ಯಾವ ಅನುಮಾನವೂ ಇಲ್ಲದಂತೆ ವ್ಯವಹರಿಸುತ್ತಿದ್ದರು. ಒಮ್ಮೆ ಅವರು ಕನ್ನಡ ಸಾಹಿತ್ಯದಲ್ಲಿ ಬೂಸಾನೆ ಹೆಚ್ಚಿದೆ ಎಂದು ಅವರಾಡಿದ ಮಾತಿಗೆ

ವಿರೋಧ ಬಂದುದನ್ನು ನೋಡಿ ಅವರ ಮಾತನ್ನು ಬೆಂಬಲಿಸಿ ನಾನು ಪತ್ರಿಕೆಗೆ ಒಂದು ಕಾಗದ ಬರೆದೆ. ಆದರೆ ಯಾವ ಪತ್ರಿಕೆಯಾದರೂ ಅದನ್ನು ಪ್ರಕಟಿಸಲೇ ಇಲ್ಲ. ನಂತರ ಮಡಿಕೇರಿಯಲ್ಲಿ ಈ ಲಯನ್ಸ್‌ನವರು ನನ್ನನ್ನು ಒಂದು ಲಯನ್ಸ್ ಇಂಟರ್ ನ್ಯಾಷನಲ್ ಉದ್ಘಾಟನೆಗೆ ಕರೆದರು ಅಲ್ಲಿ ನಾನು ಇದೇ ವಿಷಯವನ್ನು ಮಾತಾಡಿದೆ. ಆ ಮೇಲೆ ಪ್ರಜಾವಾಣಿಯವರು ಪ್ರಕಟ ಮಾಡಿದರು. ನೋವನ್ನುಂಡ ಮನುಷ್ಯನಿಗೆ ಮತೀಯ ಭಾವನೆಗಳು ತುಂಬಿರುವ ಒಂದು ಸಾಹಿತ್ಯ ಹಾಗೆ ಬೂಸಾ ಅನ್ನಿಸೋದು ಸಹಜವಾದರೂ ಕನ್ನಡ ಭಾಷೆಯ ಮುಖಾಂತರವೇ ದಲಿತರ ಪ್ರಜ್ಞಾವಿಕಾಸ, ಪ್ರಜ್ಞಾಸ್ಫೋಟ ಎರಡೂ ಆಗಬೇಕು ಅನ್ನೋದರಿಂದ ಅದನ್ನು ಒಪ್ಪಲಿಕ್ಕೆ ನನಗಾಗುತ್ತಿರಲಿಲ್ಲ. ಆದರೆ ಬಸವಲಿಂಗಪ್ಪನವರು ಆಧುನಿಕ ಯುಗದ ಒಬ್ಬ ಮನುಷ್ಯ. ಆದ್ದರಿಂದ ಇಂಗ್ಲೀಷಿನ ಮುಖಾಂತರ ಹೊಸ ವಿಚಾರಗಳು ನಮಗೆ ಸಿಕ್ಕಿ ನಾವು ಬಿಡುಗಡೆ ಆಗುತ್ತೇವೆ ಅಂತ ತಿಳಿದವರು ಇದರಲ್ಲೂ ನಿಜವಿದೆ. ನಮ್ಮನ್ನು ಬಿಡುಗಡೆ ಮಾಡುತ್ತಿರುವುದು ಆಳವಾದ ಕ್ರಾಂತಿಕಾರಕ ವಿಚಾರಗಳು, ಅವರೊಬ್ಬ ದೊಡ್ಡ ಕ್ರಾಂತಿಕಾರಿಯಾಗಿದ್ದರು. ಆಗಾಗಿ ಬಿ.ಬಸವಲಿಂಗಪ್ಪ ಅವರು ನನ್ನ ಜೀವನದಲ್ಲಿ ಮರೆಯಲಾಗದ ವ್ಯಕ್ತಿಯಾಗಿ ಉಳಿದಿದ್ದಾರೆ.

**ಪ್ರೊ. ಕಾಳೇಗೌಡ ನಾಗವಾರ**
**ಮೈಸೂರು.**

ಶ್ರೀ ಬಿ. ಬಸವಲಿಂಗಪ್ಪ ಅವರಂತಹ ನಾಯಕರು ರಾಜಕೀಯ ಕ್ಷೇತ್ರದಲ್ಲಿ ತುಂಬಾ ಅಪರೂಪಕ್ಕೆ ಮಾತ್ರ ಸಿಗುತ್ತಾರೆ. ಅವರು ಬುದ್ಧ, ಬಸವ, ಅಂಬೇಡ್ಕರ್, ಲೋಹಿಯಾ ಮತ್ತು ಕುವೆಂಪು ಅವರ ಕೃತಿಗಳನ್ನು ಆಳವಾಗಿ ಓದಿಕೊಂಡಿದ್ದರು. ಸಾಮಾಜಿಕ ನ್ಯಾಯಕ್ಕಾಗಿ ಹಗಲಿರುಳೆನ್ನದೆ ದುಡಿಯುವ ಅಪಾರವಾದ ಕಳಕಳಿ ಅವರಲ್ಲಿ ಇತ್ತು. ಸಮಾಜದ ಏಳಿಗೆಗೆ ಮಾರಕವಾಗಿರುವ ಮೂಢನಂಬಿಕೆಗಳು ಮತ್ತು ಕಂದಾಚಾರಗಳನ್ನು ಅವರು ತೀವ್ರವಾಗಿ ವಿರೋಧಿಸುತ್ತಿದ್ದರು. ಜಾತಿಪದ್ಧತಿ, ಅಸ್ಪೃಶ್ಯತೆ ಹಾಗೂ ಲಿಂಗಭೇದನೀತಿಯ ಅನಾಹುತಗಳು ಕೊನೆಗೊಂಡು ಯಾವುದೇ ವ್ಯಕ್ತಿಯ ಸ್ವಾತಂತ್ರ್ಯ ಮತ್ತು ಸಮಾನತೆಯ ಹಕ್ಕುಗಳಿಗೆ ಕಿಂಚಿತ್ತೂ ಧಕ್ಕೆಯಾಗದಂತಹ ವಾತಾವರಣವು ನಮ್ಮ ರಾಷ್ಟ್ರದಲ್ಲಿ ನಿರ್ಮಾಣವಾಗಬೇಕೆನ್ನುವ ದೊಡ್ಡ ಕನಸನ್ನು ಅವರು ಕಾಣುತ್ತಿದ್ದರು.

ಮಲ ಹೊರುವ ಪದ್ಧತಿಯ ನಿಷೇಧ, ಉಳುವವನೇ ಭೂಮಿಯ ಒಡೆಯ, ಜಮೀನ್ದಾರಿ ಪದ್ಧತಿಯ ರದ್ದತಿ ನಿಯಮ ರೂಪಿಸುವಲ್ಲಿ ಶ್ರಮಿಸಿದವರಾಗಿದ್ದಾರೆ. ಬಸವಲಿಂಗಪ್ಪ ಅವರು ಅಂಬೇಡ್ಕರ್ ಮುಖಾಂತರ ಬೌದ್ಧ ಧರ್ಮವನ್ನು ಅರಿತು ಕೊಂಡಿದ್ದರು. ಅಂಬೇಡ್ಕರ್ ಅವರು ನಾಗಪುರದಲ್ಲಿ 1956 ರಲ್ಲಿ ಬೌದ್ಧ ಧರ್ಮಕ್ಕೆ ಸೇರಿದ್ದನ್ನು ಬಹಳ ಅಭಿಮಾನ ಪಟ್ಟುಕೊಂಡು ಪ್ರಭಾವಿತರಾಗಿದ್ದರು. ಅವರು ಬದುಕಿದ್ದ ಕಾಲದಲ್ಲಿ ಯಾವ ಮಠ ಮಾನ್ಯಗಳಿಗೂ ಭೇಟಿಕೊಡದೆ, ಪುರಸ್ಕರಿಸದೆ ದೂರ ಉಳಿದಿದ್ದರು.

**ಶ್ರೀ ವಿ. ಶ್ರೀನಿವಾಸ್ ಪ್ರಸಾದ್**
**ಮಾಜಿ ಕೇಂದ್ರ ಸಚಿವರು**
**ಮತ್ತು ಶಾಸಕರು, ಮೈಸೂರು.**

'ಏನ್ ಕನ್ನಡ ಕನ್ನಾಡಂತ ಬಡ್ಕೋತೀರಿ', ಕನ್ನಡ ಸಾಹಿತ್ಯದಲ್ಲಿ ಅವರ (ಬ್ರಾಹ್ಮಣರ) ಬರಹಗಳೇನಿದ್ದರೂ ಬೂಸಾ ಇದ್ದಂಗೆ, ಇಂಗ್ಲೀಷ್ ಬರಹಗಳಲ್ಲಿರುವ ಪ್ರೌಢಿಮೆ ಇಲ್ಲದ ಇವರ ಬರಹಗಳೆನಿದ್ದರೂ ದನ ತಿನ್ನೋಕೆ ಲಾಯಕ್ಕು ಎಂಬ ಮಾತುಗಳು 70ರ ದಶಕದಲ್ಲಿ ಬಸವಲಿಂಗಪ್ಪ ಅವರ ಅಸಹನೆಯಿಂದ ಹೊರಟ ಮಾತುಗಳೆಂಬುದನ್ನು ನೆನೆದರೇ ತಲ್ಲಣ ತರಂಗಗಳೇರ್ಪಡುತ್ತವೆ. ಕನ್ನಡ ಸಾಹಿತ್ಯ ಸೇವೆ ಎಂಬುದರ ಅಡಿ ಸೈ ಅನ್ನಿಸಿಕೊಂಡಿದ್ದವರೆಲ್ಲಗೂ ಆಗಿರಬಹುದಾದ ಆಘಾತವನ್ನು ಕಲ್ಪಿಸಿಕೊಳ್ಳುವುದೇ ಕಷ್ಟ. ಇಡೀ ಕನ್ನಡ ಸಾಹಿತ್ಯದಲ್ಲಿನ ಅವರ (ಬ್ರಾಹ್ಮಣರ) ಬರಹಗಳು ಬಹಿರಂಗವಾಗಿಯೇ ಕಟುಟೀಕೆಗೆ ಗುರಿಯಾದದ್ದು. ಆಮೇಲೆ? ರಾಜ್ಯದಾದ್ಯಂತ ಪ್ರಕ್ಷುಬ್ಧ ಪರಿಸ್ಥಿತಿ ಏರ್ಪಟ್ಟಿತಲ್ಲದೆ, ಸಂಪ್ರದಾಯ ಸಾಹಿತ್ಯ ಶರಣರು ಹೌಹಾರಿದರು. ಮರುದಿನದ ಪತ್ರಿಕೆಗಳಲ್ಲಿ ರಾರಾಜಿಸಿದ ಶೀರ್ಷಿಕೆ, ವಿವರಗಳಲ್ಲಿ ಅವರ (ಬ್ರಾಹ್ಮಣರ) ಬರಹಗಳು ಎಂಬ ಸೊಲ್ಲೇ ಮಂಗಮಾಯವಾಗಿ ಕನ್ನಡ ಸಾಹಿತ್ಯ ಬೂಸಾ ಎಂಬ ಶೀರ್ಷಿಕೆಯುಳ್ಳ ಬಸವಲಿಂಗಪ್ಪನವರ ಪದಗಳೇ ಕರ್ಣಕಠೋರವಾಗಿ ಮಾರ್ದನಿಸಿ ರಾಜ್ಯಾದ್ಯಂತ ಪ್ರತಿಭಟನೆ ವ್ಯಕ್ತವಾಗಲು ನಿಮಿತ್ತ ಮಾತ್ರವಾಯಿತು. ತಕ್ಷಣವೇ ದಲಿತ, ದಲಿತೇತರರ ನಡುವಿನ ಘರ್ಷಣೆಯಾಗಿ ಪ್ರತಿಫಲಿಸಿತು. ಮೈಸೂರಿನ ದಲಿತಬಾಂಧವರು ಮಾಡು ಇಲ್ಲವೆ ಮಡಿ ಎಂಬ ದೃಢ ನಿರ್ಧಾರ ಕೈಗೊಂಡೇ ಪ್ರತಿರೋಧ ಒಡ್ಡಲು ಪ್ರಾರಂಭಿಸಿದರು. ಆ ಹೊತ್ತಿಗಾಗಲೇ ನಾನು ಬಿ.ಸೋಮಶೇಖರ್ ಮತ್ತು ಮುಂತಾದ ಸಂಘಟಕರ ಮೇಲೆ 8–9 ಕೇಸುಗಳೇ

ದಾಖಲಾಗಿದ್ದವು. ಈ ವಿಷಯ ವಿಧಾನಮಂಡಲದಲ್ಲೂ ಪ್ರತಿಧ್ವನಿಸಿತು. ಒಳ ಹೊರಗಿನ ಒತ್ತಡಕ್ಕೆ ಮಣಿದ ದೇವರಾಜ ಅರಸರು ಬಸವಲಿಂಗಪ್ಪನವರನ್ನು ಸಚಿವ ಸಂಪುಟದಿಂಡಲೇ ಕೈ ಬಿಡುವ ನಿರ್ಧಾರ ತೆಗೆದುಕೊಂಡರು.

ಜಾತಿಯ ವಾಂಛಲ್ಯದಿಂದಲೇ ಮರು ಹುಟ್ಟು ಪಡೆಯುವ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಸಹಜವಾಗಿಯೇ ದಲಿತರು ದಲಿತೇತರರ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಇದೊಂದು ಕಾರಣದಿಂದಾಗಿಯೇ ಚುನಾಯಿತ ದಕ್ಷ ದಲಿತ ಪ್ರತಿನಿಧಿಯೊಬ್ಬರು ಅಧಿಕಾರದಿಂದ ಕೆಳಗಿಳಿಯಬೇಕಾಯಿತು. ಬಸವಲಿಂಗಪ್ಪನವರನ್ನು ಸಂಪುಟದಿಂದ ಕೈ ಬಿಟ್ಟ ಸುದ್ದಿ ಕಾಳ್ಗಿಚ್ಚಿನಂತೆ ಹರಡುತ್ತಿದ್ದಂತೆಯೇ ಜಾಗೃತಗೊಂಡ ದಲಿತ ಜನತೆ ರಾಜ್ಯಾದ್ಯಂತ ತೀವ್ರ ಪ್ರತಿಭಟನೆ ತೋರತೊಡಗಿತು. ಕೇವಲ ಹೊಂದಾಣಿಕೆ ಸ್ವರೂಪದ ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ತನ್ನ ಕುರ್ಚಿಗೆ ಭದ್ರವಾಗಿ ಅಂಟಿಕೊಂಡು, ತನ್ನ ಪ್ರಗತಿಯ ಕಡೆಗಷ್ಟೇ ಮುಖ ಮಾಡುವ ರಾಜಕಾರಣದ ಸಹಜ ಸ್ವಭಾವಕ್ಕೆ ತದ್ವಿರುದ್ಧವಾಗಿ ಕಟ್ಟಾ ಅಂಬೇಡ್ಕರ್‌ವಾದಿ, ಸಚಿವ, ದಲಿತ ಜನಪ್ರತಿನಿಧಿಯೊಬ್ಬ ಅಧಿಕಾರಕ್ಕಾಗಿ ರಾಜಿಮಾಡಿಕೊಳ್ಳದೇ ತಮ್ಮ ನಿಲುವಿಗೆ ಬದ್ಧರಾಗಿದ್ದುದು ಅಚ್ಚರಿ ಹುಟ್ಟಿಸುತ್ತದೆ. ಯಾರ ಮರ್ಜಿಗೂ ಕಾಯದೆ ಎಲ್ಲಾ ಸಂದರ್ಭಗಳಲ್ಲು ದಲಿತ ಪರ ಕಾಳಜಿ ಹೊಂದಿ, ಚಿಂತನೆಗಳನ್ನು ನಿರ್ಭಿಡೆಯಿಂದ ತರ್ಕಬದ್ಧವಾಗಿಯೇ ಮುಂದಿಡುತ್ತಿದ್ದ ಅವರ ರೀತಿಯೇ ಎದುರಾಳಿಗಳು ಉಸಿರೆತ್ತದಂತೆ ಮಾಡುತ್ತಿತ್ತು. ಕಾಂಗ್ರೆಸ್ ಪಕ್ಷದಲ್ಲಿದ್ದೂ ಪಕ್ಷದ ದಲಿತ ವಿರೋಧಿ ನೀತಿಗೆ ರಾಜಿ ಮಾಡಿಕೊಳ್ಳದ ವಿಶಿಷ್ಟ ರಾಜಕಾರಣಿಯೆಂದರೆ ಬಸವಲಿಂಗಪ್ಪನವರು ಮಾತ್ರ.

ಬಸವಲಿಂಗಪ್ಪ ಅವರು ದಲಿತರ ಆತ್ಮಾಭಿಮಾನವನ್ನು ಎತ್ತಿ ಹಿಡಿಯುವಲ್ಲಿ ತೋರಿದ ಪ್ರಬುದ್ಧತೆ ಮತ್ತು ಅವರ ಸುಧಾರಣೆಗಾಗಿ ಕೈಗೊಂಡ ಹಲವಾರು ಕ್ರಮಗಳು ಐತಿಹಾಸಿಕವಾಗಿಯೂ ಮಹತ್ವದ್ದಾಗಿವೆ. ಮಲ ಹೊರುವ ಅಮಾನುಷ ಪದ್ಧತಿಯ ನಿಷೇಧವನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿದ ಕೀರ್ತಿ ಬಸವಲಿಂಗಪ್ಪ ಅವರಿಗೇ ಸಲ್ಲಬೇಕು. ದೇವದಾಸಿ ಪದ್ದತಿ ಕುರಿತಂತೆ ಸದನದಲ್ಲಿ ಮಾಡಿದ ಭಾಷಣವು ದೇವದಾಸಿ ಪದ್ದತಿಯ ಕುತಂತ್ರವನ್ನು ಅಲ್ಲಗಳೆದು ಅದಕ್ಕೆ ಸಂಬಂಧಿಸಿದಂತೆ ಸೂಕ್ತ ಬದಲಾವಣೆಗಳನ್ನು ತರುವಲ್ಲಿ ಯಶಸ್ವಿಯಾದರು. ಬಸವಲಿಂಗಪ್ಪನವರ ಕಾರ್ಯವೈಖರಿ, ತನ್ನ ಜನತೆಯ ಹಿತದೃಷ್ಟಿ ತನ್ಮೂಲಕ ಸಮಾಜದ ಒಳಿತಿಗಾಗಿ ಕೈಕೊಂಡ ಸುಧಾರಣ ಕ್ರಮಗಳು ಇಂದಿಗೂ

ಚಿರಸ್ಮರಣೀಯವಾಗಿವೆ. ಅವರ ನಂತರ ಅವರು ಬಿಟ್ಟುಹೋದ ಸ್ಥಳವನ್ನು ಯಾವೊಬ್ಬ ದಲಿತ ನಾಯಕರೂ ಸಮರ್ಥವಾಗಿ ತುಂಬಲಿಲ್ಲವೆಂಬುದನ್ನು ವಿಷಾದದಿಂದಲೇ ಹೇಳಬೇಕಾಗಿದೆ.

**ಡಾ. ಸಿದ್ದಲಿಂಗಯ್ಯ**
**ಅಧ್ಯಕ್ಷರು**
**ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.**

ಬಸವಲಿಂಗಪ್ಪನವರು ಜಾಗೃತಿ ಜ್ಯೋತಿಯನ್ನು ಈ ನಾಡಿನ ಜನಮನದಲ್ಲಿ ಅದರಲ್ಲೂ ಶೋಷಿತ ವರ್ಗಗಳ ಹೃದಯದಲ್ಲಿ ಹಚ್ಚಿದ್ದಾರೆ, ಆ ಜ್ಯೋತಿ ಆರದಂತೆ ನೋಡಿಕೊಳ್ಳಬೇಕು. ಅದು ಸದಾ ಬೆಳಕನ್ನು ಚೆಲ್ಲುತ್ತಾ ಇರಬೇಕು. ಅದು ಆರಿ, ಮಂಕಾಗಬಾರದು. ಆದ್ದರಿಂದಲೇ ನಾವು ಮತ್ತೆ ಮತ್ತೆ ಅವರನ್ನು ನೆನಪು ಮಾಡಿಕೊಳ್ಳಬೇಕು. ಬಸವಲಿಂಗಪ್ಪನವರು ನಿಜವಾಗಲೂ ಕರ್ನಾಟಕದ ಅಂಬೇಡ್ಕರ್.

ಅವರು ಜೀವನದುದ್ದಕ್ಕೂ ಕೆಲವು ವಿಚಾರಗಳನ್ನು ನಂಬಿಕೊಂಡು, ಆ ವಿಚಾರಗಳನ್ನು ಹೇಳುತ್ತಾ ಅದರಿಂದ ಉಂಟಾದ ವಿವಾದಗಳನ್ನು ಕಂಡು ಸಂತೋಷಪಡುತ್ತಾ ಮತ್ತು ವರ್ಣರಂಜಿತವಾದ ಘಟನೆಗಳನ್ನು ಸೃಷ್ಟಿ ಮಾಡುತ್ತಾ ಇದ್ದರು. ವಿವಾದ ಅನ್ನುವುದು ಅವರಿಗೆ ಸಂತಸದ ವಿಷಯವಾಗಿತ್ತು. ಏಕೆಂದರೆ ಜನ ಮಂಕಾಗಿದ್ದಾರೆ, ಜನ ಯಾವುದೇ ಉತ್ಸಾಹ ಇಲ್ಲದೆ ಇದ್ದಾರೆ, ಇಂತ ಜನರಿಗೆ ಲವಲವಿಕೆ ಬರಬೇಕಾದರೆ ಏನಾದರೂ ಆಘಾತವನ್ನೇ ಕೊಡಬೇಕು ಎನ್ನುವುದರಲ್ಲಿ ಅವರಿಗೆ ನಂಬಿಕೆ ಇತ್ತು. ಒಂದು ಹೇಳಿಕೆಯನ್ನು ಕೊಟ್ಟು ಅದರಿಂದ ಗೊಂದಲ ಉಂಟಾದರೆ ಉಳಿದ ರಾಜಕಾರಣಿಗಳು ಮಾಡುವ ಹಾಗೆ ಕೂಡಲೇ ಅದನ್ನು ನಿರಾಕರಿಸುತ್ತಿರಲಿಲ್ಲ. ಏಕೆಂದರೆ ಆ ಹೇಳಿಕೆಯನ್ನು ಅವರು ಉದ್ದೇಶ ಪೂರ್ವಕವಾಗಿ ಕೊಟ್ಟಿರುತ್ತಿದ್ದರು. ಅದರಿಂದ ಉಂಟಾದ ಘರ್ಷಣೆ, ಚರ್ಚೆ, ಚಳುವಳಿಯನ್ನು ನೋಡಿ ಅವರಿಗೆ ಒಂದು ರೀತಿಯ ಸಂತೋಷವೇ ಆಗುತ್ತಿತ್ತು.

ಬಸವಲಿಂಗಪ್ಪನವರಿಂದ ನಾನು ಕಲಿತದ್ದು ಧೈರ್ಯ, ಹೋರಾಟದ ಮನೋಧರ್ಮವನ್ನು. ನಮ್ಮ ರಾಜ್ಯದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ

ನಡೆದ ಮೊದಲ ಹಲ್ಲೆ ಬೂಸಾ ಪ್ರಕರಣ. ತನಗೆ ಅನ್ನಿಸಿದ್ದನ್ನು ಹೇಳುವ ಹಕ್ಕು ಅದರಲ್ಲಿ ದಲಿತರಿಗೆ ಇಲ್ಲ. ಅನ್ನುವುದು ಬಹಳ ಚಿಂತಾಜನಕವಾದ ವಿಚಾರ. ಯಾರು ಏನುಬೇಕಾದರೂ ಹೇಳಬಹುದು. ಆದರೆ, ಒಬ್ಬ ದಲಿತ ಹೇಳಿದಾಗ ಜನ ಹುಷಾರಾಗಿಬಿಡುತ್ತಿದ್ದರು. ಬೂಸಾ ಪ್ರಕರಣವಂತೂ ಜಾಗೃತಿಯನ್ನು ಮೂಡಿಸಿದಂತಹ ಚಳುವಳಿ. ಆ ದಿನಗಳಲ್ಲಿ ಕಷ್ಟವಾದರೂ ಆನಂತರದ ದಿನಗಳಲ್ಲಿ ಅದರಿಂದ ಒಳ್ಳೆಯ ಫಲ ಸಿಕ್ಕಿದೆ. ಈ ಚಳುವಳಿ ದಲಿತರು ಮತ್ತು ಪ್ರಗತಿಪರ ಚಿಂತನೆಯಿರುವ ದಲಿತೇತರರನ್ನು ಒಟ್ಟಾಗಿ ಮಾಡಿದ ಹೋರಾಟವಾಗಿದೆ. ಈ ಚಳುವಳಿಯ ನಾಯಕತ್ವವನ್ನು ನಾನು ಬೆಂಗಳೂರಿನಲ್ಲಿ ವಹಿಸಿಕೊಂಡಿದ್ದೆ. ಹಾಗಾಗಿಯೇ ಅವರು ನನ್ನ ಜೀವನದಲ್ಲಿ ಮರೆಯಲಾಗದ ಚೇತನವಾಗಿ ಉಳಿದಿದ್ದಾರೆ.

# ಛಾಯಾಚಿತ್ರಗಳು



ರಾಜ್ಯದ ಅಭಿವೃದ್ಧಿ ಯೋಜನೆಗಳನ್ನು ಚರ್ಚಿಸುತ್ತಿರುವುದು




ಕರ್ನಾಟಕ ಬುದ್ಧ ದಮ್ಮ ಸಮಿತಿಯ ಕಾರ್ಯಕ್ರಮದಲ್ಲಿ ಕೆ.ಎಚ್. ರಂಗನಾಥ್,
ಮಲ್ಲಿಕಾರ್ಜುನ ಖರ್ಗೆ ಅವರೊಂದಿಗೆ



ವೀರೇಂದ್ರಪಾಟೀಲ್ ಉಪಸ್ಥಿತಿಯಲ್ಲಿ ಬೌದ್ಧ ಧರ್ಮ ಗುರು ದಲೈ ಲಾಮ್ ಅವರನ್ನು ಸನ್ಮಾನಿಸುತ್ತಿರುವುದು



ಚುನಾವಣಾ ಪ್ರಚಾರದಲ್ಲಿ ರಾಜೀವ್‌ಗಾಂಧಿಯವರೊಂದಿಗೆ




ಕಾರ್ಯಕ್ರಮವೊಂದರಲ್ಲಿ ಶ್ರೀ ಮಲ್ಲಿಕಾರ್ಜುನ ಖರ್ಗೆ ಹಾಗೂ ಡಾ. ಸಿದ್ದಲಿಂಗಯ್ಯನವರೊಂದಿಗೆ



ಡಿ. ದೇವರಾಜು ಅರಸು, ಇಂದಿರಾಗಾಂಧಿ ಅವರೊಂದಿಗೆ ಬಸವಲಿಂಗಪ್ಪ



ಶೋಷಿತ ಸಮುದಾಯದೊಟ್ಟಿಗೆ ಬಿ. ಬಸವಲಿಂಗಪ್ಪ



ಬಿ. ಬಸವಲಿಂಗಪ್ಪ ಅವರ ಸ್ಮರಣಾಚರಣೆಯಲ್ಲಿ ಸಮಾಧಿ ಬಳಿ ಅವರ ಮಗ
ಬಿ. ಪ್ರಸನ್ನಕುಮಾರ್ ಶಾಸಕರು ಮತ್ತು ಅನುಯಾಯಿಗಳು

## ಲೇಖಕರ ಪರಿಚಯ



ಶ್ರೀ ಸಿ. ಶಾಂತಯ್ಯ ಪುಟ್ಟಮಣಿ ಅವರ ಮೂರನೇಯ ಮಗನಾದ ಎಸ್. ನಾಗರಾಜು ಆದ ನಾನು ಮಾಂಬಳ್ಳಿ, ಯಳಂದೂರು ತಾಲ್ಲೂಕು ಚಾಮರಾಜನಗರ ಜಿಲ್ಲೆ. ಪಿ.ಯು.ಸಿ.ಯ ತನಕ ಕೊಳ್ಳೇಗಾಲದಲ್ಲಿ ವ್ಯಾಸಂಗ ಮಾಡಿ ನಂತರ ಪದವಿ ಶಿಕ್ಷಣವನ್ನು ಮೈಸೂರು ಮಹಾರಾಜ ಕಾಲೇಜಿನಲ್ಲಿ 1996ರಲ್ಲಿ ಮುಗಿಸಿ, ತದ ನಂತರ ಮೈಸೂರು ವಿಶ್ವವಿದ್ಯಾನಿಲಯದ ರಾಜ್ಯಶಾಸ್ತ್ರ ಅಧ್ಯಯನ ವಿಭಾಗದಲ್ಲಿ 1998ರಲ್ಲಿ ಸ್ನಾತಕೋತ್ತರ ಪದವಿಯನ್ನು ಪೂರೈಸಿ, ನಂತರ 1999 ರಿಂದ 2007ರವರೆಗೆ ಕೊಡಗು ಜಿಲ್ಲೆಯ ಶನಿವಾರಸಂತೆ ಪ್ರಥಮ ದರ್ಜೆ ಕಾಲೇಜಿನಲ್ಲಿ ರಾಜ್ಯಶಾಸ್ತ್ರ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ 2007ನೇ ಏಪ್ರಿಲ್ ನಿಂದ ರಾಜೀವ್‌ಗಾಂಧಿ ರಾಷ್ಟ್ರೀಯ ಶಿಷ್ಯ ವೇತನ ಪಡೆದು ರಾಜ್ಯಶಾಸ್ತ್ರ ಅಧ್ಯಯನ ವಿಭಾಗದಲ್ಲಿ ಡಾ.ಜೆ.ಸೋಮಶೇಖರ್ ಅವರ ಮಾರ್ಗದರ್ಶನದಲ್ಲಿ **ಕರ್ನಾಟಕ ರಾಜಕಾರಣದಲ್ಲಿ ದಲಿತ ನಾಯಕತ್ವ; ಬಿ.ಬಸವಲಿಂಗಪ್ಪ** ಅವರ ಕುರಿತ ಅಧ್ಯಯನ ಎನ್ನುವ ವಿಷಯ ಕುರಿತು ಸಂಶೋಧನ ಕಾರ್ಯ ನಿರ್ವಹಿಸಿ 2011ರಲ್ಲಿ ಪಿಎಚ್.ಡಿ ಪದವಿಯನ್ನು ಮೈಸೂರು ವಿಶ್ವವಿದ್ಯಾನಿಲಯದಿಂದ ಪಡೆದಿರುತ್ತಾರೆ. ಅಲ್ಲದೆ ವಿಮೋಚನಹಾದಿ, ಪ್ರಗತಿಪಥ, ಮಹಿಳಾ ಸಬಲಿಕರಣದ ವಿವಿದ ಹೆಜ್ಜೆಗಳು ಎನ್ನುವ ವೈಚಾರಿಕ ಬರಹಗಳುಳ್ಳ ಪುಸ್ತಕವನ್ನು ರಚಿಸಿರುತಾರೆ.

**ಡಾ. ಎಸ್. ನಾಗರಾಜು**

ಶ್ರೀ ಬಿ.ಬಸವಲಿಂಗಪ್ಪ ಅವರಂತಹ ನಾಯಕರು ರಾಜಕೀಯ ಕ್ಷೇತ್ರದಲ್ಲಿ ತುಂಬಾ ಅಪರೂಪಕ್ಕೆ ಮಾತ್ರ ಸಿಗುತ್ತಾರೆ. ಅವರು ಬುದ್ಧ, ಬಸವ, ಅಂಬೇಡ್ಕರ್, ಲೋಹಿಯಾ ಮತ್ತು ಕುವೆಂಪು ಅವರ ಕೃತಿಗಳನ್ನು ಆಳವಾಗಿ ಓದಿಕೊಂಡಿದ್ದರು. ಸಾಮಾಜಿಕ ನ್ಯಾಯಕ್ಕಾಗಿ ಹಗಲಿರಳೆನ್ನದೆ ದುಡಿಯುವ ಅಪಾರವಾದ ಕಳಕಳಿ ಅವರಲ್ಲಿ ಇತ್ತು. ಸಮಾಜದ ಏಳಿಗೆಗೆ ಮಾರಕವಾಗಿರುವ ಮೂಢನಂಬಿಕೆಗಳು ಮತ್ತು ಕಂದಾಚಾರಗಳನ್ನು ಅವರು ತೀವ್ರವಾಗಿ ವಿರೋಧಿಸುತ್ತಿದ್ದರು. ಜಾತಿಪದ್ಧತಿ, ಅಸ್ಪೃಶ್ಯತೆ ಹಾಗೂ ಲಿಂಗಭೇದನೀತಿಯ ಅನಾಹುತಗಳು ಕೊನೆಗೊಂಡು ಯಾವುದೇ ವ್ಯಕ್ತಿಯ ಸ್ವಾತಂತ್ರ್ಯ ಮತ್ತು ಸಮಾನತೆಯ ಹಕ್ಕುಗಳಿಗೆ ಕಿಂಚಿತ್ತೂ ಧಕ್ಕೆಯಾಗದಂತಹ ವಾತಾವರಣವು ನಮ್ಮ ರಾಷ್ಟ್ರದಲ್ಲಿ ನಿರ್ಮಾಣವಾಗಬೇಕೆನ್ನುವ ದೊಡ್ಡ ಕನಸನ್ನು ಅವರು ಕಾಣುತ್ತಿದ್ದರು. ಮಲಹೊರುವ ಪದ್ದತಿಯ ನಿಷೇದ, ಉಳುವವನೇ ಭೂಮಿಯ ಒಡೆಯ, ಜಮೀನ್ದಾರಿ ಪದ್ಧತಿಯ ರದ್ದತಿ ನಿಯಮ ರೂಪಿಸುವಲ್ಲಿ ಶ್ರಮಿಸಿದವರಾಗಿದ್ದಾರೆ. ಬಸವಲಿಂಗಪ್ಪ ಅವರು ಅಂಬೇಡ್ಕರ್ ಮುಖಾಂತರ ಬೌದ್ಧ ಧರ್ಮವನ್ನು ಅರಿತುಕೊಂಡಿದ್ದರು. ಅಂಬೇಡ್ಕರ್ ಅವರು ನಾಗಪುರದಲ್ಲಿ ೧೯೫೬ರಲ್ಲಿ ಬೌದ್ಧ ಧರ್ಮಕ್ಕೆ ಸೇರಿದ್ದನ್ನು ಬಹಳ ಅಭಿಮಾನಪಟ್ಟುಕೊಂಡು ಪ್ರಭಾವಿತರಾಗಿದ್ದರು.

